# ಮತಾಂತರ

## ಸತ್ಯದ ಮೇಲೆ ಹಲ್ಲೆ

ಎಸ್.ಎಲ್. ಭೈರಪ್ಪ, ನವರತ್ನ ರಾಜಾರಾಮ್, ಎಮ್. ಚಿದಾನಂದ ಮೂರ್ತಿ, ಅಜಕ್ಕಳ ಗಿರೀಶ ಭಟ್, ಪಿ.ಪಿ. ಹೆಗ್ಡೆ, ಆರ್. ಗಣೇಶ,
ಸ್ವಾಮಿ ದಯಾನಂದ ಸರಸ್ವತಿ, ಸುಮತೀಂದ್ರ ನಾಡಿಗ, ಎಸ್.ಆರ್. ಲೀಲಾ, ಎ. ಶ್ರೀನಿವಾಸಮೂರ್ತಿ, ಸಚ್ಚಿದಾನಂದ ಹೆಗಡೆ, ಡೇವಿಡ್ ಫ್ರಾಲಿ

# ಮತಾಂತರ

## ಸತ್ಯದ ಮೇಲೆ ಹಲ್ಲೆ

ವಿವಿಧ ವಿದ್ವಾಂಸರು

ಸಂಪಾದಕರು:
ಡಾ. ಪ್ರಧಾನ್ ಗುರುದತ್ತ

ಪ್ರಸ್ತಾವನೆ:
ಡಾ. ಸುಮತೀಂದ್ರ ನಾಡಿಗ

ಸಂಪಾದಕೀಯ ಸಂಯೋಜನೆ:
ಡಾ. ಜಿ.ಎಲ್. ಶೇಖರ್



PLATFORM OF INDIAN INTELLECTS
*www.indianintellects.org*


ಸಾಹಿತ್ಯ ಪ್ರಕಾಶನ
ಕೊಪ್ಪೀಕರ್ ಬೀದಿ, ಹುಬ್ಬಳ್ಳಿ: ೫೮೦ ೦೨೦

**Mataantara: satyada mele halle**

(Conversion : An Assault on Truth)

A collection of articles by Dr. S.L. Bhyrappa & other eminent scholars.

*Editor* : Dr. Pradhan Gurudatt

Platform of Indian Intellects

www.*indianintellects.org*

Published by: Sahitya Prakashana, Koppikar Road, Hubli:580 020.



ಪುಟಗಳು : ಡೆಮಿ 1/8 168 ಬೆಲೆ : ರೂ. 100/-

ಕಾಗದ ಬಳಕೆ: 70 gsm N/S. ಮ್ಯಾಪ್‌ಲಿತೊ

ಮುದ್ರಣ: ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು-೧೮

## ಸಂಪಾದಕೀಯ

"ಭಾರತೀಯರ ಆತ್ಮಗಳನ್ನು ಉದ್ಧರಿಸಲು ನೀವು ಬರಬೇಕಾದ ಅಗತ್ಯವಿಲ್ಲ. ನೀವು ಮಾಡಬೇಕಾಗಿರುವುದು ಬಡತನದಿಂದ ಅವರನ್ನು ಉದ್ಧರಿಸಬೇಕಾಗಿರುವ ಕಾರ್ಯ"- ಈ ಅರ್ಥದ ಮಾತುಗಳನ್ನು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಹೇಳಿದ್ದರು.

ಭಾರತದಲ್ಲಿ ಕಾಲಿರಿಸಿದ ಕ್ರಿಶ್ಚಿಯನ್ ಮಿಷನರಿಗಳು ಭಾರತೀಯರ ಅದರಲ್ಲಿಯೂ ಗುಡ್ಡಗಾಡಿನ ಜನರ ಅಜ್ಞಾನ, ಮೌಢ್ಯ ಮತ್ತು ಬಡತನವನ್ನು ದುರುಪಯೋಗಪಡಿಸಿ ಕೊಂಡು ಮತಾಂತರದ ಕಾರ್ಯವನ್ನು ಮುಂದುವರಿಸಿಕೊಂಡೇ ಬಂದಿದ್ದಾರೆ. ಪ್ರಲೋಭನೆಯ ವಿಚಾರದಲ್ಲಿಯೂ ಯಾವ ಅಸ್ತ್ರವನ್ನೂ ಅವರು ಬಳಸದೆ ಇಲ್ಲ. ಇದಕ್ಕೆ ಪ್ರತ್ಯಕ್ಷವಾದ ಮುಖ ಇರುವಂತೆ ಪರೋಕ್ಷವಾದ, ಪ್ರಚ್ಛನ್ನವಾದ ಮುಖಗಳೂ ಇವೆ. ಆಡಳಿತಶಾಹಿಯ ಅಭಯಹಸ್ತ ದೊರೆತ ಮೇಲಂತೂ ಅವ್ಯಾಹತವಾಗಿ, ಅವಿಚ್ಛಿನ್ನವಾಗಿ ಈ ಕಾರ್ಯ ನಡೆಯುತ್ತ ಬಂದಿದೆ. ಈಚಿನ ದಿನಗಳಲ್ಲಿ ಅದರ ಕರಾಳ ಮುಖಗಳು ಕಾಣಿಸಿಕೊಳ್ಳತೊಡಗಿದ ಮೇಲಂತೂ ಚಿಂತನಶೀಲರು ನಿದ್ದೆಗೆಡುವಂತಾಗಿದೆ. ಇದರ ಪರಿಣಾಮವಾಗಿಯೇ ಎಸ್.ಎಲ್. ಭೈರಪ್ಪನವರು ಕನ್ನಡ ನಾಡಿನ ಖ್ಯಾತ, ಕ್ರಾಂತಿಕಾರಿ ಮನೋಧರ್ಮದ ದಿನಪತ್ರಿಕೆಯಾದ 'ವಿಜಯ ಕರ್ನಾಟಕ'ದಲ್ಲಿ ಮತಾಂತರದ ಎಲ್ಲ ಮುಖಗಳನ್ನೂ ಅನಾವರಣಗೊಳಿಸುವ ಸುದೀರ್ಘ ಲೇಖನವನ್ನು ಪ್ರಕಟಿಸಿದರು. ಇದು ಕನ್ನಡ ನಾಡಿನಾದ್ಯಂತ ಅಭೂತಪೂರ್ವ ಸಂಚಲನವನ್ನೇ ಉಂಟು ಮಾಡಿತು. ಈ ಲೇಖನದ ಪರ-ವಿರುದ್ಧವಾಗಿ ಅನೇಕ ಪ್ರತಿಕ್ರಿಯೆಗಳು-ಪತ್ರಗಳ ರೂಪದಲ್ಲಿ, ಲೇಖನಗಳ ರೂಪದಲ್ಲಿ ವ್ಯಕ್ತವಾದವು. ಸಮಾಜದ ಮೌಲ್ಯಗಳ ಸಂರಕ್ಷಕರೇ ತಾವೆಂಬಂತೆ ಬೀಗುತ್ತಿದ್ದ ಸ್ವಯಂ ಘೋಷಿತ ಬುದ್ಧಿಜೀವಿಗಳ ಬಣ್ಣವೂ ಬಯಲಾಯಿತು. ಈ ಸಂದರ್ಭದಲ್ಲಿ ಮತಾಂತರದ ಈ ಪಿಡುಗಿನ ಸ್ವರೂಪವನ್ನು ವಸ್ತುನಿಷ್ಠವಾಗಿ ಮುಂದಿರಿಸುವಂಥ ಒಂದು ಸಂಕಲನವನ್ನು ಹೊರತರಬೇಕೆಂದು ಸಮಾಜದ ಅನೇಕ ಕ್ಷೇತ್ರಗಳಲ್ಲಿನ ಸಾಮಾಜಿಕ ಹಿತೈಷಿಗಳ ಕಾಳಜಿಯ ಫಲವಾಗಿ 'ಮತಾಂತರ-ಸತ್ಯದ ಮೇಲಿನ ಹಲ್ಲೆ' ಎಂಬ ಈ ಗ್ರಂಥ ಹೊರಬರುತ್ತಿದೆ. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ. 'ಭಾರತೀಯ ವಿಚಾರವಂತರ ವೇದಿಕೆ'ಯ ಈ ಸನ್ಮಿತ್ರರು ಈ ಸ್ತುತ್ಯರ್ಹವಾದ ಕಾರ್ಯಕ್ಕೆ ಕೈ ಹಾಕಿದ್ದಾರೆ.

(ವಾಮದೇವ ಶಾಸ್ತ್ರಿ) ಅವರ ಸಂವಾದಪೂರ್ವಕ ಲೇಖನವಂತೂ ನಮ್ಮ ಥೋಂಗಿ ವಿದ್ವಾಂಸರ ನೆಲೆಗಳನ್ನೇ ಧ್ವಂಸಗೊಳಿಸಿಬಿಡುವಂಥ ಅಣ್ವಸ್ತ್ರ ಸದೃಶ ದಾಳಿಯೇ ಆಗಿದೆ. ನ್ಯಾಯವಾದಿ ಶ್ರೀ ಪಿ.ಪಿ. ಹೆಗ್ಡೆಯವರ ಲೇಖನ ನಮ್ಮ ಕಾನೂನಿನ ದೌರ್ಬಲ್ಯಗಳನ್ನು ಬಯಲಿಗೆಳೆಯುತ್ತದೆ. ಸುಮತೀಂದ್ರ ನಾಡಿಗರ ಲೇಖನ ಬಹಳ ಹಿಂದೆಯೇ ಮಾಸ್ತಿಯವರಂಥ ಹಿರಿಯ ಲೇಖಕರು 'ಧರ್ಮ ಸಂರಕ್ಷಣೆ'ಯಂಥ ಕೃತಿಯ ಮೂಲಕ ಬಹಳ ಹಿಂದೆಯೇ ನಡೆಸಿದ ಪ್ರಯತ್ನದತ್ತ ನಮ್ಮ ಗಮನ ಸೆಳೆಯುತ್ತದೆ. ಶತಾವಧಾನಿ ಗಣೇಶ್ ಅವರು ನಾವು ಸಾಗಬೇಕಾಗಿರುವ ಸರಿಯಾದ ಪರಿಪ್ರೇಕ್ಷ್ಯ ಯಾವುದೆಂಬುದನ್ನು ಸಾರಿ ಹೇಳುತ್ತಾರೆ. ದಯಾನಂದ ಸರಸ್ವತಿಗಳಂಥ ಸಮಾಜ ಸುಧಾರಕರ ಲೇಖನ ಮತಾಂತರ ಎಂಥ ಘೋರ ದೌರ್ಜನ್ಯವೆಂಬುದನ್ನು ಬಯಲಿಗೆಳೆಯುತ್ತದೆ. ಈ ಸಮಸ್ಯೆಯ ಇತರ ಮುಖಗಳತ್ತ ಗಮನ ಸೆಳೆಯುವ ಪ್ರಯತ್ನ ಮಾಡಿದ್ದಾರೆ: ಶ್ರೀ ಗಿರೀಶ್ ಭಟ್, ಶ್ರೀ ಶ್ರೀನಿವಾಸ ಮೂರ್ತಿ, ಶ್ರೀ ಸಚ್ಚಿದಾನಂದ ಹೆಗಡೆ ಮತ್ತು ಡಾ. ಎಸ್.ಆರ್. ಲೀಲಾ. ಕೊನೆಯ ಲೇಖನದಲ್ಲಿ ಭೈರಪ್ಪನವರು ಈ ಸಂಬಂಧವಾಗಿ ವಿರೋಧಿಗಳು ಎತ್ತಿದ ಪ್ರಶ್ನೆಗಳಿಗೆ ಸಮರ್ಪಕವಾಗಿ, ಸಾಧಾರವಾಗಿ, ವಸ್ತುನಿಷ್ಠವಾಗಿ, ಪೂರ್ವಾಗ್ರಹಮುಕ್ತವಾಗಿ ಉತ್ತರಿಸಿದ್ದಾರೆ.

ಈ ಸಂಬಂಧವಾಗಿ ಬಂದ ಬಹುಸಂಖ್ಯೆಯ ಲೇಖನಗಳೆಲ್ಲವನ್ನೂ ಇಲ್ಲಿ ಸೇರಿಸಲಾಗಿಲ್ಲ. ಆಯಾ ಲೇಖನಗಳ ಹಕ್ಕು ಆಯಾ ಲೇಖಕರವಾಗಿರುವುದರಿಂದ ತಮ್ಮ ಲೇಖನಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿದ ಲೇಖಕರ ಲೇಖನಗಳನ್ನಷ್ಟೇ ಇಲ್ಲಿ ಸಂಕಲಿಸಲಾಗಿದೆ. ಹಲವಾರು ಕಾರಣಗಳಿಂದ ಎಲ್ಲ ಲೇಖಕರನ್ನೂ ಸಂಪರ್ಕಿಸಲು ಸಾಧ್ಯವಾಗಿಲ್ಲ. ವಿಷಯದ ಪುನರಾವರ್ತನೆಯಾಗದಂತೆ, ಹೆಚ್ಚಿನ ಪುರಾವೆ, ಆಧಾರಗಳನ್ನೊಳಗೊಂಡಿರುವ ಇನ್ನೂ ಅನೇಕ ಲೇಖನಗಳನ್ನು, ಬಹುಬೇಗ ಮರುಮುದ್ರಣಕ್ಕೆ ಬರಲಿದೆಯೆಂಬ ನಮ್ಮ ನಿರೀಕ್ಷೆಯಂತೆ, ಮುಂದಿನ ಆವೃತ್ತಿಯಲ್ಲಿ ಸೇರಿಸಿಕೊಳ್ಳಲು ಸಾಧ್ಯವಾದೀತೆಂದು ನಂಬಿದ್ದೇನೆ. ಅನುಮತಿ ನೀಡಿರುವ, ನೀಡಲಿರುವ ಎಲ್ಲ ಲೇಖಕರಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಸಮಕಾಲೀನ ಕಾಳಜಿಯ ಮಹತ್ವದ ಈ ವಿಷಯಕ್ಕೆ ಸಂಬಂಧಿಸಿದ ಲೇಖನಗಳ ಸಂಪಾದನೆ ಕಾರ್ಯವನ್ನು ನನಗೆ ವಹಿಸಿದ ಭಾರತೀಯ ವಿಚಾರವಂತರ ವೇದಿಕೆಯ ಎಲ್ಲ ಕಾರ್ಯಕರ್ತರಿಗೂ, ಮುದ್ರಣ ಕಾರ್ಯದಲ್ಲಿ ಸಹಕರಿಸಿರುವ ಎಲ್ಲ ಮಿತ್ರರಿಗೂ, ಪ್ರಕಾಶನದ ಹೊಣೆಯನ್ನು ಹೊತ್ತಿರುವ ಸಾಹಿತ್ಯ ಪ್ರಕಾಶನದ ಶ್ರೀ ಸುಬ್ರಹ್ಮಣ್ಯ ಅವರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಪ್ರಧಾನ್ ಗುರುದತ್ತ

೨೭, ಡಿಸೆಂಬರ್, ೨೦೦೮
೭೩೪, ೯ ಮತ್ತು ಎಫ್ ಬ್ಲಾಕ್,
ಮಹಾಜನಪಥ, ನಾಲ್ಕನೆಯ ತಿರುವು
ಕುವೆಂಪು ನಗರ, ಮೈಸೂರು ೫೭೦೦೨೩

# ಪ್ರಸ್ತಾವನೆ

ಚಿಕ್ಕಮಗಳೂರು ಜಿಲ್ಲೆಯ ಕಳಸದಲ್ಲಿ ನಾನು ಹುಟ್ಟಿದ್ದು ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೂ ಹನ್ನೆರಡು ವರ್ಷ ಮುಂಚೆ, 1935ರಲ್ಲಿ. ನಾನು ಪುಟ್ಟ ಹುಡುಗನಾಗಿದ್ದಾಗ ಸ್ವಾತಂತ್ರ್ಯ ಚಳವಳಿಯ ಪ್ರಭಾತಫೇರಿಗಳಲ್ಲಿ ಭಾಗವಹಿಸಿದ್ದೆ. ಮಿಲಿಟ್ರಿ ಲಾರಿಗಳು ಮಲೆನಾಡಿನ ಮೂಲೆಯಾದ ಕಳಸಕ್ಕೂ ಬಂದು ನನ್ನ ಬಾಲ್ಯದಲ್ಲಿ ಭಯ ಹುಟ್ಟಿಸಿದ್ದೂ ನನಗೆ ನೆನಪಿದೆ. ನನ್ನ ತಂದೆ ಶಿವಮೊಗ್ಗ ಜಿಲ್ಲೆಯಲ್ಲಿ ಪೊಲೀಸ್ ಕಾನ್ಸ್ಟೇಬಲ್ ಆಗಿ ಆಮೇಲೆ ಧಫೇದಾರರಾಗಿದ್ದಾಗ, ಸಾಗರದ ಹೈಸ್ಕೂಲ್ ಸೇರಿದ್ದಾಗ ಆರೆಸ್ಸೆಸ್ ಸೇರಿದ್ದೆ. ಗಾಂಧೀಜಿಯವರ ಕೊಲೆಯಾದಾಗ, ಆರೆಸ್ಸೆಸ್‌ನವರನ್ನು ದಸ್ತಗಿರಿ ಮಾಡುತ್ತಿದ್ದಾಗ ನನ್ನ ತಂದೆ ಆರೆಸ್ಸೆಸ್‌ಗೆ ಹೋಗಬೇಡವೆಂದರು; ನನ್ನ ಕಪ್ಪು ಟೋಪಿಯನ್ನು ಮತ್ತು ನನ್ನ ಅಜ್ಜನ ಕಾಲದ ಒಂದು ಕಠಾರಿ ಮನೆಯಲ್ಲಿದ್ದನ್ನು ನಾಶಮಾಡಿದರು. ಬ್ರಿಟಿಷ್ ಆಳ್ವಿಕೆಯ ಭಯದ ನಂತರ, ಕಾಂಗ್ರೆಸ್ ಆಡಳಿತದ ಭಯ ನನ್ನನ್ನು ಆವರಿಸಿಕೊಂಡಿತು. ನನ್ನ ತಂದೆಗೆ ವರ್ಗವಾದ ಹಾಗೆ, ನನ್ನ ಓದು ಮುಂದುವರಿದ ಹಾಗೆ ನಾನು ಊರಿಂದ ಊರಿಗೆ ಹೋಗ ಬೇಕಾದ್ದರಿಂದ, ಆರೆಸ್ಸೆಸ್ ಸಂಪರ್ಕ ಕಡಿದುಹೋಯಿತು.

ನನಗೆ 30 ವರ್ಷವಾಗುವ ಹೊತ್ತಿಗೆ ಕಾಂಗ್ರೆಸ್‌ನ ಎಡಪಂಥೀಯ ಒಲವು ಸ್ವಲ್ಪ ಸ್ವಲ್ಪ ಅರ್ಥವಾಯಿತು. 40 ದಾಟುವ ಹೊತ್ತಿಗೆ ಬೆಂಗಳೂರಿನಲ್ಲಿ ನೆಲಸಿದ್ದರಿಂದ ಅಡಿಗರ ಬಗ್ಗೆ ನಾನು ಮೊದಲು ಬರೆದ ಪುಸ್ತಕವನ್ನು ಪರಿಷ್ಕೃತಗೊಳಿಸುತ್ತ, ಅಡಿಗರ ಜೊತೆಗೆ ಓಡಾಡುತ್ತ, 'ಸೆಕ್ಯುಲರಿಸಂ', 'ಬುದ್ಧಿಜೀವಿಗಳು', 'ಸಮಾಜ ವಿರೋಧಿ', 'ಕೋಮುವಾದ', 'ಮತಾಂಧತೆ' ಮುಂತಾದ ಪರಿಕಲ್ಪನೆಗಳ ಹಿಂದಿರುವ ರಾಜಕೀಯ ಹೆಚ್ಚು ಅರ್ಥವಾಗುತ್ತ ಬಂತು. ಅಲ್ಲಿಯವರೆಗೂ ಎಂ.ಎನ್. ರಾಯ್ ಪ್ರಭಾವದಿಂದ ವಿಚಾರವಾದಿ ಆಗಿದ್ದ ನಾನು, ರಾಯ್ ಬರೆದ Historical Role of Islam ಓದಿ ಅದನ್ನು ಕನ್ನಡಕ್ಕೆ

ಅನುವಾದಿಸಿದ್ದೆ. ಬರುಬರುತ್ತ ಬುದ್ಧಿಯೊಂದನ್ನೇ, ತರ್ಕವೊಂದನ್ನೇ ನೆಚ್ಚಿಕೂತ ಎಂ.ಎನ್. ರಾಯ್ ಅವರ ಕನಸಿಗೂ, ವಾಸ್ತವಕ್ಕೂ ಸಂಬಂಧವಿಲ್ಲವೆನಿಸಿತು. ಈ ನಡುವೆ ಕನ್ನಡ ನಾಡಿನಲ್ಲಿ ಒಕ್ಕೂಟ, ಬಂಡಾಯ, ದಲಿತ ಮೊದಲಾದ ಸಾಹಿತ್ಯ ಚಳವಳಿಗಳು ಮೆರೆದು ಉರಿದು ಬೂದಿಯಾದದ್ದನ್ನು ಕಂಡಿದ್ದೇನೆ. ಗಾಂಧೀಜಿ, ಅಂಬೇಡ್ಕರರ ಒಂದೇ ಗುರಿ, ಆದರೆ ಭಿನ್ನ ಮಾರ್ಗಗಳ ಬಗ್ಗೆ ಯೋಚಿಸಿದ್ದೇನೆ.

ಗಾಂಧೀಜಿ ಮತ್ತು ಅಂಬೇಡ್ಕರ್ ಮತಾಂತರದ ಬಗ್ಗೆ ಸ್ವಾನುಭವದಿಂದ ಪ್ರತಿಕ್ರಿಯಿಸಿದರು. ಅವರು ಮತಾಂತರವನ್ನು ಅರ್ಥ ಮಾಡಿಕೊಂಡದ್ದಕ್ಕಿಂತ ಹೆಚ್ಚು ಅರ್ಥ ಮಾಡಿಕೊಂಡವರು ರಾಮಸ್ವರೂಪ್, ಕಾನರಾಡ್ ಎಲ್ಸ್ಟ್, ಸೀತಾರಾಂ ಗೋಯಲ್, ಕೆ.ಎಸ್. ಲಾಲ್, ಡಿ.ಎಸ್. ಮಾರ್ಗೋಲಿಯೂತ್, ದೇವೇಂದ್ರ ಸ್ವರೂಪ್, ಡೇವಿಡ್ ಫ್ರಾಲಿ, ಎಸ್.ಎಲ್. ಭೈರಪ್ಪ, ನವರತ್ನ ರಾಜಾರಾಂ ಮೊದಲಾದವರು. ಕೆಲವು ಚರಿತ್ರಕಾರರನ್ನೂ ಓದಿದ್ದೇನೆ. ಅವರ ಹೆಸರು ಮರೆತು ಹೋಗಿವೆ. ಆ ಚರಿತ್ರೆಗಳಲ್ಲಿ ಭಾರತದ ಮಹಾರಾಜರು ಮುಸಲ್ಮಾನ್ ದಂಡಯಾತ್ರೆಗಳಲ್ಲಿ ಸೋಲುವ ಸಂದರ್ಭದಲ್ಲಿ ಅರಮನೆಯ ಸ್ತ್ರೀಯರನ್ನು ಕೊಂದು, ಪ್ರಾಣ ಕಳೆದುಕೊಂಡದ್ದನ್ನು ಮತ್ತು ಸೆರೆಸಿಕ್ಕವರು ಪಟ್ಟ ಯಾತನೆಗಳ ಬಗ್ಗೆ ಓದಿ ನನ್ನ ರಕ್ತ ಕುದ್ದದ್ದು ನೆನಪಿನಲ್ಲಿದೆ.

ಆದದ್ದು ಆಗಿ ಹೋಯಿತು, ಅದನ್ನು ಈಗೇಕೆ ಜ್ಞಾಪಿಸಿಕೊಳ್ಳಬೇಕು ಎಂದು ಕೇಳಿದವರಿದ್ದಾರೆ. ಅವರಲ್ಲಿ ಬುದ್ಧಿಜೀವಿಗಳ ಶಿಷ್ಯತ್ವವಿರುತ್ತೆ. ಬುದ್ಧಿಹೀನ ಗಿಳಿಪಾಠ ಇರುತ್ತೆ. ಅವರು ಚರಿತ್ರೆಯನ್ನು ಓದಿದವರಲ್ಲ, ಅವರಿಗೆ ಜನಾಂಗದ ಸ್ಮೃತಿಯಾಗಲಿ ರಾಷ್ಟ್ರೀಯತೆಯಾಗಲಿ, ದೇಶದ ಬಗ್ಗೆ ಕಾಳಜಿಯಾಗಲಿ ಇರುವುದಿಲ್ಲ. ತಮ್ಮ ಸುತ್ತಲಿನ ಸಮಾಜದ ಬಗ್ಗೆ ಅವರಿಗೆ ತಲೆಕೆಡುವುದಿಲ್ಲ. ಅವರಿಗೆ ಬೇರೆ ಕಾರಣಗಳಿಗಾಗಿ ತಲೆ ಕೆಡುತ್ತದೆ, ಆ ಮಾತು ಬೇರೆ. ಅವರಿಗೆ 26/11ರ ಮುಂಬೈಯಲ್ಲಿ ನಡೆದ ಅಮಾನವೀಯ ಮಾರಣಹೋಮದ ಬಗ್ಗೆ ಟಿ.ವಿ.ಯಲ್ಲಿ ನೋಡಿದ್ದರೂ, ಪತ್ರಿಕೆಗಳಲ್ಲಿ ಓದಿದ್ದರೂ ರಕ್ತ ಕುದಿಯುವುದೇ ಇಲ್ಲ. ಅಂಥವರ ಮೈಯಲ್ಲಿ ಮನುಷ್ಯರ ರಕ್ತ ಹರಿಯುವುದಿಲ್ಲ.

ನಾನು ಮತಾಂತರ ವಿರೋಧಿ. ಕ್ರೈಸ್ತರು ಅವರ ಮತವನ್ನು, ಮುಸಲ್ಮಾನರು ಅವರ ಮತವನ್ನು ತಮ್ಮಲ್ಲೇ ಇಟ್ಟುಕೊಂಡು ಆಚರಿಸುತ್ತಿದ್ದರೆ ಅವರ ಬಗ್ಗೆ ನನ್ನ ವಿರೋಧವೇನೂ ಇಲ್ಲ. ಅವರ ಹಬ್ಬಗಳಲ್ಲಿ, ಅವರ ಮತೀಯ ಆಚರಣೆಗಳಲ್ಲಿ, ನಾನೂ ಒಬ್ಬ ಹಿಂದೂ ಆಗಿ ಪಾಲ್ಗೊಳ್ಳುತ್ತೇನೆ. ಅಲ್ಲಿ ನಾನು ದನದ ಮಾಂಸ, ಅಥವಾ ಯಾವುದೇ ಮಾಂಸವನ್ನು ತಿನ್ನಬೇಕೆಂದು ಒತ್ತಾಯವಿಲ್ಲದಿದ್ದರೆ ಪರವಾಗಿಲ್ಲ. ಆದರೆ ದನದ ಮಾಂಸ ತಿನ್ನುತ್ತ ಅದನ್ನು ನನ್ನ ಮುಖಕ್ಕೆ ಹಿಡಿದು, "ಇದರ ರುಚಿ ಗೊತ್ತಿಲ್ಲದಿದ್ದರೆ ನೀನು ಮನುಷ್ಯನೇ ಅಲ್ಲ" ಅನ್ನುವಂತಹ ಮಾತುಗಳನ್ನು ನಾನು ಸಹಿಸುವುದಿಲ್ಲ. ಆಗ ಅದು ನನ್ನ ಅಹಂಕಾರದ, ನನ್ನತನದ, ನನ್ನ ನಂಬಿಕೆಗಳ ಸವಾಲಾಗಿ ನನ್ನನ್ನು ಉದ್ರೇಕಗೊಳಿಸುತ್ತದೆ. ಹೀಗೆ ಒಬ್ಬ ವಿಜ್ಞಾನಿಯ ಹಾಗೆ ನಾನು ನನ್ನ ಭಾವನೆಗಳ

ಏರಿಳಿತಗಳನ್ನು ಗಮನಿಸುತ್ತ ಇರುತ್ತೇನೆ. ಆದರೆ, ನನ್ನ ಭಾವನೆಗಳಿಗೆ ಧಕ್ಕೆಯಾದಾಗ ನಾನು ಸ್ಫೋಟಿಸುತ್ತೇನೆ. ಆದ್ದರಿಂದ ಬೇರೆ ಕೋಮಿನ ನನ್ನ ಸ್ನೇಹಿತರು ನನ್ನನ್ನು ಊಟಕ್ಕೋ, ಪಾರ್ಟಿಗೋ ಕರೆಯದಿದ್ದರೂ ಪರವಾಗಿಲ್ಲ. ಆದರೆ ಕರೆದಾಗ, ನನ್ನ ಧಾರ್ಮಿಕ ನಂಬಿಕೆಗಳ ಮತ್ತು ನನ್ನ ಸಂಸ್ಕೃತಿಯ ಮತ್ತು ಭಾವನಾ ಕೇಂದ್ರಗಳ ಬಗ್ಗೆ ಸೂಕ್ಷ್ಮ ಸಂವೇದನೆಯುಳ್ಳವರಾಗಿರಬೇಕೆಂದು ಬಯಸುತ್ತೇನೆ.

ಪರಧರ್ಮ ಸಹಿಷ್ಣುತೆ ಎಂದರೇನೆಂದರೆ, ಪ್ರತಿಯೊಬ್ಬನಿಗೂ ಇರುವ ಸ್ವಧರ್ಮ ವನ್ನು, ಅವನಿಗೆ ಬಿಟ್ಟು, ಅದರಲ್ಲಿ ತಲೆ ಹಾಕದಿರುವುದು, ಮೂಗು ತೂರಿಸದಿರುವುದು. ನಿನ್ನ ಧರ್ಮದಲ್ಲಿ ನೀನಿರು, ನನ್ನ ಧರ್ಮದಲ್ಲಿ ನಾನಿರುತ್ತೇನೆ ಎನ್ನುವಂತೆ ಬದುಕುವುದು. ಆದರೆ ನನ್ನ ನಿನ್ನ ಧರ್ಮದಾಚೆ, ಕುಟುಂಬ ಜೀವನದಾಚೆಯಿರುವ ರಾಷ್ಟ್ರೀಯತೆಯನ್ನು ನಾವು ಒಪ್ಪಿಕೊಳ್ಳದಿದ್ದರೆ, ಅದಕ್ಕಾಗಿ ನಾವು ಸಾಯಲು ಸಿದ್ಧವಿಲ್ಲವಾದರೆ, ಆಗ ಪರಧರ್ಮ ಸಹಿಷ್ಣುತೆಯನ್ನು ನಾವು ಬಿಸಾಕುತ್ತೇವೆ. ನಿನ್ನ ನನ್ನ ರಾಷ್ಟ್ರದ ಉನ್ನತಿಕೆಯ ಪ್ರಶ್ನೆ, ಅದರ ರಕ್ಷಣೆಯ ಪ್ರಶ್ನೆ, ಅದರ ಬಗ್ಗೆ ನನ್ನ ನಿನ್ನ ಭಕ್ತಿ ಒಂದೇ ಆದರೆ; ಆತ್ಯಂತಿಕ ಕ್ಷಣಗಳಲ್ಲಿ ನನ್ನ ಜೊತೆಗೆ ನೀನು ನಿಲ್ಲುವುದಾದರೆ, ನಿನ್ನ ಧರ್ಮ ಯಾವುದಾದರೆ ಏನು, ನೀನು ಭಾರತೀಯ ಎಂದು ನಿನ್ನನ್ನು ಅಪ್ಪಿಕೊಳ್ಳುತ್ತೇನೆ. ನೀನು ನನ್ನ ನೆರೆಹೊರೆಯ ವನು, ನಾವು ಒಟ್ಟಿಗೇ ಬಾಳಬೇಕು, ಅದಕ್ಕಾಗಿ ಹೊಂದಿಕೊಂಡು ನಡೆಯಬೇಕು ಎನ್ನುವುದೇ ಮುಖ್ಯವಾದ ಮೌಲ್ಯ. ನಾವು ಭಾರತೀಯರು, ಹಿಂದೂ ದೇಶದಲ್ಲಿರುವ ಯಾವ ಜಾತಿಯವನೇ ಆಗಲಿ, ಯಾವ ಧರ್ಮದವನೇ ಆಗಲಿ ಅವನು ಹಿಂದೂ ಎಂದು ತಿಳಿದು ಕೊಳ್ಳದಿದ್ದರೆ, ಅವನು ಭಾರತೀಯನೇ ಅಲ್ಲ.

ಭಾರತೀಯನಿಗೆ ಭಾರತವೇ ಮುಖ್ಯ. ಭಾರತವೇ ದೇವರು. ಭಾರತದ ಹಿತ ಅವನಿಗೆ ಮುಖ್ಯ. ಹೀಗೆ ತಿಳಿದವರೆಲ್ಲರೂ ಹಿಂದೂಗಳು. ಹಿಂದೂಗಳೆಂದರೆ ವೇದಶಾಸ್ತ್ರ ಪುರಾಣ ಗಳಲ್ಲಿ ನಂಬಿಕೆಯುಳ್ಳವರಾಗಬೇಕಿಲ್ಲ. ಹಿಂದೂ ಎನ್ನುವುದು ಇಸ್ಲಾಂ, ಕ್ರಿಶ್ಚಿಯಾನಿಟಿ, ಜುಡಾಯಿಸಂ ಹಾಗಿರುವ ಧರ್ಮವಲ್ಲ. ಹಿಂದುತ್ವ ಒಬ್ಬ ಪ್ರವಾದಿಯ ಹೇಳಿಕೆಯ ಹಾಗೆ ನಡೆಯುವುದಿಲ್ಲ. ನಮ್ಮಲ್ಲಿ ಪ್ರವಾದಿಗಳೇ ಇಲ್ಲ. ಆದ್ದರಿಂದ ಹಿಂದೂ ದೇಶದಲ್ಲಿರುವ, ಹಿಂದೂ ದೇಶದ ಅಸ್ತಿತ್ವವನ್ನು ಮತ್ತು ಪೂಜ್ಯತೆಯನ್ನು ಒಪ್ಪಿಕೊಂಡಿರುವ, ಈ ದೇಶದ ಬಹುಮುಖೀ ಸಂಸ್ಕೃತಿಯನ್ನು ಉಳಿಸಲು ಪಣ ತೊಟ್ಟಿರುವವರೆಲ್ಲರೂ ಹಿಂದೂಗಳು. ಇಂತಹ ಒಂದು ಪರಿಕಲ್ಪನೆ ಭಾರತಕ್ಕೆ ಮಾತ್ರ ವಿಶಿಷ್ಟವಾದದ್ದು.

ಇಂತಹ ಒಂದು all-embracing, ಎಲ್ಲ ದೇಶದ ಜನರನ್ನೂ, ಎಲ್ಲ ಧರ್ಮದ ಜನಗಳನ್ನೂ, ಅವರೆಲ್ಲರ ನಂಬಿಕೆಗಳನ್ನೂ ಇರಲಿಕ್ಕೆ ಬಿಡುವ, ಅವರನ್ನು ರಕ್ಷಿಸುತ್ತ, ಅವರ ಜೊತೆಗೆ ಬಾಳುವ ಮನೋಧರ್ಮವೆಂದರೆ ಸನಾತನಧರ್ಮ. ಚಾರಿತ್ರಿಕ ಕಾರಣಗಳಿಂದಾಗಿ ಅದನ್ನು ಹಿಂದೂ ಧರ್ಮವೆಂದು ಕರೆಯುತ್ತೇವೆ. ಆದರೆ ಅದು ಮೂಲಭೂತವಾಗಿ ಸನಾತನ ಧರ್ಮ. 'ಸನಾತನ' ಎಂದರೆ ಶಾಶ್ವತವಾದ, ಯಾವಾಗಲೂ

ಇರುವ, ಪ್ರಾಚೀನ, ಪುರಾತನ ಎನ್ನುವ ಅರ್ಥಗಳಲ್ಲದೆ, 'ದೇವರು' ಎನ್ನುವ ಅರ್ಥವೂ ಇದೆ.

ಇಂತಹ ಧರ್ಮವನ್ನು ನಾಶಮಾಡಲಿಕ್ಕೆ ಹೊರಟದ್ದು ಮರಳುಗಾಡಿನಲ್ಲಿ ಹುಟ್ಟಿದ ಇಸ್ಲಾಂ. ಅದು ಮರುಧರೆಯ ಜುಡಾಯಿಸಂ ಅಥವಾ ಯಹೂದಿ ಮತಕ್ಕೆ ಪ್ರತಿವಾದಿಯಾಯಿತು. ಅವರಿಂದ ಪ್ರವಾದಿತನವನ್ನು ಕಸಿದುಕೊಂಡಿತು. ಕ್ರೈಸ್ತಮತದ ವಿರುದ್ಧ ಹೋರಾಡಿ ಅವರಿವರ ಹೋರಾಟದಲ್ಲಿ ಪ್ರಪಂಚದ ಪ್ರಮುಖ ಗ್ರಂಥ ಭಂಡಾರಗಳು ನಾಶವಾದವು. ಯಹೂದಿ ಮತದಿಂದ ಬೇರೆಯಾದ ಕ್ರೈಸ್ತ ಮತವೂ ಕೂಡ ಅತ್ಯಾಚಾರದಲ್ಲಿ ಇಸ್ಲಾಂಗಿಂತ ಹಿಂದೆ ಬೀಳಲಿಲ್ಲ. ಇವತ್ತಿನ ಪ್ರಪಂಚದಲ್ಲಿ ಇಸ್ಲಾಂ ಮತ್ತು ಕ್ರೈಸ್ತಮತದ ಸ್ಪರ್ಧೆ ಮತಾಂತರ ಕ್ಷೇತ್ರದಲ್ಲಿ ಪ್ರಮುಖವಾಗಿ ನಡೆದಿದೆ. ಪ್ರಪಂಚದ ಇಸ್ಲಾಮೀಕರಣ ಒಬ್ಬರ ಗುರಿಯಾದರೆ, ಪ್ರಪಂಚದ ಕ್ರೈಸ್ತೀಕರಣ ಇನ್ನೊಬ್ಬರ ಗುರಿಯಾಗಿದೆ. ಇವೆರಡೂ ಸಾಮ್ರಾಜ್ಯಶಾಹಿ ಉದ್ದೇಶಗಳನ್ನುಳ್ಳವು. ಅವರು ಹೇಳುವ ಒಂದೇ ದೇವರು ಸಾಮ್ರಾಜ್ಯ ಶಾಹಿಯ ಬಾವುಟ ಇದ್ದ ಹಾಗೆ.

ಆದರೆ ನಮ್ಮ ಸನಾತನ ಧರ್ಮವನ್ನು ನಾಶ ಮಾಡಲಿಕ್ಕೆ ಕ್ರೈಸ್ತಮತ ಮತ್ತು ಇಸ್ಲಾಂ ಹೊರಟಿವೆ. ನಾಶ ಮಾಡಲಿಕ್ಕೆ ಇತ್ತೀಚೆಗೆ ಅವರು ಉಪಯೋಗಿಸುವ ಮಾರ್ಗವೆಂದರೆ ಮತಾಂತರ. ಮತಾಂತರಕ್ಕಾಗಿ ಹೆಣ್ಣು, ಹೊನ್ನು, ಮಣ್ಣಿನ ಆಮಿಷಗಳನ್ನೊಡ್ಡುತ್ತಾರೆ. ಶಾಲೆಗಳಲ್ಲಿ ವಿದ್ಯಾರ್ಥಿಗಳ, ಆಸ್ಪತ್ರೆಯಲ್ಲಿ ರೋಗಿಗಳ ಮನಸ್ಸನ್ನು ಮತಾಂತರಕ್ಕೆ ತಿರುಗಿಸುತ್ತಾರೆ. ಮತಾಂತರದಿಂದ ತಮ್ಮ ದೇವರನ್ನು ಒಲಿಸಿಕೊಳ್ಳಲು ಸಾಧ್ಯ ಎಂದುಕೊಂಡ ಕ್ರೈಸ್ತ ಹಾಗೂ ಇಸ್ಲಾಂ ಮತಗಳು ಮತಾಂತರ ಮಾಡುವುದರಲ್ಲಿ ಸ್ಪರ್ಧಿಸುತ್ತವೆ. ಇಡೀ ಪ್ರಪಂಚದಲ್ಲಿ ಮತಾಂತರ ಪೋಷಕ ಅನೇಕ ಸಂಸ್ಥೆಗಳು ಮತಾಂತರಕ್ಕಾಗಿ ಕೋಟಿಗಟ್ಟಲೆ ಪೆಟ್ರೋ ಡಾಲರ್, ಯೂರೋ ಡಾಲರ್‌ಗಳನ್ನು ಶೇಖರಿಸುತ್ತವೆ ಮತ್ತು ಹಂಚುತ್ತವೆ. ಯೂರೋಪ್, ದಕ್ಷಿಣ ಅಮೇರಿಕ, ಉತ್ತರ ಅಮೇರಿಕ, ಆಫ್ರಿಕಾ, ಆಸ್ಟ್ರೇಲಿಯಾ, ಶ್ರೀಲಂಕಾ, ಕೊರಿಯಾ, ಜಪಾನ್, ಇಂಡೋನೇಷ್ಯ, ಥೈಲ್ಯಾಂಡ್, ಬರ್ಮಾ, ಚೀನ, ರಷ್ಯಾ, ಭಾರತ ಮೊದಲಾದ ಎಲ್ಲ ದೇಶಗಳಲ್ಲೂ ಮತಾಂತರದ ಪಿಡುಗು ಹಬ್ಬಿದೆ. ಮತಾಂತರಕ್ಕೂ ಸಾಮ್ರಾಜ್ಯಶಾಹಿಗೂ ನಿಕಟವಾದ ಸಂಬಂಧವಿದೆ. ಅವೆರಡೂ ಸ್ಥಳೀಯ ಸಂಸ್ಕೃತಿಯನ್ನು ನಾಶ ಮಾಡಿ ತಮ್ಮ ತಮ್ಮ ದೇವರನ್ನು ಉಳಿದವರ ಮೇಲೆ ಹೇರುತ್ತವೆ.

ನಾವೆಲ್ಲರೂ ಮುಸಲ್ಮಾನರಾಗಿ ಎಲ್ಲ ದೇವಾಲಯಗಳನ್ನೂ ನಾಶಪಡಿಸಿ, ದೇಶದ ತುಂಬ ಮಸೀದಿಗಳನ್ನೇ ಕಟ್ಟಿದ್ದರೆ, ಅಥವಾ ಕ್ರೈಸ್ತರಾಗಿ ದೇಶದ ತುಂಬ ಬರೀ ಚರ್ಚುಗಳನ್ನೇ ಕಟ್ಟಿದ್ದಾರೆ, ವೇದ ಶಾಸ್ತ್ರ ಪುರಾಣ ಮಹಾಕಾವ್ಯಗಳನ್ನು ಸುಟ್ಟುಹಾಕಿ, ಬೈಬಲ್ಲನ್ನೋ ಅಥವಾ ಖುರಾನನ್ನೋ ಮನೆಮನೆಯಲ್ಲೂ ಇಟ್ಟುಕೊಂಡರೆ, ನನ್ನ ದೇಶದಲ್ಲಿ ಬೌದ್ಧರು, ಜೈನರು, ಸಿಖ್ಖರು, ಪಾರ್ಸಿಗಳು, ಎನ್ನುವ ಜನಾಂಗಗಳಿಲ್ಲದೆ,

ದೇಹ ಮತ್ತು ಪ್ರಾಣಗಳಿಗಿಂತ ಮನಸ್ಸು ಹೆಚ್ಚು ದುರ್ಬಲವಾದದ್ದು. ಮನಸ್ಸು ಗಟ್ಟಿಯಾಗುವುದು ಭಾಷೆಯ ಮೂಲಕ ಬರುವ ಲೋಕಜ್ಞಾನದಿಂದ ಮತ್ತು ಭಾವಪೋಷಣೆಯಿಂದ. ಭಾವಪೋಷಣೆ ನಮ್ಮ ಸಂಬಂಧಗಳಿಂದ, ನಮ್ಮ ಆಚರಣೆಗಳಿಂದ, ನಂಬಿಕೆಗಳಿಂದ, ಒಡನಾಟದಿಂದ, ಅನುಭೂತಿಯಿಂದ ಉಂಟಾಗುತ್ತದೆ. ರೂಢಿಯೂ ಅದನ್ನು ಬಲಪಡಿಸುತ್ತದೆ. ಭಾವಸ್ಥಿರಗಳು ಬೆಳೆಯುವುದು, ಬಯಕೆಯಿಂದ ಆಗುತ್ತದೆ. ಗಟ್ಟಿಯಾದ ಭಾವ, (Emotion) ಗಟ್ಟಿಯಾದ ಭಾವನೆಗಳ (Feelings) ಮೂಲಕ ವ್ಯಕ್ತವಾಗುತ್ತದೆ. ನಾವು ಒಬ್ಬರೊಬ್ಬರ ಭಾವನೆಗಳನ್ನು ಬಲಪಡಿಸುತ್ತೇವೆ. ಒಬ್ಬರೊಬ್ಬರ ಭಾವನೆಯನ್ನು ಬೆಂಬಲಿಸುತ್ತ ದೃಢಪಡಿಸುತ್ತೇವೆ. ಭಾವನೆಗಳ ಭದ್ರತೆ (Emotional Security) ನಮ್ಮ ಮೂಲ ಪ್ರವೃತ್ತಿಯಾದ 'ಭಯ'ಕ್ಕೆ ರಕ್ಷಕ ಅಸ್ತ್ರವೂ, ಗುರಾಣಿಯೂ, ಕೋಟೆಯೂ ಆಗುತ್ತದೆ. ಭಾವನೆಯ ಭದ್ರತೆ ನಮ್ಮ ತನವನ್ನು ನಮ್ಮ ಕುಟುಂಬವನ್ನು, ಸಮಾಜವನ್ನು ಮತ್ತು ದೇಶವನ್ನು ರಕ್ಷಿಸುತ್ತದೆ. ಈ ರೀತಿಯ ರಕ್ಷಣೆಯನ್ನು ಭಾರತದಲ್ಲಿ ಸನಾತನಧರ್ಮ ನಮಗೆ ಕೊಟ್ಟಿದ್ದರಿಂದಲೇ, ಸನಾತನಧರ್ಮದ ಅಭಿವ್ಯಕ್ತಿಯಾದ ವೇದ, ಉಪನಿಷತ್, ಪುರಾಣಗಳು, ಮಹಾಕಾವ್ಯಗಳು. ನಮ್ಮ ದೇವಸ್ಥಾನಗಳು, ಪುಣ್ಯಕ್ಷೇತ್ರಗಳು, ನಮ್ಮ ವಿಜ್ಞಾನ, ತತ್ವಜ್ಞಾನ ಮತ್ತು ಇತರ ಕಲೆಗಳನ್ನು ರಕ್ಷಿಸಿಕೊಳ್ಳಲಿಕ್ಕೆ, ಮುಸಲ್ಮಾನರ ಆಕ್ರಮಣವನ್ನು ವಿರೋಧಿಸಿ, ಹಿಂದೂ ಧರ್ಮವನ್ನು ಉಳಿಸಿಕೊಳ್ಳುವ ಪ್ರಯತ್ನಗಳಾದವು. ಲಕ್ಷಾಂತರ ಜನ ಈ ಹೋರಾಟದಲ್ಲಿ ಬಲಿಯಾದರು. ಆತ್ಮಾಹುತಿಯನ್ನು ಮಾಡಿಕೊಂಡರು. 19ನೆಯ ಶತಮಾನದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಿಂದ ಹಿಡಿದು ಭಾರತಕ್ಕೆ ಸ್ವಾತಂತ್ರ್ಯ ಸಿಗುವವರೆಗೆ ಲಕ್ಷಾಂತರ ಜನ ಮನೆಮಠಗಳನ್ನು, ಹೆಂಡತಿ, ಮಕ್ಕಳು ತಮ್ಮ ಆಸ್ತಿಪಾಸ್ತಿಗಳನ್ನು ಉಳಿಸಿಕೊಳ್ಳುವುದಕ್ಕಿಂತ ಬ್ರಿಟಿಷರನ್ನು ಅವರು ತಂದ ಮಿಶನರಿಗಳನ್ನು ನಿರ್ವೀರ್ಯರನ್ನಾಗಿ ಮಾಡಲಿಕ್ಕೆ ಜೀವತೆತ್ತರು. ಆಗ ಅವರಿಗಿದ್ದ ಮೂಲಭೂತ ಧ್ಯೇಯ ಭಾರತಮಾತೆಯ ಸಂರಕ್ಷಣೆ. ಅದಕ್ಕಾಗಿ ಅವರು ದೇಶಾಭಿಮಾನದಿಂದ, ಸ್ವಾಭಿಮಾನದಿಂದ, ಸ್ವರಾಜ್ಯ, ಸ್ವಾವಲಂಬನೆಗಾಗಿ, ಬ್ರಿಟಿಷರು ಈ ದೇಶವನ್ನು ಬಿಟ್ಟು ಹೋಗುವ ಹಾಗೆ ಮಾಡಿದರು. ಅವರ ಸಂಕಲ್ಪಬಲ ಮತ್ತು ತ್ಯಾಗಬುದ್ಧಿಯಿಂದ ಜಾತಿ ಮತಗಳ ವಿಚ್ಛಿದ್ರಕಾರಕ ಶಕ್ತಿಗಳನ್ನು ಅದುಮಿಟ್ಟು ಏಕೋಭಾವದಿಂದ ಹೋರಾಡಿದರು. ಅವರ ಹೋರಾಟದಿಂದ ಮತಾಂತರದ ಪಿಡುಗನ್ನು ತಡೆಗಟ್ಟುವುದು ಸಾಧ್ಯವಾಯಿತು.

ಸ್ವಾತಂತ್ರ್ಯ ಬರುವ ಹೊತ್ತಿಗೆ ಗಾಂಧೀಜಿ ಮತ್ತು ಅಂಬೇಡ್ಕರರು ದೇಶ ವಿಭಜನೆಯನ್ನು ಬೇಡವೆಂದು ಹೇಳಿದರೂ, ಒಂದು ವೇಳೆ ಮುಸಲ್ಮಾನರಿಗೆ ಭಾರತದ ಒಂದು ಭಾಗವನ್ನು ಕೊಡುವುದೇ ಆದರೆ ಪಾಕಿಸ್ತಾನಕ್ಕೆ ಭಾರತದಲ್ಲಿರುವ ಎಲ್ಲ ಮುಸಲ್ಮಾನರನ್ನೂ ಕಳಿಸಿ, ಪಾಕಿಸ್ತಾನದಿಂದ ಎಲ್ಲ ಹಿಂದೂಗಳನ್ನೂ ಕರೆಸಿಕೊಳ್ಳಬೇಕೆಂದು ಅಂಬೇಡ್ಕರರು ಹೇಳಿದರೂ, ಪಂಡಿತ ಜವಾಹರಲಾಲರು, ತಮ್ಮ ಮಹತ್ವಾಕಾಂಕ್ಷೆಗಾಗಿ, ಭಾರತವನ್ನು ಮೂರು ತುಂಡು ಮಾಡಲಿಕ್ಕೆ ಒಪ್ಪಿಕೊಂಡರು. ಅದರಿಂದ ದೇಶಕ್ಕೆ ಬಂದ ದುರಂತವನ್ನು

ನಾವು ಈಗಲೂ ಅನುಭವಿಸುತ್ತಿದ್ದೇವೆ. ಕಾಂಗ್ರೆಸ್ಸಿನ ಕಣ್ಮಣಿ ನೆಹರೂ ಅವರಿಗೆ ತಾವೊಬ್ಬ ಡಿಕ್ಟೇಟರ್‌ ಆಗಬಹುದೆನ್ನುವುದು ಗೊತ್ತಿತ್ತು. 1938ರಲ್ಲಿ ಯಾರದೋ ಹೆಸರಿನಲ್ಲಿ ನೆಹ್ರೂ ತಮ್ಮ ವ್ಯಕ್ತಿಚಿತ್ರ ಹೀಗೆ ಬರೆದುಕೊಂಡಿದ್ದರು:

Jawaharlal has learnt well to act without the paint and powder of the actor. With his seeming carelessness and insouciance, he performs on the public stage with consummate artistry. What is this going to lead him and the country to? what is he aiming at with all his apparent want of aim? What lies behind the mask of his, what desires, what will to power, what insatiate longings? Is it his will to power that is driving him from crowd to crowd and makes him whisper to himself: I drew these tides of men into my hands and wrote my will across the sky in stars? Men like Jawaharlal with all their capacity for great and good work, are unsafe in democracy. He calls himself a Democrat and a Socialist, and no doubt he does so in all earnestness; but every psychologist knows the mind is ultimately a slave to the heart and that logic can always be made to fit in with the desires and impressible urges of men. A little twist and Jawaharlal might turn a dictator. He may still use the language and slogans of Democracy and Socialism but we all know how Facism has fattened on this language. Jawaharlal cannot become a fascist. Yet, he has all the makings of a dictator in him! - vast popularity, a strong will, energy, pride, organisational capacity, ability, hardness and, with all his love for the crowd, an intolerance for others and a certain contempt for the weak. His over mastering desire to get things done will hardly brook for long the slow process of democracy. He may keep the husk but he will see to it that it bends to his will. In this revolutionary epoch, caesarism is always at the door and is it not possible that Jawaharlal might fancy himself as a caesor? Let us not spoil him by too much adulation and praise. His conceit, if any, is already formidable. It must be checked. (M.N.Roy:*Men I Met* p 6-7;1981)

ಈ ಆತ್ಮಚಿತ್ರದಲ್ಲಿ ಕಾಣುವಂತೆ, ಮುಖಂಡತ್ವಕ್ಕೆ ಹಾತೊರೆಯುತ್ತಿದ್ದ ನೆಹರೂ, ತಾನು ಅಧಿಕಾರದಲ್ಲಿ ಮುಂದುವರಿಯಬೇಕಾದರೆ ಸೆಕ್ಯುಲರ್ ಎಂದು ನಟಿಸುತ್ತ, ಹಿಂದೂ ಸಂಘಟನೆಗಳನ್ನು ಒಡೆಯಲಿಕ್ಕೆ ಮಾಡಿದ ಪ್ರಯತ್ನಗಳಲ್ಲಿ ಮುಸಲ್ಮಾನರ ತುಷ್ಟೀಕರಣ, ಕ್ರೈಸ್ತರ ಮತಾಂತರ ಚಟುವಟಿಕೆಗಳಿಗೆ ಅವಕಾಶ ಮಾಡಿಕೊಟ್ಟದ್ದೂ ಸೇರಿಕೊಂಡಿದೆ. ಇದೇ ಆಂತರಿಕ ರಾಜನೀತಿಯನ್ನು ಕಾಂಗ್ರೆಸ್ಸಿಗರು ಇನ್ನೂ ಉಳಿಸಿಕೊಂಡಿರುವುದರಿಂದ ಭಾರತದಲ್ಲಿ ಮತಾಂತರ ರಾಷ್ಟ್ರದ್ರೋಹಿ ಚಟುವಟಿಕೆಯಾಗಿ ಮುಂದುವರಿದಿದೆ. ಮತಾಂತರ ವನ್ನು ಸಂಪೂರ್ಣವಾಗಿ ನಿಷೇಧಿಸಬೇಕಾದರೆ, ಕಾಂಗ್ರೆಸ್‌ನವರ ಕೈಯಲ್ಲಿ ಲೋಕಸಭೆ ಮತ್ತು ರಾಜ್ಯಸಭೆಯ ಸದಸ್ಯತ್ವವನ್ನು ಕುಂಠಿತಗೊಳಿಸುವವರೆಗೆ ಅದು ಸಾಧ್ಯವಾಗುವುದಿಲ್ಲ.

ಡೇವಿಡ್ ಫ್ರಾಲಿಯವರ ಮಾತಿನಲ್ಲಿ ಹೇಳುವುದಾದರೆ, ಈ ಪುಸ್ತಕದಲ್ಲಿರುವ ಲೇಖನ ಗಳನ್ನು ಬರೆದವರು 'ಬೌದ್ಧಿಕ ಕ್ಷತ್ರಿಯರು'. ಅವರು ಹೇಳಿರುವ ವಿಷಯಗಳು ಮತ್ತು ವಿಚಾರಗಳು ನಿಚ್ಚಳವಾಗಿರುವುದರಿಂದ, ಮಹತ್ವದ ಈ ಸಾಂಸ್ಕೃತಿಕ ಚರ್ಚೆಯಲ್ಲಿ ಭಾಗವಹಿಸಿದ ಅವರನ್ನು ಅಭಿನಂದಿಸುತ್ತೇನೆ. ನಮ್ಮ ವೃತ್ತಪತ್ರಿಕೆಗಳು, ವಾರಪತ್ರಿಕೆಗಳು, ಮಾಸಪತ್ರಿಕೆಗಳು ಇಂತಹ ಸಾಂಸ್ಕೃತಿಕ ಮಹತ್ವವುಳ್ಳ ವಿಷಯಗಳನ್ನು ಎತ್ತಿಕೊಳ್ಳಬೇಕಾದದ್ದು ನಮ್ಮ ಕಾಲದ ಅವಶ್ಯಕತೆಯಾಗಿದೆ. 'ವಿಜಯ ಕರ್ನಾಟಕ' ಪತ್ರಿಕೆಯೊಂದೇ ಈ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ಆ ಪತ್ರಿಕೆ ವಿಷಯದ ಪರವಾದ ಮತ್ತು ವಿರೋಧ ವಾದ ಅಭಿಪ್ರಾಯಗಳೆರಡನ್ನೂ ಪ್ರಕಟಿಸುವ ವೇದಿಕೆಯಾದದ್ದು ಪ್ರಜಾಪ್ರಭುತ್ವವನ್ನು ಸಂರಕ್ಷಿಸುವ ಕೆಲಸವೂ ಆಗಿದೆ. ಈ ಕೆಲಸದಲ್ಲಿ ಕೆಲವೊಮ್ಮೆ ಅಸಭ್ಯ, ಅವಿಚಾರದ ಮಾತುಗಳನ್ನು ಪ್ರಕಟಿಸಿ ವಿಚಾರವಂತರು ಯಾರು, ಅವಿಚಾರವಂತರು ಯಾರು ಎನ್ನುವುದನ್ನು ಓದುಗರಿಗೆ ಬಿಟ್ಟಿರುವುದು ಸಮಂಜಸವಾಗಿದೆ.

ಈ ಪುಸ್ತಕ ಕನ್ನಡನಾಡಿನ ಅಭಿವೃದ್ಧಿಶೀಲ ಮತ್ತು ಕ್ರಿಯಾಶೀಲ ತರುಣ ಮನಸ್ಸು ಗಳನ್ನು ವಿಚಾರ ವಿಮರ್ಶೆಗೆ ತೊಡಗಿಸುತ್ತದೆಯೆಂದು ಭಾವಿಸಿದ್ದೇನೆ. ಸಾಂದರ್ಭಿಕ ಈ ಪ್ರಸ್ತಾವನೆಯನ್ನು ಬರೆಯಲಿಕ್ಕೆ ಅನುವು ಮಾಡಿಕೊಟ್ಟ ಪ್ರಕಾಶಕರಿಗೂ ಮತ್ತು ಪ್ರಧಾನ ಸಂಪಾದಕರಿಗೂ ಮತ್ತು ಭಾರತೀಯ ವಿಚಾರವಂತ ವೇದಿಕೆಗೂ ನಾನು ಕೃತಜ್ಞನಾಗಿದ್ದೇನೆ.

*ಸುಮತೀಂದ್ರ ನಾಡಿಗ*

೩೮, 'ಅಪೂರ್ವ', ನಾಡಿಗರ ರಸ್ತೆ,
೧ನೇ ಮೇನ್, ೩ನೇ ಫೇಸ್,
೭ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್,
ಬೆಂಗಳೂರು ೫೬೦ ೦೮೫.

# ಪರಿವಿಡಿ

# ಇಂಥ ಘಟನೆ ಬೇರೆ ಯಾವ ದೇಶದಲ್ಲಿ ನಡೆದೀತು?

*-ಎಸ್.ಎಲ್. ಭೈರಪ್ಪ*

ನಾಲ್ಕು ಶತಮಾನಗಳಿಂದಲೂ ಸತತವಾಗಿ ಭಾರತದಲ್ಲಿ ನಡೆಯುತ್ತಿರುವ ಕ್ರಿಸ್ತೀಕರಣವು ಸೋನಿಯಾ ಗಾಂಧಿಯ ಪಟ್ಟಾಭಿಷೇಕವಾದ ನಂತರ ಅಗಾಧವಾದ ಪ್ರಮಾಣಕ್ಕೆ ಏರಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯಾದರೂ ಯಾವ ಪತ್ರಿಕೆ ಅಥವಾ ಟಿವಿ ಚಾನೆಲ್‌ನವರೂ ಹಾಗೆಂದು ಸ್ಪಷ್ಟವಾಗಿ ಬರೆದಿಲ್ಲ, ಹೇಳಿಲ್ಲ. ಆದರೆ ಈ ಅಗಾಧತೆಯಿಂದ ಎಚ್ಚೆತ್ತು ಒರಿಸ್ಸಾ, ಕರ್ನಾಟಕ ಮೊದಲಾದ ಕಡೆ ಅಲ್ಲಲ್ಲಿ ಪ್ರತಿಕ್ರಿಯೆ-ಯಾಗುತ್ತಿರುವುದನ್ನು ಎಲ್ಲ ಮಾಧ್ಯಮದವರೂ ಮುಖಪುಟದ ಸುದ್ದಿ ಮಾಡುತ್ತಿರುವುದು, ಜಾತ್ಯತೀತ ಪತ್ರಿಕೆಗಳು, ಎಡಪಂಥದ ಮಾಧ್ಯಮಗಳು ಭಾರತದ ವಿನಾಶವೇ ಸಂಭವಿಸುತ್ತಿದೆ ಎಂಬಂತೆ ಹುಯಿಲೆಬ್ಬಿಸಿ, ಮಿಶನರಿಗಳಿಗೆ ಸಹಕಾರಿಯಾಗಿ ವರ್ತಿಸುತ್ತಿರುವುದು ಸಾಧಾರಣ ಓದುಗನಿಗೂ ಅರ್ಥವಾಗುತ್ತದೆ. ಈ ಹುಯಿಲನ್ನು ಸೋನಿಯಾ ಗಾಂಧಿಯ ಅನುಯಾಯಿಗಳು, ಬುದ್ಧಿಜೀವಿಗಳು, ಜಾತ್ಯತೀತರು ತಾರಕಕ್ಕೇರಿಸಿ ಹಿಂದೂಪರ ಸಂಘಟನೆಗಳು, ಮಠಾಧೀಶರು ಮತ್ತು ಬಿಜೆಪಿ ಸರಕಾರಗಳಿಗೆ ಮಸಿ ಬಳಿಯುವುದು ಮಾತ್ರವಲ್ಲ, ಅಂತಾರಾಷ್ಟ್ರೀಯ ಮಟ್ಟದಲ್ಲಿ, ವಿಶ್ವಸಂಸ್ಥೆಯ ಮಟ್ಟದಲ್ಲಿ ಭಾರತಕ್ಕೆ ಛೀಮಾರಿ ಹಾಕಿಸಲು ಉದ್ಯುಕ್ತವಾಗಿರುವ ಕ್ರೈಸ್ತ ಸಂಘಟನೆಗಳಿಗೆ ನೆರವಾಗುತ್ತಿರುವುದೂ ಸ್ಪಷ್ಟವಾಗಿದೆ. ಕೇಂದ್ರ ಸರಕಾರವನ್ನು ಹಿಡಿದುಕೊಂಡಿರುವ ಸೋನಿಯಾ ಗಾಂಧಿಯ ಕಾಂಗ್ರೆಸ್ ಪಕ್ಷವಂತೂ ಈ ಸನ್ನಿವೇಶವನ್ನು ದೊಡ್ಡದು ಮಾಡಿಕೊಂಡು ಕರ್ನಾಟಕ ಮತ್ತು ಒರಿಸ್ಸಾ ಸರಕಾರಗಳನ್ನು ಬರ್ಖಾಸ್ತ್ ಮಾಡುವ ಹುನ್ನಾರವನ್ನೂ ಮಾಡುತ್ತಿದೆ. ಹಾಗೆ ಮಾಡಿದರೆ ಮುಂದಿನ ಚುನಾವಣೆಯಲ್ಲಿ ಜನಗಳು ಬರ್ಖಾಸ್ತುಗೊಂಡ ಸರಕಾರಗಳನ್ನು ಪುನಃಪ್ರತಿಷ್ಠಾಪಿಸಿ-ಯಾರೆಂಬ ಲೆಕ್ಕಾಚಾರದಿಂದ ತಡೆದುಕೊಂಡಿದೆ. ಪ್ರತಿಕ್ರಿಯೆಯಾಗಿ ಗಲಭೆ ಮಾಡುತ್ತಿರುವವರು ಭಜರಂಗದಳದವರೆಂದು ಕೇಂದ್ರದ ಆಡಳಿತ ಪಕ್ಷವೂ ಎಡಪಂಥೀಯ ಮತ್ತು ವಿಶೇಷವಾಗಿ ಇಂಗ್ಲಿಷ್ ಮಾಧ್ಯಮವೂ ಥಟ್ಟನೆ ಆಪಾದಿಸುತ್ತಿವೆ. ಆದರೆ ಈ ಗಲಭೆಯಲ್ಲಿ

ಭಜರಂಗದಳದ ಪಾತ್ರವೆಷ್ಟು? ಭಜರಂಗದಳದ ಹೆಸರಿನಲ್ಲಿ ನಡೆಯುವ ಗಲಭೆಗಳೆಷ್ಟು? ಮಿಶನರಿಗಳ ಆಮಿಷ ಮತ್ತು ಅಪಪ್ರಚಾರಕ್ಕೆ ಒಳಗಾಗಿ ಮತಾಂತರಗೊಂಡವರ ನೆರೆಹೊರೆಯವರೇ ಸ್ವಯಂಪ್ರೇರಿತರಾಗಿ ಗಲಭೆ ಮಾಡಿರುವವರೆಷ್ಟು? ಎಂಬ ವಿವರಗಳನ್ನು ಯೋಚಿಸುವುದು ಇವರಾರಿಗೂ ಬೇಕಿಲ್ಲ.

ಭಾರತದಲ್ಲಿ ವಾಸಿಸುತ್ತಿರುವ ಫ್ರಾಂಕ್ವಾ ಗೋತಿಯೆ ಎಂಬ ಫ್ರೆಂಚ್ ಪತ್ರಕರ್ತನು ಸೋನಿಯಾ ಗಾಂಧಿಯ ಆಡಳಿತದಲ್ಲಿ ನಡೆಯುತ್ತಿರುವ ಕ್ರಿಸ್ತೀಕರಣವನ್ನು ವಿವರಿಸುತ್ತಾ ಆಂಜಿಕೆಯನ್ನು ವ್ಯಕ್ತಪಡಿಸಿದ್ದಾನೆ. ಆತ ಹೇಳುತ್ತಾನೆ; 'ನಾನು ಸ್ವತಃ ಪಾಶ್ಚಿಮಾತ್ಯ ಹಾಗೂ ಹುಟ್ಟಿನಿಂದ ಕ್ರೈಸ್ತ. ಹೆಚ್ಚಾಗಿ ಕ್ಯಾಥೊಲಿಕ್ ಶಾಲೆಗಳಲ್ಲಿ ಬೆಳೆದವನು. ಚಿನ್ನದಂಥ ಮನುಷ್ಯನಾಗಿದ್ದ ನನ್ನ ಚಿಕ್ಕಪ್ಪ ಹ್ಯೂಗೋತಿಯೇ ಪ್ಯಾರಿಸ್ಸಿನ ಒಂದು ಸುಂದರ ಚರ್ಚಿನ ಅರ್ಚಕನಾಗಿದ್ದ. ಫ್ರಾನ್ಸಿನಲ್ಲಿ ಪ್ರಸಿದ್ಧ ಕಲಾವಿದನಾಗಿದ್ದ ನನ್ನ ತಂದೆ ಜೀವನವಿಡೀ ನಿಷ್ಠಾವಂತ ಕ್ಯಾಥೊಲಿಕ್. ಅವರು ಪ್ರತಿದಿನ ಚರ್ಚಿಗೆ ಹೋಗುತ್ತಿದ್ದರು.... ಆದರೂ ಸೋನಿಯಾ ಗಾಂಧಿಯ ರಾಜ್ಯಭಾರದಲ್ಲಿ ಕ್ರೈಸ್ತ ಧರ್ಮ ಎಷ್ಟೊಂದು ಪ್ರಮಾಣದಲ್ಲಿ ಭಾರತವನ್ನು ವಶಕ್ಕೆ ತೆಗೆದುಕೊಳ್ಳುತ್ತಿದೆ ಎಂಬುದನ್ನು ನೋಡಿದಾಗ ನಾನು ಕಸಿವಿಸಿಗೊಳ್ಳುತ್ತೇನೆ. 2001ನೇ ಸೆನ್ಸಸ್ ಪ್ರಕಾರ ಭಾರತದಲ್ಲಿ 23.4 ಲಕ್ಷ ಕ್ರೈಸ್ತರಿದ್ದಾರೆ. ಎಂದರೆ ಶೇಕಡಾ 2.5 ರಷ್ಟೂ ಇಲ್ಲ. ಇದೊಂದು ನಗಣ್ಯ ಸಂಖ್ಯೆ. ಆದರೂ ಇಂದು ಭಾರತದಲ್ಲಿ ಐದು ಜನ ಕ್ರೈಸ್ತ ಮುಖ್ಯಮಂತ್ರಿಗಳಿದ್ದಾರೆ-ನಾಗಾಲ್ಯಾಂಡ್, ಮಿಜೋರಾಂ, ಮೇಘಾಲಯ, ಕೇರಳ ಮತ್ತು ಆಂಧ್ರ ಪ್ರದೇಶ. ಸೋನಿಯಾ ಗಾಂಧಿಯ ಸಮೀಪ ವರ್ತುಲದಲ್ಲಿರುವ ರಾಜಕಾರಣಿಗಳಲ್ಲಿ ಬಹುತೇಕರು ಕ್ರೈಸ್ತರು ಅಥವಾ ಮುಸ್ಲಿಮರು. ಆಕೆಗೆ ಹಿಂದೂಗಳಲ್ಲಿ ನಂಬಿಕೆ ಇಲ್ಲವೆಂದು ತೋರುತ್ತದೆ. ಕ್ರೈಸ್ತಳಾದ ಅಂಬಿಕಾ ಸೋನಿ ಕಾಂಗ್ರೆಸ್ಸಿನ ಜನರಲ್ ಸೆಕ್ರೆಟರಿ, ರಾಜಕೀಯವಾಗಿ ಬಹಳ ಬಲಶಾಲಿಯಾದ ವ್ಯಕ್ತಿ. ಸೋನಿಯಾ ಗಾಂಧಿಗೆ ಹತ್ತಿರದ ಪ್ರವೇಶಾಧಿಕಾರವುಳ್ಳವಳು. ಆಸ್ಕರ್ ಫರ್ನಾಂಡೀಸರು ಕೇಂದ್ರ ಸರಕಾರದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಮಂತ್ರಿ. ಮಾರ್ಗರೇಟ್ ಆಳ್ವಾ ಮಹಾರಾಷ್ಟ್ರದಲ್ಲಿ ಭಯ ಹುಟ್ಟಿಸುವಂಥ ಹೆಗ್ಗಳಿಕೆಯವರು. ಕರ್ನಾಟಕವು ವಸ್ತುತಃ ಎ.ಕೆ. ಆಂಟನಿಯವರ ನಿಯಂತ್ರಣದಲ್ಲಿದೆ; ಅವರ ಕಾರ್ಯದರ್ಶಿಗಳೆಲ್ಲ ದಕ್ಷಿಣ ಭಾರತದ ಕ್ರೈಸ್ತ ಸಂಘಟನೆಯಿಂದ ಬಂದವರು. ಹಿಂದೂ ದ್ವೇಷಿಯಾದ ವಾಲ್ಸನ್ ಥಂಪುವು ಎನ್‌ಸಿಇಆರ್‌ಟಿ (ನ್ಯಾಷನಲ್ ಕೌನ್ಸಿಲ್ ಫಾರ್ ಎಜುಕೇಷನಲ್ ರೀಸರ್ಚ್ ಅಂಡ್ ಟ್ರೈನಿಂಗ್) ಪಠ್ಯಕ್ರಮದ ವಿಮರ್ಶಾ ಸಮಿತಿಯ ಅಧ್ಯಕ್ಷ. ಹಿಂದೂ ಹಿಂಸಕನೆಂದೇ ಪ್ರಸಿದ್ಧನಾದ ಜಾನ್ ದಯಾಳ್ ಸೋನಿಯಾ ಗಾಂಧಿಯಿಂದ ರಾಷ್ಟ್ರೀಯ ಭಾವೈಕ್ಯತಾ ಸಮಿತಿಗೆ ನಾಮಕರಣಗೊಂಡವನು. ಹಿಂದೂದ್ವೇಷಿ ಕಾಂಚಾ ಐಲಯ್ಯ ಅವರಿಗೆ ವಿಶ್ವಸಂಸ್ಥೆ ಮತ್ತು ಅಮೆರಿಕದ ಸಂಸತ್ತಿನಲ್ಲಿ ಭಾರತದಲ್ಲಿ ಜಾತಿ ಭೇದವಿರುವುದೆಂದೂ, ಅವನ್ನು ಈ ಸಂಸ್ಥೆಗಳು

ಕೈಗೆತ್ತಿಕೊಳ್ಳಬೇಕೆಂದೂ ಪಶೀಲಿಮಾಡಲು ಭಾರತ ಸರಕಾರವು ಅನುಮತಿ ಕೊಟ್ಟಿದೆ..... ಸೋನಿಯಾ ಗಾಂಧಿ ವಿರುದ್ಧ ನನಗೆ ವೈಯಕ್ತಿಕವಾಗಿ ಏನೂ ಕಹಿ ಭಾವನೆ ಇಲ್ಲ.... ಆದರೆ ಆಕೆ ಅಧಿಕಾರದ ಅತ್ಯುನ್ನತ ಸ್ಥಾನದಲ್ಲಿ ತೊಡಗಿದಂದಿನಿಂದ ಕ್ರೈಸ್ತ ಮತಕ್ಕೆ ಪರಿವರ್ತನೆಗೊಳ್ಳುತ್ತಿರುವವರ ಸಂಖ್ಯೆ ನಾಗಾಲೋಟ ಹೊಡೆಯುತ್ತಿದೆ. ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ ನಾಲ್ಕು ಸಾವಿರಕ್ಕೂ ಹೆಚ್ಚು ವಿದೇಶಿ ಮಿಶನರಿಗಳು ಕ್ರೈಸ್ತ ಧರ್ಮ ಪ್ರಚಾರದಲ್ಲಿ ತೊಡಗಿಕೊಂಡಿದ್ದಾರೆ. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ತ್ರಿಪುರದಲ್ಲಿ ಕ್ರೈಸ್ತರೇ ಇರಲಿಲ್ಲ; ಈಗ ಒಂದು ಲಕ್ಷ ಇಪ್ಪತ್ತು ಸಾವಿರದಷ್ಟಿದ್ದಾರೆ. 1991ರಿಂದ ಅವರ ಸಂಖ್ಯೆಯಲ್ಲಿ ಶೇ. 90ರಷ್ಟು ಹೆಚ್ಚಳವಾಗಿದೆ. ಅರುಣಾಚಲ ಪ್ರದೇಶದಲ್ಲಿ ಈ ಸಂಖ್ಯೆಯು ಇನ್ನೂ ಏನ್ನು ಹೊಡೆದು ಕಾಣುತ್ತದೆ. 1921ರಲ್ಲಿ 1770 ಕ್ರೈಸ್ತರಿದ್ದದ್ದು, ಈಗ ಹನ್ನೆರಡು ಲಕ್ಷವಿದ್ದಾರೆ; ಅಲ್ಲದೇ 780 ಚರ್ಚುಗಳಿವೆ. ಆಂಧ್ರ ಪ್ರದೇಶದಲ್ಲಂತೂ ಹೊಸ ಹೊಸ ಚರ್ಚುಗಳು ಪ್ರತಿದಿನವೂ ದೂರದೂರದ ಹಳ್ಳಿಗಳಲ್ಲಿ ತಲೆ ಎತ್ತುತ್ತಿರುವುದು ಮಾತ್ರವಲ್ಲದೆ ತಿರುಪತಿಯಲ್ಲೂ ಕಟ್ಟುವ ಹುನ್ನಾರ ನಡೆದಿದೆ. ಈಶಾನ್ಯ ರಾಜ್ಯಗಳ ಮಿಜೋ, ಬೋಡೋಗಳಂಥ ಹಲವು ಚಳವಳಿಗಳು ಕ್ರೈಸ್ತ ಪ್ರಬಲವಾಗಿರುವುದು ಮಾತ್ರ ವಲ್ಲದೆ ಮಿಶನರಿಗಳ ಕುಮ್ಮಕ್ಕಿನಿಂದಲೇ ನಡೆಯುತ್ತಿವೆ..... ಕಳೆದ ಎರಡು ದಶಕಗಳಲ್ಲಿ ಅಸ್ಸಾಮ್ ಮತ್ತು ಮಣಿಪುರಗಳಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ಜನರು ದಂಗೆಯಿಂದ ಜೀವ ಕಳೆದುಕೊಂಡಿದ್ದಾರೆ.... ಸರಕಾರದ ಮಾಲೀಕತ್ವದಲ್ಲಿರುವ ಇಂಡಿಯನ್ ಏರ್‌ಲೈನ್ಸ್‌ನವರು ದ್ವಾರಕಾ ಪೀಠದ ಸಂನ್ಯಾಸಿ ಅವಿಮುಕ್ತಾನಂದ ಸರಸ್ವತಿ ಅವರನ್ನು ಕೈಯಲ್ಲಿ ತನ್ನ ಸಂನ್ಯಾಸದ ಲಾಂಛನವಾದ ಒಂದು ದಂಡವನ್ನು ಹಿಡಿದುಕೊಂಡಿದ್ದರಿಂದ ವಿಮಾನದಿಂದ ಕೆಳಗಿಳಿಸಿದರು. ಅದೊಂದು ಸಣ್ಣ ಬಿದಿರು ತುಂಡು. ಸೋನಿಯಾ ಗಾಂಧಿಯಂಥ ವಿದೇಶಿಗೆ ರಾಷ್ಟ್ರದ ಪಟ್ಟ ಕಟ್ಟಿದ ಈ ದುರ್ಬಲ ದೇಶದಲ್ಲಲ್ಲದೇ ಇಂಥ ಘಟನೆ ಬೇರೆ ಯಾವ ದೇಶದಲ್ಲಿ ನಡೆಯಲು ಸಾಧ್ಯ?'

ನಾನು ಇಲ್ಲಿ ಫ್ರಾಂಕ್ವಾ ಗೋತಿಯೆ ಅವರ ಲೇಖನದ ಕೆಲವು ವಾಕ್ಯಗಳನ್ನಷ್ಟೇ ಉದ್ಧರಿಸಿದ್ದೇನೆ. (Francois Gautier: www.francoisgautier.com 09343538419, 09442123255).

ಕ್ರೈಸ್ತರ ಧರ್ಮಗುರು ಪೋಪ್ ಭಾರತಕ್ಕೆ ಭೇಟಿ ಕೊಟ್ಟಾಗ ಇಡೀ ಮಾಧ್ಯಮವು ಅದರಲ್ಲೂ ಇಂಗ್ಲಿಷ್ ಪತ್ರಿಕೆಗಳು ಮತ್ತು ಟಿವಿ ಚಾನೆಲ್‌ಗಳು ಎಷ್ಟೊಂದು ಸಂಭ್ರಮ ಪಟ್ಟವು? ಸಂಭ್ರಮ ಸೃಷ್ಟಿಸಿದವು! ಒಬ್ಬ ರಾಷ್ಟ್ರಾಧ್ಯಕ್ಷನಿಗೆ ಸಲ್ಲುವ ಸ್ವಾಗತವನ್ನು ಭಾರತ ಸರಕಾರವು ಸಲ್ಲಿಸಿತು. ಭಾರತದ ರಾಷ್ಟ್ರಾಧ್ಯಕ್ಷರು, ಪ್ರಧಾನಿಯಾದಿಯಾಗಿ ಮಂತ್ರಿಗಣವು ಸಾಲುಗಟ್ಟಿ ಅಭಿವಂದಿಸಿತು. ಇವರು ಭಾರತಕ್ಕೆ ಬರುತ್ತಿರುವುದು ನಮ್ಮ ಜನಗಳ ಮತ ಪರಿವರ್ತನೆಗೆ, ಈತನಿಗೆ ದೇಶದಲ್ಲಿ ಪ್ರವೇಶ ಕೊಡಕೂಡದು, ಕೊಟ್ಟರೂ ಸರ್ಕಾರದ

ವತಿಯಿಂದ ಸ್ವಾಗತ ನೀಡಕೂಡದು ಎಂದು ಕೆಲವು ಹಿಂದೂ ಸಂಘಟನೆಗಳು ದನಿ ಎತ್ತಿದ್ದಕ್ಕೆ, ಇಂಗ್ಲಿಷ್ ಮಾಧ್ಯಮಗಳು ಮತ್ತು ಪ್ರಗತಿಪರರೆಂದು ವೇಷಹಾಕುವ ಗುಂಪುಗಳು ಹಿಂದೂ ಮೂಲಭೂತವಾದಿಗಳೆಂದು ಬಾಯಿ ಬಡಿದುಕೊಂಡವು. ಆದರೂ ಈ ಪೋಪ್ ಮಹಾಶಯ ಮಾಡಿದ್ದೇನು? 'ಮೊದಲನೆಯ ಸಹಸ್ರಮಾನದಲ್ಲಿ ಶಿಲುಬೆಯನ್ನು ಯುರೋಪಿನ ನೆಲದಲ್ಲಿ ನೆಟ್ಟಂತೆ, ಎರಡನೆ ಸಹಸ್ರಮಾನದಲ್ಲಿ ಅಮೆರಿಕಗಳು ಮತ್ತು ಆಫ್ರಿಕದಲ್ಲಿ ನೆಟ್ಟಂತೆ, ಮೂರನೆಯ ಸಹಸ್ರಮಾನದಲ್ಲಿ ನಮ್ಮ ನಂಬಿಕೆಯ ಭಾರೀ ಫಸಲನ್ನು ಈ ದೊಡ್ಡ ಮತ್ತು ಸಶಕ್ತ ಖಂಡದಲ್ಲಿ (ಏಷ್ಯಾ) ತೆಗೆಯುತ್ತೇವೆ ಎಂದು ರಾಜಾರೋಷವಾಗಿ ಘೋಷಿಸಿದರು. ಪೋಪರು ತಮ್ಮ ಉದ್ದೇಶದಲ್ಲಿ ಮುಚ್ಚುಮರೆ ಮಾಡಲಿಲ್ಲ. ಆದರೆ ಹಿಂದೂ ಸಂಘಟನೆಗಳನ್ನು ಮೂಲಭೂತವಾದಿಗಳೆಂದು ಬಾಯಿಬಡಿದುಕೊಂಡಿದ್ದ ಮಾಧ್ಯಮದವರು ಮತ್ತು ಪ್ರಗತಿಶೀಲ ವೇಷಧಾರಿಗಳು ಸದ್ಯಕ್ಕೆ ಜಾಣ ಮೌನ ತಾಳಿದರು.

## ಅವ್ಯಾಹತ ಕ್ರಿಸ್ತೀಕರಣ: ಪ್ರಗತಿಪರರ ಜಾಣ ಮೌನ

ಮೊದಲಿನಿಂದಲೂ ಕ್ರೈಸ್ತ ಮತದ ಸೋಂಕಿಲ್ಲದೆ ತಮ್ಮ ತಮ್ಮ ಮೂಲ ಮತಗಳನ್ನು ಅನುಸರಿಸಿಕೊಂಡು ಬದುಕುತ್ತಿದ್ದ ಈ ಕೆಳಕಂಡ ದೇಶಗಳು ಆಕ್ರಮಣಕಾರಿ ಮಿಶನರಿಗಳ ತಂತ್ರಗಳಿಂದ ಕ್ರೈಸ್ತರಾಗಿರುವ ಶೇಕಡವಾರು ಸಂಖ್ಯೆಯು ಈ ರೀತಿ ಇದೆ: ಅಂಗೋಲಾ ಶೇಕಡ 90, ಬುರುಂಡಿ ಶೇಕಡ 78, ಕೆಮರೂನ್ ಶೇಕಡ 35, ಸೆಂಟ್ರಲ್ ಆಫ್ರಿಕನ್ ರಿಪಬ್ಲಿಕ್ ಶೇಕಡ 82, ಚಾಡ್ ಶೇಕಡ 33, ಕಾಂಗೋ ಶೇಕಡ 62, ಪೂರ್ವ ತೈಮೂರ್ ಶೇ. 98, ಇಥಿಯೋಪಿಯಾ ಶೇ. 52, ಈಕ್ವಟೋರಿಯಲ್ ಗಿನಿ ಶೇ. 94, ಗಬನ್ ಶೇ. 79, ಕೆನ್ಯಾ ಶೇ. 25, ಲೈಬೀರಿಯಾ ಶೇ. 68, ಮೊಜಾಂಬಿಕ್ ಶೇ. 31, ನೈಜೀರಿಯಾ ಶೇ. 52, ಪಾಪುವಾ ನ್ಯೂಗಿನೀ ಶೇ. 97, ಫಿಲಿಪ್ಪೀನ್ಸ್ ಶೇ. 84, ರುವಾಂಡ ಶೇ. 69, ದಕ್ಷಿಣ ಆಫ್ರಿಕಾ ಶೇ. ೭೮, ದಕ್ಷಿಣ ಕೊರಿಯಾ ಶೇ. 49, ಸೂಡಾನ್ ಶೇ. 30, ತಾಂಜಾನಿಯಾ ಶೇ. 20, ಟೋಗೋ ಶೇ. 23, ಉಗಾಂಡಾ ಶೇ. 70, ಜೈರೆ ಶೇ. 90.

ಮಿಶನರಿ ಕೆಲಸಗಳಿಗೆ ಅಮೆರಿಕದಿಂದ (USA) ವರ್ಷಕ್ಕೆ 145 ಬಿಲಿಯನ್ ಡಾಲರ್ ಹರಿದು ಬರುತ್ತದೆ. ಇಡೀ ಪ್ರಪಂಚದಲ್ಲಿ ಚರ್ಚುಗಳು 1.1 ಬಿಲಿಯನ್ ಡಾಲರ್‌ಗಳನ್ನು ಮತಪರಿವರ್ತನೆಯನ್ನು ಗುರಿಯಾಗಿಟ್ಟುಕೊಂಡ ಸಂಶೋಧನೆಗೆ ಖರ್ಚು ಮಾಡುತ್ತವೆ. ಇವುಗಳು 300 ಭಾಷೆಗಳಲ್ಲಿ 180 ವಿಷಯಗಳನ್ನು ಕುರಿತದ್ದಾಗಿರುತ್ತವೆ. ಪುಸ್ತಕ ಅಥವಾ ಲೇಖನಗಳು 500 ಭಾಷೆಗಳಲ್ಲಿ ಪ್ರಕಟವಾಗುತ್ತವೆ. ಅವುಗಳ ಒಟ್ಟು ಸಂಖ್ಯೆ 175000. ಪ್ರತಿಯೊಬ್ಬ ವ್ಯಕ್ತಿಯ ಮತ ಪರಿವರ್ತನೆಗೂ ಒಟ್ಟು 3,3000 ಡಾಲರ್‌ಗಳು ಖರ್ಚಾಗುತ್ತವೆ. ಈ ಮೊತ್ತವು ಪರಿವರ್ತಿತನಾಗುವವನಿಗೆ ಸೇರುತ್ತದೆಂದಲ್ಲ. ಪರಿವರ್ತನಾ ಚಟುವಟಿಕೆಗಳ ಆಡಳಿತ, ಯೋಜನೆ, ಕಾರ್ಯಾಚರಣೆ ಇವುಗಳ ಒಟ್ಟು ಲೆಕ್ಕದಲ್ಲಿ ಈ ಖರ್ಚನ್ನು ಲೆಕ್ಕಹಾಕಲಾಗಿದೆ. ಕ್ರಿ.ಶ. 1500ರಲ್ಲಿ ಮಿಶನರಿ ಕಾರ್ಯದಲ್ಲಿ ತೊಡಗಿಸಿಕೊಂಡ ಕ್ರೈಸ್ತರ

ಸಂಖ್ಯೆ ಮೂವತ್ತು ಲಕ್ಷವಿತ್ತು. ಈಗ ಅದು 64.8 ಕೋಟಿಯಾಗಿದೆ. ಅದರಲ್ಲಿ ಶೇ. 54 ಬಿಳಿಯೇತರರೇ ಆಗಿದ್ದಾರೆ. ಎಂದರೆ ಬಿಳಿಯೇತರರಿಗೆ ತರಬೇತಿ ಕೊಟ್ಟು ಹಣ, ಪ್ರಭಾವಗಳನ್ನು ಒದಗಿಸಿ ಮಿಶನರಿ ಕೆಲಸಗಳಲ್ಲಿ ತೊಡಗಿಸುವುದು ಈ ತಂತ್ರವಾಗಿದೆ. ಇದು ಬ್ರಿಟಿಷರ ಕಾಲದಲ್ಲಿ ಭಾರತೀಯರನ್ನು ಸೈನಿಕರಾಗಿ ನೇಮಿಸಿಕೊಂಡು ಸರಿಯಾದ ಸಂಬಳ ಸಾರಿಗೆ ಕೊಟ್ಟು ಭಾರತವನ್ನು ಆಳಲು ಬಳಸಿಕೊಳ್ಳುತ್ತಿದ್ದಂತೆ.

ಇದರಿಂದ ಯಾವ ಅಧ್ಯಾತ್ಮ ಸಾಧನೆಯಾಗುತ್ತದೆ? ಭಾರತೀಯರಿಗೆ ಇದು ಅರ್ಥವಾಗದ ಸಮಸ್ಯೆ. ಏಕೆಂದರೆ ಭಾರತೀಯರಿಗೆ ಅಧ್ಯಾತ್ಮವೆಂದರೆ ಕಾಡಿನ ಪರ್ಣಶಾಲೆಯಲ್ಲಿ, ಬೆಟ್ಟದ ಗುಹೆಗಳಲ್ಲಿ, ಹಿಮಾಲಯದ ಹೆಪ್ಪುಗಟ್ಟಿಸುವ ಎತ್ತರದಲ್ಲಿ ಕುಳಿತು ಅಂತರ್ಮುಖಿಯಾಗುವ ಸಾಧನೆ. ತನ್ನೊಳಗೆ ಬೆಳಕು ಸಾಧಿಸುವ ಮುನ್ನ ಅನ್ಯರಿಗೆ ಉಪದೇಶ ಮಾಡುವ ಅಧಿಕಾರವಿರುವುದಿಲ್ಲ. ಉಪದೇಶ ಮಾಡುವುದಾದರೂ ಏನನ್ನು? ಅಂತರ್ಮುಖಿಯಾಗು. ನಿನ್ನನ್ನು ನೀನು ಅರಿ. ಧರ್ಮವೆಂದರೆ ಈ ಅರಿವು. ಅದನ್ನು ವಿವರಿಸುವ ರೀತಿಗೆ ಜಿಜ್ಞಾಸೆ ಎಂದು ಹೆಸರು. ಆದರೆ ಕ್ರೈಸ್ತಮತದ ತಿರುಳಾಗಲಿ, ರೀತಿಯಾಗಲಿ ಅದಲ್ಲ.

ಕ್ರೈಸ್ತ ಮತವನ್ನು ಅರ್ಥಮಾಡಿಕೊಳ್ಳಬೇಕಾದರೆ ಸೆಮೆಟಿಕ್ ರಿಲಿಜನ್‌ಗಳ ಗುಣಲಕ್ಷಣಗಳನ್ನು ನಾವು ತಿಳಿಯಬೇಕು. ಇವುಗಳನ್ನು ಪ್ರವಾದಿ ಮತಗಳು (Prophetic Religions) ಎಂದು ಕೂಡ ಕರೆಯುತ್ತಾರೆ. ಎಂದರೆ ಈ ಮತಗಳು ಒಬ್ಬೊಬ್ಬ ಪ್ರವಾದಿಯಿಂದ ಸ್ಥಾಪಿತವಾದವು. ಪ್ರವಾದಿ ಅಬ್ರಹಾಮನಿಂದ ಸ್ಥಾಪಿತವಾದ ಎಹೂದಿ ಮತವು ಮೂಲ. ಅದರ ಪರಿವರ್ತಿತ ರೂಪವೇ ಏಸುವಿನಿಂದ ಸ್ಥಾಪಿತವಾದ ಕ್ರೈಸ್ತ ಮತ. ಅನಂತರ ಅದೇ ಅಬ್ರಹಾಮನ ಮತದ ಎಷ್ಟೋ ಗುಣಲಕ್ಷಣಗಳನ್ನು ಅಳವಡಿಸಿಕೊಂಡು ಪ್ರವಾದಿ ಮಹಮ್ಮದರಿಂದ ಸ್ಥಾಪಿತವಾದದ್ದು ಇಸ್ಲಾಂ. ಈ ಮೂರೂ ಪ್ರವಾದಿ ಮತಗಳಲ್ಲಿರುವ ಸಾಮಾನ್ಯ ಅಂಶವೆಂದರೆ: ದೇವರು ನಿಮಗೆ ನೇರವಾಗಿ ಲಭ್ಯನಲ್ಲ. ನೀವು ಮೂಲತಃ ಪಾಪಿಗಳು. ದೇವರು ಮಹಾ ಭಯಂಕರ, ಮಹಾಕ್ರೂರ ಶಿಕ್ಷೆಯನ್ನು ಮುಲಾಜಿಲ್ಲದೆ ಕೊಡುವವನು. ಪ್ರವಾದಿಯಾದ ನನ್ನನ್ನು ನಂಬಿ ನನ್ನ ಬೋಧೆಯಂತೆ ನಡೆದರೆ ನಿನಗೆ ಸತ್ತ ನಂತರ ಘೋರ ನರಕಕ್ಕೆ ಬೀಳುವುದನ್ನು ತಪ್ಪಿಸಿಕೊಳ್ಳುವ ಅವಕಾಶವುಂಟು. ಇಲ್ಲದಿದ್ದರೆ ಕೊನೆ ಇಲ್ಲದ ನೋವಿನ ನರಕ ಕಟ್ಟಿಟ್ಟದ್ದು. ನೀನು ನಂಬಬೇಕು. ಇತರರನ್ನು ನಂಬಿಸಬೇಕು. ಎಲ್ಲೆಲ್ಲಿಯೂ ಹೋಗಿ ಬಲ ಪ್ರಯೋಗವನ್ನಾದರೂ ಮಾಡಿ ನಂಬುವವರನ್ನು ಹೆಚ್ಚಿಸಬೇಕು. ಅದೇ ಧರ್ಮ, ಅದೇ ನೀತಿ. ನಂಬದವರನ್ನು ಹಿಂಸಿಸಿ ಕೊಲ್ಲುವ, ಗುಲಾಮರನ್ನಾಗಿ ತುಳಿದು ದುಡಿಸಿಕೊಳ್ಳುವ ವಿಧಾನವನ್ನು ಪ್ರವಾದಿ ಮಹಮದರು ಬೋಧಿಸಿದರು. ಈ ಬೋಧನೆಯು ಹಲವು ಕಡೆಗಳಲ್ಲಿ ಪ್ರಖರವಾಗಿ ಪ್ರಧಾನವಾಗಿ ಕುರಾನಿನ ಅವಿಭಾಜ್ಯ ಅಂಗವಾಗಿದೆ. ಅನ್ಯಮತಗಳ ದೇವರುಗಳನ್ನು ಯಾವ ಪ್ರವಾದಿಯೂ ಸಹಿಸುವುದಿಲ್ಲ. ನನ್ನ 'ಆವರಣ' ಕಾದಂಬರಿಯಲ್ಲಿ ಈ ಗುಣಲಕ್ಷಣಗಳನ್ನು ಚಿತ್ರಿಸಿದ್ದೇನೆ.

ಸಮರ್ಪಕ ಉತ್ತರ ಇಲ್ಲ

ಏಸುವೂ ಇಂಥ ಒಬ್ಬ ಪ್ರವಾದಿಯೇ.... ಆದರೆ ಅವನು ಪ್ರವಾದಿ ಅಬ್ರಹಾಮನ ಬೋಧನೆಗಿಂತ ಭಿನ್ನವಾದ ತಾಳ್ಮೆ ಮತ್ತು ಪ್ರೇಮವನ್ನು ಬೋಧಿಸಿದನೆಂದು ಪ್ರತೀತಿ. ವಾಸ್ತವವಾಗಿ ಏಸುವೆಂಬ ಒಬ್ಬ ವ್ಯಕ್ತಿ ಇದ್ದನೇ? ಎಂಬ ಸಂಶಯವು ಸಂಶೋಧಕರಲ್ಲಿದೆ. ಇದ್ದಿದ್ದರೂ ಅವನು ಬೈಬಲಿನ ಹೊಸ ಒಡಂಬಡಿಕೆಯಲ್ಲಿ ಚಿತ್ರಿತವಾಗಿರುವಂತೆ ಇದ್ದನೇ? ಎಂಬ ಇನ್ನೊಂದು ಸಂಶಯವೂ ಪ್ರಬಲವಾಗಿದೆ. Dead Sea Scrolls ಸಂಶೋಧನೆಯಾದ ನಂತರ ಈ ಸಂಶಯವು ತುಂಬ ಗಟ್ಟಿಯಾಗಿದೆ. ವಾಸ್ತವವಾಗಿ ಕ್ರೈಸ್ತ ಧರ್ಮಕ್ಕೆ ಈಗಿರುವ ಸ್ವರೂಪವನ್ನು ಕೊಟ್ಟವನು ಚರ್ಚಿನ ಸ್ಥಾಪಕನಾದ ಪಾಲ್. ಅದು ಏನೇ ಇರಲಿ, ನೀವು ಬೈಬಲನ್ನು ನಂಬದಿದ್ದರೆ ನಿಮಗೆ ಮಹಾಘೋರ ನರಕವೇ ಗತಿ ಎಂಬ ವಿಷಯದಲ್ಲಿ ಬೈಬಲ್ಲಿಗೂ ಕುರಾನಿಗೂ ವ್ಯತ್ಯಾಸವಿಲ್ಲ. ನಮ್ಮ ಏಸುವನ್ನು ಶಿಲುಬೆಗೆ ಏರಿಸಿದವರು ಎಹೂದಿಗಳು ಎಂಬ (ತಪ್ಪು) ಗ್ರಹಿಕೆಯಿಂದ ಅನಂತರ ಪ್ರಬಲರಾದ ಕ್ರೈಸ್ತರು, ಎಹೂದಿಗಳನ್ನು ಹಿಂಸಿಸತೊಡಗಿ, ಬಲವಂತ ಮತಾಂತರಗೊಳಿಸಿ, ಮತಾಂತರಕ್ಕೆ ಒಪ್ಪದವರನ್ನು ಮತ್ತಷ್ಟು ಹಿಂಸಿಸಿದ್ದರಿಂದ ಎಹೂದಿಗಳು ಬೇರೆಯವರನ್ನು ಮತಾಂತರಿಸಲು ಹೋಗಲಿಲ್ಲ. ಅಷ್ಟು ಮಾತ್ರವಲ್ಲ, ಆರಂಭ ಕಾಲದಿಂದಲೇ ಎಹೂದಿ ಧರ್ಮೀಯರು ಬೇರೆಯವರಿಂದ ಹಿಂಸೆಯನ್ನನುಭವಿಸಿದರು. ಇವತ್ತೂ ಅನುಭವಿಸುತ್ತಿದ್ದಾರೆ. ಹಿಟ್ಲರನು ಅರವತ್ತು ಲಕ್ಷ ಯಹೂದಿಗಳನ್ನು ಅನಿಲ ಕೋಣೆ (ಗ್ಯಾಸ್ ಚೇಂಬರ್) ಗಳಲ್ಲಿ ಕೊಲ್ಲುತ್ತಿದ್ದುದು ಆಗ ಪೋಪರಾಗಿದ್ದ 12ನೇ ಪಯಸ್‌ಗೆ ಗೊತ್ತಿತ್ತು. ಪೋಪ್ ಪಯಸನು 'ಹಿಟ್ಲರನ ಪೋಪ್' ಎಂದೇ ಕುಖ್ಯಾತನಾಗಿದ್ದಾನೆ. ಅವರು ಮನಸ್ಸು ಮಾಡಿದ್ದರೆ ಕ್ರೈಸ್ತನಾದ ಹಿಟ್ಲರನಿಗೆ ಹೇಳಿ ಆ ಮಹಾಸಾಮೂಹಿಕ ಕೊಲೆಯನ್ನು ಸ್ವಲ್ಪಮಟ್ಟಿಗಾದರೂ ನಿಲ್ಲಿಸಬಹುದಿತ್ತು. ಆದರೆ ನಮ್ಮ ಏಸುವನ್ನು ಶಿಲುಬೆಗೆ ಏರಿಸಿದ ಆ ಜನಾಂಗದವರು ಸಾಯಲಿ ಎಂದು ಪೋಪರು ಸುಮ್ಮನಿದ್ದರು ಎಂಬ ಆಪಾದನೆಯು ಪ್ರಬಲವಾಗಿದೆ. ಅದಕ್ಕೆ ಕ್ರೈಸ್ತರು ಸಮರ್ಪಕ ಉತ್ತರ ಕೊಟ್ಟಿಲ್ಲ.

ಗೋವಾ ಇನ್‌ಕ್ವಿಸಿಶನ್ (Goa Inquisition) ಎಂದು ಕುಪ್ರಸಿದ್ಧವಾಗಿರುವ, ಮತಾಂತರಕ್ಕೆ ಒಪ್ಪದವರನ್ನು ಪೋರ್ಚುಗೀಸ್ ಪಾದ್ರಿಗಳು (1560ರಿಂದ 1817ರ ನಡುವಿನ ಇನ್ನೂರೈವತ್ತೆರಡು ವರ್ಷಗಳ ಅವಧಿಯಲ್ಲಿ) ಮಾಡುತ್ತಿದ್ದ ಕ್ರೂರ ಹಿಂಸೆಗಳ ವಿವರಗಳು ದಾಖಲಾಗಿವೆ. ಈ ಇನ್‌ಕ್ವಿಸಿಶನ್ ಕಾನೂನುಗಳು 230 ಪುಟಗಳಷ್ಟು ದೊಡ್ಡದಾಗಿದ್ದವು. (Inquisition= ತನಿಖೆ, ಹಿಂಸಾತ್ಮಕ ತನಿಖೆ). ಸ್ಟಾಲಿನ್ ಮಾಡುತ್ತಿದ್ದ ಕ್ರೂರ ಹಿಂಸಾತ್ಮಕ ತನಿಖೆಯ ವಿಧಾನಗಳು ಕ್ರೈಸ್ತ Inquisition ತನಿಖೆಗಳ ಮಾದರಿಯಿಂದ ಅಳವಡಿಸಿಕೊಂಡವು. ಗೋವಾದಲ್ಲಿ ಈ ತನಿಖೆಯನ್ನು ದೊಡ್ಡಮನೆ ಎಂಬಲ್ಲಿ ಕಿಟಕಿ ಬಾಗಿಲುಗಳನ್ನು ಮುಚ್ಚಿ ಮಾಡುತ್ತಿದ್ದರು. ಏಸುವನ್ನು ನಂಬುವುದಿಲ್ಲವೆಂದು ಹೇಳುವವನು

ಸೈತಾನನ ಪ್ರಭಾವಕ್ಕೆ ಒಳಗಾದವನೇ ಇರಬೇಕು. ಶಿಕ್ಷೆಯಿಂದ ಅವನ ಬಾಯಿ ಬಿಡಿಸಬೇಕು ಎಂದು ನಂಬಿದ ಗಂಡಸು, ಹೆಂಗಸು ಮತ್ತು ಮಕ್ಕಳನ್ನು ನಾನಾ ತರಹದ ಕ್ರೌರ್ಯಕ್ಕೆ ಒಳಪಡಿಸುತ್ತಿದ್ದರು. ರಾತ್ರಿಯ ನಿಶ್ಶಬ್ದದಲ್ಲಿ ಈ ಬಲಿಮಾನವರು ನೋವಿನಿಂದ ಚೀತ್ಕರಿಸುತ್ತಿದ್ದುದು ಕೇರಿಯ ಇತರರಿಗೂ ಕೇಳಿಸುತ್ತಿತ್ತು. ಅವರಿಗೆ ಚಾವಟಿಯಿಂದ ಬಾರಿಸುತ್ತಿದ್ದರು. ಅವರ ದೇಹದ ಅಂಗಗಳನ್ನು ಹರಿಯುತ್ತಿದ್ದರು, ಮುರಿಯುತ್ತಿದ್ದರು. ಕಣ್ಣು ರೆಪ್ಪೆಗಳನ್ನು ಕೀಳುತ್ತಿದ್ದರು. ಕೈ ಕಾಲುಗಳ ತುದಿಗಳನ್ನು ಸ್ವಲ್ಪಸ್ವಲ್ಪವಾಗಿ ಕತ್ತರಿಸುತ್ತಿದ್ದರು. ಇವೆಲ್ಲವನ್ನೂ ಆತನ (ಅವಳ) ಬಂಧುಗಳೆದುರಿಗೇ ಮಾಡುತ್ತಿದ್ದರು.

ಡ್ಯೆಯಾಗೋ ಡಿ ಬೋರ್ಡೋ ಎಂಬ ಕ್ರೈಸ್ತ ಪೂಜಾರಿ ಮತ್ತು ಚರ್ಚುಗಳ ಪ್ರಾಂತ್ಯಾಧಿಕಾರಿ ಮಿಗ್ವೆಲ್‌ವಾಜ್ ಎಂಬುವವರು ಹಿಂದೂಗಳನ್ನು ಹಿಂಸಿಸುವ 41 ಅಂಶಗಳ ಯೋಜನೆಯನ್ನು ಸಿದ್ಧಪಡಿಸಿದರು. ಈ ಯೋಜನೆಯಡಿಯಲ್ಲಿ ಗೋವಾದ ವೈಸ್‌ರಾಯ್ ಆಗಿದ್ದ ಅಂಟಾನೋಡಿ ನೊರೋನ್ಹಾನು 1566ರಲ್ಲಿ ಪೋರ್ಚುಗೀಸ್ ಆಳ್ವಿಕೆಯಲ್ಲಿದ್ದ ಇಡೀ ಪ್ರದೇಶಕ್ಕೆ ಅನ್ವಯವಾಗುವಂತೆ ಕೆಳಕಂಡ ಹುಕುಂ ಅನ್ನು ಜಾರಿ ಮಾಡಿದ. 'ನಾನು ಈ ಮೂಲಕ ಹುಕುಂ ಮಾಡುವುದೇನೆಂದರೆ ನನ್ನ ದೊರೆಯ ಆಡಳಿತದಲ್ಲಿರುವ ಪ್ರದೇಶದಲ್ಲಿ ಯಾರೂ ಒಂದೂ ಹಿಂದೂ ದೇವಾಲಯವನ್ನು ಕಟ್ಟಕೂಡದು: ಈಗಾಗಲೇ ಕಟ್ಟಿರುವ ಯಾವ ದೇವಾಲಯದ ದುರಸ್ತಿಯನ್ನೂ ನನ್ನ ಅನುಮತಿ ಇಲ್ಲದೆ ಮಾಡಕೂಡದು. ಈ ಹುಕುಂ ಅನ್ನು ಉಲ್ಲಂಘಿಸಿದರೆ ಆ ದೇವಾಲಯಗಳನ್ನು ನಾಶಪಡಿಸಿ, ಅವುಗಳಲ್ಲಿರುವ ವಸ್ತುಗಳನ್ನು ಪುಣ್ಯ ಕೆಲಸಗಳಿಗೆ ಬಳಸಿಕೊಳ್ಳಲಾಗುವುದು.'

ಇದಲ್ಲದೆ ಅವರು ಹುಕುಂ ಮಾಡಿದ ಇನ್ನೂ ಕೆಲವು ಉದಾಹರಣೆಗಳು: ಹಿಂದೂಗಳ ಮದುವೆಯಲ್ಲಿ ಯಾವ ವಾದ್ಯವನ್ನೂ ಬಾರಿಸಕೂಡದು. ವೀಳ್ಯಶಾಸ್ತ್ರದಲ್ಲಿ ಗಂಡು ಮತ್ತು ಹೆಣ್ಣಿನ ಯಾವ ಸಂಬಂಧಿಗಳನ್ನೂ ಕರೆಯಕೂಡದು. ಮದುವೆಯಲ್ಲಿ ಯಾರಿಗೂ ವೀಳ್ಯ ಕೊಡಕೂಡದು. ಹೂವು ಹಣ್ಣು ಅಡಕೆ ಮೊದಲಾದವನ್ನು ಹೆಣ್ಣು ಮತ್ತು ಗಂಡಿನ ಮನೆಗಳಿಗೆ ಕಳಿಸಬಾರದು. ಕುಲದೇವತೆಗಳ ಪೂಜೆ ಮಾಡಕೂಡದು: ಪದ್ಧತಿಯಂತೆ ಮದುವೆಗೆ ಮೊದಲು ಭತ್ತ ಕುಟ್ಟುವ, ಸಂಬಾರ ಪದಾರ್ಥಗಳನ್ನು ಪುಡಿ ಮಾಡುವುದಾಗಲಿ ಕೂಡದು: ಪೆಂಡಾಲ್ ಹಾಕಕೂಡದು. ಯಾರಾದರೂ ಸತ್ತಾಗ ವೈಕುಂಠ ಸಮಾರಾಧನೆ ಅಥವಾ ಗಣಾರಾಧನೆ ಮಾಡಕೂಡದು. ಸತ್ತ ಹನ್ನೆರಡನೆ ದಿನದ ಶಾಸ್ತ್ರವನ್ನು ಮಾಡಕೂಡದು. ಏಕಾದಶಿಯಂದು ಉಪವಾಸ ಮಾಡಕೂಡದು. ಹಿಂದೂ ಗಂಡಸರು ಯಾವತ್ತೂ ಪಂಚೆ ಉಡಕೂಡದು: ಹೆಂಗಸರು ರವಿಕೆ ತೊಡಕೂಡದು: ಮನೆಯ ಮುಂದಾಗಲಿ, ಹಿತ್ತಲಲ್ಲಾಗಲಿ, ತೋಟಗಳಲ್ಲಾಗಲಿ ಎಲ್ಲೂ ತುಳಸಿಯನ್ನು ಬೆಳೆಸಕೂಡದು.

1570ನೇ ಸೆಪ್ಟೆಂಬರ್ 22ರಂದು ಜಾರಿ ಮಾಡಿದ ಹುಕುಂ ಪ್ರಕಾರ ಕ್ರೈಸ್ತ ಧರ್ಮಕ್ಕೆ ಸೇರಿದ ಹಿಂದೂಗಳಿಗೆ ಹದಿನೈದು ವರ್ಷ ಕಾಲ ಸಮಸ್ತ ತೆರಿಗೆಗಳಿಂದಲೂ ವಿನಾಯಿತಿ

ದೊರೆಯುತ್ತಿತ್ತು. ಯಾರೂ ಹಿಂದೂ ಹೆಸರನ್ನಾಗಲಿ ಮನೆತನದ ಹೆಸರನ್ನಾಗಲಿ ಉಪಯೋಗಿಸಕೂಡದು.

ಹೀಗೆಯೇ ಬರೆಯುತ್ತಾ ಹೋದರೆ ಈ ಸಣ್ಣ ಲೇಖನದಲ್ಲಿ ಸ್ಥಳ ಸಾಲುವುದಿಲ್ಲ. ಓದುಗರು A.K. Priolkar ಅವರು ಬರೆದಿರುವ The Goa Inquisition (Voice of India. New Delhi) ಎಂಬ ಗ್ರಂಥವನ್ನು ಪೂರ್ತಿ ಓದಬೇಕು. ಈ ಗ್ರಂಥದ 79-80-81-82-83-84 ಪುಟಗಳ ಭರ್ತಿ ಮಿಶನರಿಗಳು ನಾಶ ಮಾಡಿದ ಹಿಂದೂ ದೇವಸ್ಥಾನಗಳ ಮತ್ತು ಅವುಗಳು ಇದ್ದ ಊರುಗಳ ಹೆಸರುಗಳಿವೆ. ಈ ಗ್ರಂಥದ ಕೊನೆಯಲ್ಲಿ ಸಮಕಾಲೀನ ಪೋರ್ಚುಗೀಸರೇ ಬರೆದ ಆಧಾರ ಗ್ರಂಥಗಳ ದೊಡ್ಡ ಪಟ್ಟಿಯೇ ಇದೆ. ಮತಾಂತರಕ್ಕೆ ಒಪ್ಪದವರಿಗೆ ಕೊಡುತ್ತಿದ್ದ ಕ್ರೂರ ಹಿಂಸೆ ಮತ್ತು ದೇವಾಲಯ ನಾಶಗಳಲ್ಲಿ ಈ ಕ್ರೈಸ್ತರಿಗೂ ಭಾರತದಲ್ಲಿ ಇದೇ ಕೆಲಸ ಮಾಡಿದ ಮುಸಲ್ಮಾನ ದೊರೆಗಳಿಗೂ ಯಾವ ವ್ಯತ್ಯಾಸವೂ ಇಲ್ಲ. ತಮ್ಮ ಧರ್ಮವನ್ನು ಬಿಡದೆ ಜೀವಿಸಲು ಗೋವೆಯ ಲಕ್ಷಾಂತರ ಜನರು ಪಕ್ಕದ ಕರ್ನಾಟಕ, ಮಹಾರಾಷ್ಟ್ರ ಮತ್ತು ಕೇರಳಗಳಿಗೆ ಓಡಿ ಹೋದರು. ಅವರೇ ಈಗ ತಮ್ಮನ್ನು ತಾವು ಕೊಂಕಣಿ ಹಿಂದೂಗಳೆಂದು ಗುರುತಿಸಿಕೊಳ್ಳುವವರು. ಬ್ರಾಹ್ಮಣರಲ್ಲಿ ಜಿಎಸ್‌ಬಿ (ಜಿಎಸ್‌ಬಿ=ಗೌಡ ಸಾರಸ್ವತ ಬ್ರಾಹ್ಮಣ) ಮತ್ತು ಸಾರಸ್ವತರೆಂದು ಪ್ರಸಿದ್ಧರಾದ ವರೂ ಹೀಗೆ ಓಡಿ ಬಂದು, ತಮ್ಮ ಧರ್ಮಸಮೇತ ಜೀವ ಉಳಿಸಿ ಕೊಂಡವರ ವಂಶಜರು.

ಪ್ರಸಿದ್ಧ ಇತಿಹಾಸಕಾರ ಕೆ.ಎಂ. ಪಣಿಕ್ಕರ್ ಅವರು ತಮ್ಮ Malabar and The Portuguese ಎಂಬ ಗ್ರಂಥದ (Voice of India, New Delhi 1997 Reprint) Portuguese Religious Policy in Malabar ಎಂಬ ಹನ್ನೆರಡನೇ ಅಧ್ಯಾಯದಲ್ಲಿ ಬರೆಯುತ್ತಾರೆ: ಸಿರಿಯನ್ ಚರ್ಚಿನ ಕ್ರೈಸ್ತರನ್ನು ಮಲಬಾರಿನ ಹಿಂದೂ ರಾಜರು ಅವರ ಧರ್ಮಾಚರಣೆಗಳಲ್ಲಿ ಸ್ವಲ್ಪವೂ ತಲೆ ಹಾಕದೆ ಉದಾರವಾಗಿ ನಡೆಸಿಕೊಳ್ಳುತ್ತಿದ್ದರು. ಹಾಗೆಂದು ಪೋರ್ಚುಗೀಸ್ ಪ್ರವಾಸಿಗಳೇ ದಾಖಲಿಸಿದ್ದಾರೆ. ಆದರೆ ಈ ಭಾರತೀಯ ಸಿರಿಯನ್ ಕ್ರೈಸ್ತರು ತಮಗೊದಗಿದ ಮೊದಲ ಅವಕಾಶದಲ್ಲೇ ಹಿಂದೂ ರಾಜರಿಗೆ ತಾವು ಇಟ್ಟಿದ್ದ ನಿಷ್ಠೆಯನ್ನು ತಿರಸ್ಕರಿಸಿ ಪೋರ್ಚುಗಲ್ ರಾಜನ ಅಧಿಕಾರವನ್ನು ಸ್ವೀಕರಿಸಿರುವುದಾಗಿ ಘೋಷಿಸಿಕೊಂಡರು.... ತಮ್ಮಲ್ಲಿದ್ದ ಪುರಾತನ ದಾಖಲೆಗಳು ಮತ್ತು ಧರ್ಮ ಚಿಹ್ನೆಗಳನ್ನು ವಾಸ್ಕೊಡಗಾಮನಿಗೆ ಸಮರ್ಪಿಸಿದರು. ಅಲ್ಲದೆ ಹಿಂದೂ ರಾಜ್ಯಗಳನ್ನು ವಶಪಡಿಸಿ ಕೊಳ್ಳುವಂತೆಯೂ ಅದಕ್ಕೆ ತಾವು ಸಹಾಯ ಮಾಡುವುದಾಗಿಯೂ ಅವನಿಗೆ ಸೂಚಿಸಿದರು. ಈ ಉದ್ದೇಶಕ್ಕಾಗಿ ಗ್ರಾಂಗನೂರಿನಲ್ಲಿ ಒಂದು ಕೋಟೆ ಕಟ್ಟುವಂತೆ ಆಹ್ವಾನಿಸಿದರು. ಕ್ರೈಸ್ತರಿಗೆ ತಾವು ತೋರಿಸಿದ ಔದಾರ್ಯ ಮತ್ತು ದಯೆಗೆ ಹಿಂದೂ ರಾಜರುಗಳು ಪಡೆದ ಪ್ರತಿಫಲ ಇದು. ಕೊಚಿನ್‌ನ ಹಿಂದೂ ರಾಜನನ್ನೇ ಮತ ಪರಿವರ್ತನೆ ಮಾಡುವಂತೆ ಪೋರ್ಚುಗಲ್‌ನ ವೈಸರಾಯಿಗೆ ಆದೇಶ ಮಾಡಲಾಯಿತು.

**ಟಿಪ್ಪಣಿ ಮಾಡುವ ಅಗತ್ಯವಿಲ್ಲ**

ಚರ್ಚು ತನ್ನ ಮತ ವಿಸ್ತರಣೆಯ ವಿಧಾನದಲ್ಲಿ ಕ್ರೌರ್ಯವನ್ನು ಕಡಿಮೆ ಮಾಡಿಕೊಂಡಿದ್ದಕ್ಕೆ ಪ್ರಮುಖ ಕಾರಣವೆಂದರೆ ಯುರೋಪಿನಲ್ಲಿ ನವೋದಯ ಉಂಟಾಗಿ ವಿಜ್ಞಾನ, ತಂತ್ರಜ್ಞಾನಗಳ ಬೆಳವಣಿಗೆಯಾಗಿ ಯುರೋಪಿನ ಹಲವು ರಾಜ್ಯಗಳು ಹೊಸ ಭೂಮಿಗಳನ್ನು ಆಕ್ರಮಿಸಿ ಸಾಮ್ರಾಜ್ಯ ಸ್ಥಾಪನೆ ಮಾಡತೊಡಗಿ, ಧರ್ಮವೆಂದರೆ ಚರ್ಚಿನ ಧರ್ಮವೊಂದೇ ಅಲ್ಲ, ಪ್ರಪಂಚದಲ್ಲಿ ಬೇರೆ ಬೇರೆ ನಂಬಿಕೆಗಳಿವೆ ಎಂಬ ತಿಳಿವಳಿಕೆಯು ಮೇಲುವರ್ಗದವರಲ್ಲಿ ಉಂಟಾದದ್ದು. ಚರ್ಚಿನ ಅಧಿಕಾರಕ್ಕೆ ಸವಾಲು ಹಾಕಿದ ರಾಜ್ಯಶಕ್ತಿಗಳು ಪ್ರೊಟೆಸ್ಟೆಂಟ್ ಧರ್ಮವನ್ನು ಆರಂಭಿಸಿದವು. ಆಧುನಿಕ ಭೌತಶಾಸ್ತ್ರ, ಜೀವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ಉದಯವಾಗಿ, ಚರ್ಚಿನ ಕಂದಾಚಾರಗಳನ್ನು ಜನರು ತಿರಸ್ಕರಿಸತೊಡಗಿದರು. ತನ್ನ ಉಳಿವಿಗಾಗಿ ಚರ್ಚು ಈ ಹೊಸ ಚಿಂತನೆಗಳನ್ನು ತನ್ನ ಹಳೆಯ ನಂಬಿಕೆಗಳಿಂದ ಉದ್ಭವಿಸಿದ ವಿಚಾರಗಳೇ ಎಂಬಂತೆ ಬಿಂಬಿಸತೊಡಗಿತು. Christian Science ಎಂಬ ಹೊಸ ನಾಮಕರಣವನ್ನು ಮಾಡಿತು. ವಿಜ್ಞಾನವೇ ಬೇರೆ, Faith ಬೇರೆ. ವಿಜ್ಞಾನದ ವಿಧಾನಗಳಿಂದ Faith ಅನ್ನು ಅಳೆಯುವುದಾಗಲಿ, ತಿರಸ್ಕರಿಸುವುದಾಗಲಿ ಸಲ್ಲದು ಎಂಬ ವಾದವನ್ನು ಮುಂದೆಮಾಡಿತು.

ಸಮಸ್ತ ಭಾರತದಲ್ಲಿ ಸಾಮ್ರಾಜ್ಯವನ್ನು ಕಟ್ಟಿದ ಬ್ರಿಟಿಷರು ರೋಮಿನ ವ್ಯಾಟಿಕನ್‌ನಿಂದ ಸ್ವತಂತ್ರವಾದ Church of England ಅನ್ನು ಸ್ಥಾಪಿಸಿಕೊಂಡವರು. ಭಾರತದ ಧರ್ಮಗಳನ್ನು ನೇರವಾಗಿ ಕೆಣಕಿ ತಮ್ಮ ಸಾಮ್ರಾಜ್ಯವನ್ನು ಅಸ್ಥಿರಗೊಳಿಸಿಕೊಳ್ಳಲು ಅವರು ಸಿದ್ಧರಿರಲಿಲ್ಲ. ಆದ್ದರಿಂದ ತೋರಿಕೆಗಾದರೂ ಮಿಶನರಿಗಳಿಗಿಂತ ಸರ್ಕಾರವು ಭಿನ್ನವೆಂಬ ನಿಲುವನ್ನು ಅಳವಡಿಸಿಕೊಂಡರು. ಆದರೆ ಒಂದು ಹಂತದಲ್ಲಿ ಮಿಶನರಿಗಳಿಗೂ ಬ್ರಿಟಿಷರಿಗೂ ಒಂದೇ ಗುರಿ, ಒಂದೇ ಉದ್ದೇಶವಿತ್ತು. ಭಾರತೀಯರ ಭಾರತೀಯತೆಯನ್ನು ನಾಶಪಡಿಸಿದರೆ ತಮ್ಮ ಸಾಮ್ರಾಜ್ಯವನ್ನು ವಿರೋಧಿಸುವ ಅವರ ಶಕ್ತಿಯು ಉಡುಗುತ್ತದೆಂದು ಅವರು ಆಲೋಚಿಸಿ ನಿರ್ಧರಿಸಿದರು. ಮೆಕಾಲೆಯ ವಿದ್ಯಾಭ್ಯಾಸ ನೀತಿ, ಆರ್ಯರು ಹೊರಗಿನಿಂದ ಬಂದವರೆಂಬ ಸಿದ್ಧಾಂತ, ಭಾರತದ ಇತಿಹಾಸ ವ್ಯಾಖ್ಯಾನ, ವರ್ಣಾಶ್ರಮದ ವ್ಯಾಖ್ಯಾನ, ಸಮಾಜಶಾಸ್ತ್ರದ ವಿಶ್ಲೇಷಣೆ, ಸೆನ್ಸಸ್ ನೀತಿ, ಬೌದ್ಧರು, ಜೈನರು, ಸಿಖ್ಖರು, ಹಿಂದೂಗಳಲ್ಲವೆಂಬ ಸಿದ್ಧಾಂತ, ಆರ್ಯ ದ್ರಾವಿಡ ಸಿದ್ಧಾಂತ, ಮುಸ್ಲಿಮರ ಪ್ರತ್ಯೇಕತಾ ಭಾವದ ಪೋಷಣೆ ಮೊದಲಾದ ವಿಘಟನಾತ್ಮಕ ವ್ಯಾಖ್ಯಾನವನ್ನು ಸಿದ್ಧಪಡಿಸಿ, ವಿಶ್ವವಿದ್ಯಾಲಯಗಳಲ್ಲಿ, ಪತ್ರಿಕೆಗಳಲ್ಲಿ ಪ್ರಚುರಪಡಿಸಿ ಭಾರತದ ಹೊಸ ತಳಿಗಳಲ್ಲಿ ಬಿತ್ತಿ ಬೆಳೆಸಿದರು. ಇವೆಲ್ಲವನ್ನೂ ಮಿಶನರಿಗಳು ಬಳಸಿಕೊಂಡದ್ದಲ್ಲದೆ, ಹಿಂದೂ ದೇವದೇವತೆಗಳನ್ನು ಅಪವ್ಯಾಖ್ಯಾನಿಸಿ ಇಡೀ ಹಿಂದೂ ಧರ್ಮವನ್ನು ಹೀಗಳೆಯುವ ಕೆಲಸವನ್ನು ಮಾಡುವ ಮೂಲಕ ಮತ ಪರಿವರ್ತನೆಯನ್ನು ಸುಲಭಮಾಡಿಕೊಂಡರು. ಅಷ್ಟರಲ್ಲಿ

ಮಿಶನರಿಗಳು ಮತ ಪರಿವರ್ತನೆಯ ಅಸ್ತ್ರವಾಗಿ ಬೆಳೆಸಿಕೊಂಡಿದ್ದ ಶಾಲೆ, ಕಾಲೇಜುಗಳು ಮತ್ತು ಆಸ್ಪತ್ರೆಗಳಿಗೆ ಅವರು ಕೇಳಿದ ಕಡೆ, ಕೇಳಿದಷ್ಟು ಜಾಗಗಳನ್ನು ಕೊಡುತ್ತಾ, ದೇಶಿ ರಾಜರುಗಳಿಂದ ಕೊಡಿಸುತ್ತಾ, ಅಲೋಪತಿ ಚಿಕಿತ್ಸೆಯ ಮುಖ್ಯ ವಾಹಕರನ್ನಾಗಿ ಅವರನ್ನು ಬಿಂಬಿಸುತ್ತಾ ಪ್ರೋತ್ಸಾಹಿಸಿದರು. ಕ್ರೈಸ್ತರಾಗಿ ಮತ ಪರಿವರ್ತಿತರಾದವರಿಗೆ ನೌಕರಿ ಮತ್ತು ಬಡ್ತಿಗಳಲ್ಲೂ ಆದ್ಯತೆ ಕೊಡತೊಡಗಿದರು. ಪರಿವರ್ತಿತರಾದವರು ಬೇರೆಯವರಿಗಿಂತ ಕೆಂಪು ದೊರೆಗಳಿಗೆ ಹೆಚ್ಚು ನಿಷ್ಠರಾಗಿರುವಂತೆ ಚರ್ಚು ಮತ್ತು ಆಡಳಿತ ಎರಡೂ ನೋಡಿಕೊಂಡವು. ಆಚಾರ-ವಿಚಾರ, ವೇಷ, ಊಟದ ರೀತಿ, ಜೀವನ ಶೈಲಿ ಮೊದಲಾದ ಎಲ್ಲ ವಿಧಗಳಲ್ಲೂ ಅವರೂ ಬ್ರಿಟಿಷರ ರೀತಿಯಲ್ಲೇ ಇರುವಂತೆ, ಬೆಳೆಯುವಂತೆ ಚರ್ಚು ಮಾಡಿತು. ಎಂಥೆಂಥ ವಿದ್ಯಾಸಂಸ್ಥೆಗಳನ್ನು, ಆಸ್ಪತ್ರೆಗಳನ್ನು ಅವರು ಕಟ್ಟಿದರು! ಎಂದು ನಮ್ಮ ಎಷ್ಟೋ ಜನರು ಮೆಚ್ಚುಗೆಯಿಂದ ಮೂಗಿನ ಮೇಲೆ ಬೆರಳಿಟ್ಟುಕೊಂಡದ್ದನ್ನು ನಾನೇ ನೋಡಿದ್ದೇನೆ (ಈಗ ನಮ್ಮವರೂ ಅವಕ್ಕಿಂತ ದೊಡ್ಡ ಸಂಸ್ಥೆಗಳನ್ನು ಕಟ್ಟಿದ್ದಾರೆ, ಕಟ್ಟುತ್ತಿದ್ದಾರೆ). ಆದರೆ ಒಂದು ಅಂಶವನ್ನು ಮಾತ್ರ ನಾವು ಮರೆಯಬಾರದು. ಅವರ ವೈದ್ಯಕೀಯ ಕಾಲೇಜುಗಳ ಬಹುಭಾಗ ಸೌಲಭ್ಯಗಳನ್ನು ಬಳಸುತ್ತಿದ್ದುದು, ಈಗಲೂ ಬಳಸುತ್ತಿರುವುದು ಕ್ರೈಸ್ತರಿಗೆ ವೈದ್ಯಕೀಯ ತರಬೇತಿ ಕೊಡುವುದಕ್ಕೆ, ವಿಶೇಷ ಪರಿಣತಿಗಳಲ್ಲಿ ಅವರನ್ನು ಮುಂದೆ ತರುವುದಕ್ಕೆ. ಈ ಸಂಸ್ಥೆಗಳನ್ನು ಕಟ್ಟಲು ಅವರಿಗೆ ದೊರೆತ ಸೌಲಭ್ಯ ಗಳನ್ನು ಹೋಲುವ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು. ಎಂಥ ಗೊಂಡಾರಣ್ಯಗಳನ್ನು ಕಡಿದು ಕಾಫಿ ತೋಟಗಳನ್ನಾಗಿ ಪರಿವರ್ತಿಸಿದ ಇಂಗ್ಲಿಷರ ಸಾಹಸ ನಮ್ಮವರಿಗೆ ಎಲ್ಲಿಂದ ಬರಬೇಕು! ಎಂದು ಅವರನ್ನು ಹೊಗಳುತ್ತಿದ್ದ ಮಾತನ್ನು ಚಿಕ್ಕ ಹುಡುಗನಲ್ಲಿ ನಾನು ಕೇಳಿದ್ದೇನೆ. ಆನಂತರ ಒಬ್ಬ ನಿವೃತ್ತ ಹಿರಿಯ ಕಂದಾಯ ಅಧಿಕಾರಿಯು ನನಗೆ ವಿವರಿಸಿದರು: ಬೆಂಗಳೂರಿನಲ್ಲಿರುತ್ತಿದ್ದ ಬ್ರಿಟಿಷ್ ರೆಸಿಡೆಂಟರಿಂದ ಸಂಸ್ಥಾನದ ಸರಕಾರಕ್ಕೆ ಇಂತಿಂಥವರಿಗೆ ಕಾಫಿ ತೋಟಕ್ಕೆ ಜಮೀನು ಕೊಡಿ ಎಂದು ಸೂಚನೆ ಹೋಗು ತ್ತಿತ್ತು. ಸೂಚನೆ ಎಂದರೆ ವಸ್ತುಶಃ ಹುಕುಂ. ಅದು ಜಿಲ್ಲಾಧಿಕಾರಿಯ ಮೂಲಕ ತಾಲೂಕಿನ ಅಮಲ್ದಾರರಿಗೆ ತಲುಪಿ ಅವರು ಒಬ್ಬ ರೆವಿನ್ಯೂ ಇನ್ಸಪೆಕ್ಟರನ್ನು ಕಳಿಸುತ್ತಿದ್ದರು. ಈ ರೆವಿನ್ಯೂ ಇನ್ಸ್‌ಪೆಕ್ಟರೊಡನೆ ಕುದುರೆ ಏರಿದ ಬಿಳಿಯ ದೊರೆಯು (ಆಗ ಬಿಳಿಯರನ್ನೆಲ್ಲ ದೊರೆ ಎಂದೇ ಕರೆಯುತ್ತಿದ್ದುದು) ಒಂದು ಗುಡ್ಡದ ನೆತ್ತಿಯನ್ನೇರಿ ನಿಂತು ವೃತ್ತಾಕಾರದಲ್ಲಿ ಬೆರಳು ತೋರಿಸಿ ಇಷ್ಟು ಭೂಮಿ ಬೇಕು ಎನ್ನುತ್ತಿದ್ದ. ಈ ರೆವಿನ್ಯೂ ಅಧಿಕಾರಿ ವಿನಯದಿಂದ ತಲೆಬಾಗಿ ಆ ವಿಶಾಲ ವೃತ್ತಾಕಾರವನ್ನು ಅಳತೆ ಮಾಡಿಸಿ ಮೇಲಧಿಕಾರಿಗಳಿಗೆ ವರದಿ ಮಾಡುತ್ತಿದ್ದ. ಒಂದು ವಾರದಲ್ಲಿ ಸಾವಿರಾರು ಎಕರೆ ಕಾಡು ಆ ದೊರೆಗೆ ಮಂಜೂರಾಗು ತ್ತಿತ್ತು. ಸ್ಥಳೀಯರನ್ನು ಕೂಲಿಗಳಾಗಿ ನೇಮಿಸಿಕೊಂಡು ದೊರೆಯು ಕಾಡಿನ ತೇಗ, ಬೀಟೆ, ಮತ್ತಿ ಮೊದಲಾದ ಹೆಮ್ಮರಗಳನ್ನು ಕಡಿಸಿ ಮಾರಿ ಹಣ ಮಾಡಿಕೊಂಡು ಅದೇ ಹಣವನ್ನು ಕಾಫಿ ತೋಟ ಮಾಡಲು ಬಳಸಿಕೊಳ್ಳುತ್ತಿದ್ದ. ಜತೆಗೆ ಬ್ರಿಟಿಷ್ ಮಾಲಿಕತ್ವದ ಇಂಪೀರಿ

ಯಲ್ ಬ್ಯಾಂಕ್ ಅಂಥ ದೊರೆಗಳಿಗೆ ಕಾಫಿ ಬೆಳೆ ಬರುವವರೆಗೆ ಬಡ್ಡಿರಹಿತ, ಬೆಳೆ ಶುರುವಾದ ನಂತರ ಶೇಕಡಾ ಒಂದರಂತೆ ಬಡ್ಡಿಸಹಿತ ಸಾಲ ಕೊಡುತ್ತಿತ್ತು. ಒಬ್ಬೊಬ್ಬ ದೊರೆಯು ಸಾವಿರಾರು ಎಕರೆ ಕಾಫಿ ತೋಟದ ಒಡೆಯನಾಗಿ ಗುಡ್ಡದ ನೆತ್ತಿಯ ಮೇಲೆ ಇಂಗ್ಲಿಷ್ ಶೈಲಿಯ ಬಂಗಲೆ ಕಟ್ಟಿಸಿಕೊಳ್ಳುತ್ತಿದ್ದ. ಎಂಥ ಸಾಹಸ! ಭಾರತೀಯ ಹೇಡಿಗಳಿಗೆ ಎಲ್ಲಿಂದ ಬರಬೇಕು, ಈ ಸಾಹಸ ! ಆಗ ಸಕಲೇಶಪುರದಲ್ಲಿದ್ದ ಪ್ಲಾಂಟರ್ಸ್ ಅಸೋಸಿಯೇಶನ್ ಕಟ್ಟಡದ ಬಾಗಿಲಿನಲ್ಲಿ 'ಸ್ಥಳೀಯರಿಗೂ ನಾಯಿಗಳಿಗೂ ಪ್ರವೇಶ ಇಲ್ಲ' ಎಂಬ ಬೋರ್ಡ್ ಇತ್ತೆಂದು ಈಗಲೂ ಹೇಳುತ್ತಾರೆ.

ಮರುಳುಗಾಡಿನಲ್ಲಿ ಜನ್ಮ ತಳೆದ ಈ ಮೂರು ಪ್ರವಾದಿ ಮತಗಳಿಗೂ ಭಾರತದಲ್ಲಿ ಹುಟ್ಟಿದ ಧರ್ಮಕ್ಕೂ ಒಂದು ಮೂಲಭೂತ ವ್ಯತ್ಯಾಸವಿದೆ. ಪ್ರತಿಯೊಬ್ಬ ಪ್ರವಾದಿಯೂ ನಾನು ಹೇಳುವುದೇ ಪರಮ ಸತ್ಯ ; ನನ್ನ ಮೂಲಕವೇ ದೈವವಾಣಿಯು ಅಭಿವ್ಯಕ್ತವಾಗಿದೆ. ನೀವು ಅದಕ್ಕೆ ಎಂದರೆ ನನಗೆ, ಸಮರ್ಪಿಸಿಕೊಳ್ಳದಿದ್ದರೆ ನರಕವೇ ಗತಿ. ಅಷ್ಟು ಮಾತ್ರವಲ್ಲ. ಅದನ್ನು ಹಿಂಸೆಯನ್ನಾದರೂ ಪ್ರಯೋಗಿಸಿ ಪ್ರಪಂಚದಲ್ಲೆಲ್ಲ ವಿಸ್ತರಿಸುವುದು ನಿಮ್ಮ ಮತನಿಷ್ಠೆಯ ಮೂಲ ಗುಣ, ಆದ್ಯ ಕರ್ತವ್ಯ ಎಂದು ಬೋಧಿಸುತ್ತಾನೆ. ಪ್ರವಾದಿ ಮತವು ಮೂಲತಃ ಮತಾಂಧವಾದದ್ದು. ಭಾರತ ಧರ್ಮದ ಅತ್ಯಂತ ಪ್ರಾಚೀನ ಅಭಿವ್ಯಕ್ತಿಯಾದ ವೇದದ ಬಹುಮುಖ್ಯವಾದ ಬೋಧೆ, ಏಕಂ ಸತ್ ವಿಪ್ರಾಃ ಬಹುಧಾ ವದಂತಿ. ಸತ್ ಎಂಬುದು ಒಂದೇ. ತಿಳಿದವರು ಅದನ್ನು ಹಲವು ವಿಧಗಳಲ್ಲಿ ಹೇಳುತ್ತಾರೆ ಎಂಬ ಅತ್ಯಂತ ಮುಕ್ತ ಕಲ್ಪನೆಯು ಆನಂತರ ಕವಲೊಡೆದ ಎಲ್ಲ ವಾಹಿನಿಗಳಲ್ಲೂ ವ್ಯಕ್ತವಾಗಿದೆ. ಜೈನ ಜಿಜ್ಞಾಸೆಯಲ್ಲಿ ಸ್ಯಾದ್ವಾದ (ಸ್ಯಾತ್=ಬಹುದು, ಇರಬಹುದು, may be) ಎಂಬುದು ಬಹು ಮುಖ್ಯವಾದ ತತ್ತ್ವ. ಯಾವುದನ್ನೂ ಇದೇ ಪರಮಸತ್ಯವೆಂದು ಹಟ ಹಿಡಿಯಬಾರದು. ಯಾವ ವಿಚಾರವಾಗಲಿ, ನಾನು ಹೇಳುತ್ತಿರುವುದನ್ನೂ ಸೇರಿಸಿ, ಇರಬಹುದು. ಅದರ ವಿರುದ್ಧವಾದುದೂ ಇರಬಹುದು. ಇವೆರಡೂ ಏಕಕಾಲದಲ್ಲಿ ಇರಬಹುದು. ಹೀಗೆ ಅವರು ಏಕಕಾಲದಲ್ಲಿ ಏಳು ಬಗೆಯ ಸಾಧ್ಯತೆಗಳನ್ನು ಗುರುತಿಸುತ್ತಾರೆ. ಇದು ವೇದದ ಏಕಂ ಸತ್ ವಿಪ್ರಾಃ ಬಹುಧಾ ವದಂತಿ ಎಂಬ ದೃಷ್ಟಿಯ ಬೇರೊಂದು ಉಕ್ತಿ. ಭಾರತೀಯ ದರ್ಶನಗಳೆಲ್ಲವೂ ತರ್ಕವನ್ನು ಒಪ್ಪಿಕೊಂಡವು. ವಾದ-ವಿವಾದಗಳನ್ನು ಮಾನ್ಯಮಾಡಿದವು. ಹೀಗಾಗಿ ಇಲ್ಲಿ ಪ್ರವಾದಿ ಮತದ ಮೂಲ ಬೇರಾದ ಮತಾಂಧತೆಗೆ ಅವಕಾಶವಾಗಲಿಲ್ಲ. ವೇದ ಮತ್ತು ಉಪನಿಷತ್ತುಗಳ ಋಷಿಗಳಾರೂ ಪ್ರವಾದಿಗಳಲ್ಲ. ಬೆಲ್ಜಿಯಂ ದೇಶದ ಕಾನ್ರಾಡ್ ಎಲ್ಸ್ಟ್ (Koenraad Elst) ಎಂಬ ತೌಲನಿಕ ಮತಧರ್ಮಗಳ ವಿದ್ವಾಂಸನು Psychology of Prophetism ಎಂಬ ತನ್ನ ಗ್ರಂಥದ ಕೊನೆಯ ಅಧ್ಯಾಯದಲ್ಲಿ 'ಪ್ರವಾದಿಗಳು ತಮ್ಮ ಬಗೆಗೇ ತುಂಬ ಹೇಳಿಕೊಳ್ಳುತ್ತಾರೆ. ತಾವು ವಿಶೇಷವಾದ ವ್ಯಕ್ತಿಗಳು, ತಮಗೂ ಸೃಷ್ಟಿಕರ್ತನಿಗೂ ಬೇರಾರಿಗೂ ಇಲ್ಲದ ವಿಶೇಷ ಸಂಬಂಧವುಂಟೆಂದು

ಭಾವಿಸುತ್ತಾರೆ. ಋಷಿಗಳಾದರೋ ವಿಶ್ವಾತ್ಮಕ ಸತ್ಯವನ್ನು ಮಾತ್ರ ಹೇಳುತ್ತಾರೆ. ಸತ್ಯವು ಚೇತನದ ಒಂದು ವಿಶೇಷ ಸ್ಥಿತಿಯಲ್ಲಿ ಅರಿಯಬಹುದಾದದ್ದು. ಆ ಸ್ಥಿತಿಯನ್ನು ನಾವು ನೀವೆಲ್ಲ ಸಾಧನೆಯಿಂದ ಪಡೆಯಬಹುದು ಎನ್ನುತ್ತಾರೆ. ಕಾನ್ರಾಡ್ ಎಲ್ಸ್ಟ್ ಅವರ ಈ ಪುಸ್ತಕವನ್ನು ಈ ವಿಷಯದಲ್ಲಿ ಗಂಭೀರ ಆಸಕ್ತಿ ಇರುವ ಪ್ರತಿಯೊಬ್ಬರೂ ಓದಬೇಕು. ಬೌದ್ಧ ಧರ್ಮವನ್ನು ಬೋಧಿಸಿದ ಬುದ್ಧನು ಪ್ರವಾದಿಯಲ್ಲ; ಋಷಿ. ಉಪನಿಷತ್ ಯುಗದ ಧರ್ಮ ಜಿಜ್ಞಾಸೆಗೆ ತೊಡಗಿದ ಮಹರ್ಷಿ. ಅವನ ಕಾಣ್ಕೆಯು ಉಪನಿಷತ್ತುಗಳಿಗೆ ವಿರೋಧವಾಗಿಲ್ಲ. ಈ ಬಗೆಗೆ R.D. Ranade ಅವರ A Constructive Survey of the Upanishadic Philosophy ಎಂಬ ಗ್ರಂಥದ ನಾಲ್ಕನೆ ಪ್ರಕರಣ, ಎರಡನೇ ವಿಭಾಗವನ್ನು ನೋಡಬೇಕು. ಈ ಪುಸ್ತಕದ ಕನ್ನಡಾನುವಾದವನ್ನು ಆರ್.ಆರ್. ದಿವಾಕರ, ದ.ರಾ. ಬೇಂದ್ರೆ ಮತ್ತು ಶಂಬಾ ಜೋಷಿಯವರು ಜೊತೆಗೂಡಿ ಮಾಡಿ ಮೂಲ ಇಂಗ್ಲಿಷ್ ಕೃತಿಯು ಪ್ರಕಟವಾದ ಎರಡು ವರ್ಷದೊಳಗೆ ಪ್ರಕಟಿಸಿದರು. ನನ್ನಲ್ಲಿರುವುದು ೨೦೦೪ರಲ್ಲಿ ಗುರುದೇವ ರಾನಡೆ ಸಮಾಧಿ ಟ್ರಸ್ಟ್-ನಿಂಬಾಳ, ವಿಜಾಪುರ ಜಿಲ್ಲೆ ಅವರು ಪ್ರಕಟಿಸಿರುವ ನಾಲ್ಕನೆಯ ಆವೃತ್ತಿಯ ಕನ್ನಡ ಪ್ರತಿ. ವೈದಿಕ ವಾಹಿನಿಯಾಗಲಿ, ಜೈನ, ಬೌದ್ಧ ವಾಹಿನಿಗಳಾಗಲಿ ಬಳಸುವುದು ಧರ್ಮ ಎಂಬ ಶಬ್ದವನ್ನೇ ಹೊರತು ಪ್ರವಾದಿ ಮತಗಳು ತಮ್ಮನ್ನು ತಾವು ಬಳಸಿಕೊಳ್ಳುವ Religion ಎಂಬ ಶಬ್ದವನ್ನಲ್ಲ.

### ಅಧ್ಯಾತ್ಮವನ್ನು ಹೀಗೆ ಆಳೆಯದಿರಿ

ಇತರ ಧರ್ಮ ಅಥವಾ ಮತಗಳ ಬಗೆಗೆ ಔದಾರ್ಯ ಮತ್ತು ಧರ್ಮಭಾವಗಳನ್ನು ಸೃಷ್ಟಿಸಿದ ಏಕಂ ಸತ್ ವಿಪ್ರಾಃ ಬಹುಧಾ ವದಂತಿ ತತ್ವವು ಬೇಟೆಗಾರ ಮತಗಳು ಭಾರತವನ್ನು ದಾಳಿ ಮಾಡಿ ಆಕ್ರಮಿಸಿಕೊಳ್ಳತೊಡಗಿದಾಗ ನಮ್ಮ ಮಠಾಚಾರ್ಯರುಗಳನ್ನು ಮೈ ಮರೆಸಿತು. ದಾಳಿ ಮಾಡಿ ಅಮಾನವೀಯವಾಗಿ ಲಕ್ಷ ಲಕ್ಷ ಜನರನ್ನು ಕೊಂದು, ಹೆಂಗಸರು ಮಕ್ಕಳನ್ನು ಅತ್ಯಾಚಾರ ಮಾಡಿ ಗುಲಾಮರನ್ನಾಗಿ ಎಳೆದುಕೊಳ್ಳುವವರು ಹೀನ ವರ್ತನೆಯ ವರೇ ವಿನಾ ಅವರ ಧರ್ಮದಲ್ಲಿ ಏನೂ ತಪ್ಪಿಲ್ಲ ಎಂಬ ಅಭ್ಯಾಸಬಲದ ಗ್ರಹಿಕೆಯ ಅಜ್ಞಾನದಲ್ಲೇ ಅವರು ಪ್ರವಚನ ಮಾಡುತ್ತಿದ್ದರು. ಶೃಂಗೇರಿ ಮಠದ ಎರಡು ತಲೆಮಾರು ಹಿಂದಿನ ಚಂದ್ರಶೇಖರ ಭಾರತಿ ಸ್ವಾಮಿಗಳಿಗೆ ಸಂಬಂಧಿಸಿದ ಒಂದು ಘಟನೆಯನ್ನು ಬಹುಜನರು ಹಿಂದೂ ಧರ್ಮದ ಉದಾರತೆಯ ಉದಾಹರಣೆಯಾಗಿ ಬರೆದಿದ್ದಾರೆ. ಯಾರೋ ಒಬ್ಬ ಯುರೋಪಿಯನ್ನನು ಸ್ವಾಮಿಗಳನ್ನು ಸಂದರ್ಶಿಸಿ 'ನನಗೆ ಹಿಂದೂವಾಗುವ ಬಯಕೆ ಇದೆ. ದೀಕ್ಷೆ ಕೊಡಿ' ಎಂದನಂತೆ. ಅದಕ್ಕೆ ಸ್ವಾಮಿಗಳು 'ನೀನು ಒಳ್ಳೆಯ, ಕ್ರೈಸ್ತನಾಗು. ಆಗ ಹಿಂದೂವೂ ಆಗುತ್ತೀಯೆ' ಎಂದರಂತೆ. ಆದರೆ ಒಳ್ಳೆಯ ಕ್ರೈಸ್ತ ಎಂದರೆ ಸಾಧ್ಯವಾದಷ್ಟು ಜನರನ್ನು ಕ್ರೈಸ್ತ ಮತಕ್ಕೆ ಪರಿವರ್ತನೆ ಮಾಡುವವನೂ ಆಗಿರಬೇಕು ಎಂಬ ಒಳ ತತ್ವವು ಸ್ವಾಮಿಗಳಿಗೆ ತಿಳಿದಿತ್ತೇ? ಅಥವಾ ಏಕಂ ಸತ್ ವಿಪ್ರಾಃ ಎಂಬ

ಮಂತ್ರದಲ್ಲಿ ಅವರು ಮುಳುಗಿ ಹೋಗಿದ್ದರೆ? ಅಥವಾ ಅನ್ಯಜಾತಿ ಅಥವಾ ಅನ್ಯ ಧರ್ಮೀಯನಿಗೆ ಉಪದೇಶ ಕೊಡದಿರುವ ಸಂಪ್ರದಾಯವನ್ನು ದಾಟುವುದು ಸ್ವಾಮಿಗಳಿಗೆ ಸಾಧ್ಯವಾಗಲಿಲ್ಲವೆ? ಎಂಬ ಪ್ರಶ್ನೆಗಳು ಉಳಿಯುತ್ತವೆ. ಮುಸಲ್ಮಾನರು ನಮ್ಮನ್ನು ಸದೆಬಡಿದು ಮತಾಂತರಿಸುತ್ತಿದ್ದಾಗ ಪೋರ್ಚುಗೀಸರು ಗೋವ, ಮಲಬಾರುಗಳಲ್ಲಿ Inquisition ಮಾಡುತ್ತಿದ್ದಾಗ, ಬ್ರಿಟಿಷರ ಕಾಲದಲ್ಲಿ ಪಾದ್ರಿಗಳು ಸಮಾಜಸೇವೆಯ ಸೋಗಿನಲ್ಲಿ ಎಲ್ಲೆಲ್ಲೂ ಪರಿವರ್ತನೆ ಮಾಡುತ್ತಿದ್ದಾಗ ಈ ಬೇಟೆಗಾರ ಮತಗಳ ಗ್ರಂಥಗಳನ್ನು ಓದಿ ಅವುಗಳನ್ನು ಧಾರ್ಮಿಕ ಜಿಜ್ಞಾಸೆಗೆ ಒಳಪಡಿಸುವ ಕೆಲಸವನ್ನು ನಮ್ಮ ಧರ್ಮಾಚಾರ್ಯರುಗಳು ಮಾಡಲಿಲ್ಲ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಆಧ್ಯಾತ್ಮಿಕ ಪ್ರೇರಕರೂ ಮಾರ್ಗದರ್ಶಕರೂ ಆಗಿದ್ದ ವಿದ್ಯಾರಣ್ಯರಿಗೆ ದೇಶದ ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆ ಗೊತ್ತಿತ್ತು. ಆದರೆ ಅವರು ಆ ಬೇಟೆಗಾರ ಮತವನ್ನು ಓದಿ, ವಿಶ್ಲೇಷಿಸಿ ಬರೆದಿರುವುದು ನನಗೆ ಗೊತ್ತಿಲ್ಲ. ಈ ಕೆಲಸವನ್ನು ನೇರವಾಗಿ ಕೈಗೆತ್ತಿಕೊಂಡು ಅಧ್ಯಾತ್ಮ ಮತ್ತು ಜಿಜ್ಞಾಸೆಯ ಮಟ್ಟದಲ್ಲಿ ಮಾಡಿದವರು ನನ್ನ ಓದಿನ ವ್ಯಾಪ್ತಿಯ ಮಿತಿಯಲ್ಲಿ ಹೇಳುವುದಾದರೆ ಮಹರ್ಷಿ ದಯಾನಂದ ಸರಸ್ವತಿಯವರು ಮತ್ತು ಸ್ವಾಮಿ ವಿವೇಕಾನಂದರು.

ಪೂರ್ವದ ಮತ್ತು ಬಹುತೇಕ ಇಂದಿನ ಹಿಂದೂ ಧರ್ಮಾಚಾರ್ಯರುಗಳಿಗಿರುವ ಬೇಟೆಗಾರ ಮತಗಳ ಬಗೆಗಿನ ಅವಜ್ಞೆಯು ಅಷ್ಟೇ ಬಹುತೇಕ ವಿದ್ಯಾವಂತ ಲೌಕಿಕರಿಗೂ ಇದೆ. ತಮ್ಮ ಜೀವನವನ್ನೇ ಬಲಿಯಾಗಿಟ್ಟು ಜಿಹಾದಿಗಳು ಉಗ್ರ ಚಟುವಟಿಕೆಗಳಲ್ಲಿ ತೊಡಗಿರುವಂತೆ ಹಳ್ಳಿ ಹಳ್ಳಿಗಳಲ್ಲಿ, ಗುಡ್ಡಗಾಡುಗಳಲ್ಲಿ ತಿರುಗಿ ಜನರನ್ನು ಮತಾಂತರಕ್ಕೆ ಪ್ರಚೋದಿಸುವ ಕಾಯಕದಲ್ಲಿ ತೊಡಗಿರುವ ಮಿಷನರಿಗಳ ಪ್ರೇರಕಶಕ್ತಿಯು ಅವರ ತಲೆಯಲ್ಲಿ ಕೂರಿಸಿರುವ ಈ ಬೋಧೆಯೇ.

ಸೇವೆಯ ಮಾನದಿಂದ ಧರ್ಮವನ್ನು ತೂಗುವುದು ಸಮಾಜದ ಆರ್ಥಿಕ ಬೆಳವಣಿಗೆ ಮತ್ತು ನ್ಯಾಯದ ದೃಷ್ಟಿಯಿಂದ ಸಹಜವೇ. ಪಶ್ಚಿಮದೇಶಗಳಲ್ಲಿ ಸುಖೀ ರಾಜ್ಯ ಅಥವಾ Welfare Stateನ ಕಲ್ಪನೆ ಬೆಳೆದು-ವಿದ್ಯಾಭ್ಯಾಸ, ವೈದ್ಯಕೀಯ ಸೇವೆ, ಉದ್ಯೋಗ ಖಾತರಿ, ನಿರುದ್ಯೋಗ ಭತ್ಯೆ, ವೃದ್ಧ ರಕ್ಷಣೆ ಮೊದಲಾದ ಕಾರ್ಯಗಳು ಸರಕಾರದ ಜವಾಬ್ದಾರಿಗೆ ಒಳಪಟ್ಟು, ಸರಕಾರವು ಅವುಗಳನ್ನು ಸಮರ್ಪಕವಾಗಿ ನಿರ್ವಹಿಸತೊಡಗಿದಾಗ ಮತಕ್ಕೂ ಸೇವೆಗೂ ಸಂಬಂಧವಿಲ್ಲ ಎಂಬ ಭಾವನೆ ಬೆಳೆಯಿತು. ಕೆಲವು ದಶಕಗಳ ಹಿಂದೆ ನಮ್ಮವರೇ ಕೆಲವರು 'ಕ್ರೈಸ್ತ ಮತವನ್ನು ನೋಡು, ಶಾಲೆ, ಕಾಲೇಜು, ಆಸ್ಪತ್ರೆ, ಅನಾಥಾಶ್ರಮ, ಶುಶ್ರೂಷೆ ಹೀಗೆ ಎಷ್ಟೊಂದು ಸೇವಾ ಕಾರ್ಯ ಮಾಡುತ್ತಾರೆ. ನಮ್ಮ ಧರ್ಮದಲ್ಲಿ ಏನಿದೆ?' ಎನ್ನುತ್ತಿದ್ದರು. ಈಗ ನಮ್ಮ ಎಷ್ಟೋ ಮಠಗಳು ಇಂಥ ಹಲವಾರು, ನೂರಾರು ಸಂಸ್ಥೆಗಳನ್ನು ನಡೆಸುತ್ತಿವೆ. ಆದರೆ ಸೈದ್ಧಾಂತಿಕವಾಗಿ ನೋಡಿದರೆ ಇವು ನಿಜವಾಗಿಯೂ ಮಠದ ಕೆಲಸಗಳೇ? ಭ್ರಷ್ಟ ರಾಜಕಾರಣಿಗಳು, ಭ್ರಷ್ಟ ಸರಕಾರವು ತಮ್ಮ

ಕರ್ತವ್ಯಗಳಲ್ಲಿ ಸೋತಿರುವಾಗ ಮಠಗಳಾದರೂ ಈ ಕೆಲಸ ಮಾಡುತ್ತಿರುವುದು ವಂದನೀಯ. ಆದರೆ ಅವು ಎಷ್ಟರ ಮಟ್ಟಿಗೆ ಅಧ್ಯಾತ್ಮದ ಬುಗ್ಗೆಗಳಾಗಿವೆ? ಅಧ್ಯಾತ್ಮದ ಪ್ರಸಾರ ಕೇಂದ್ರಗಳಾಗಿವೆ? ಅನ್ನ, ಬಟ್ಟೆ, ಆಸ್ಪತ್ರೆ, ಉದ್ಯೋಗ, ವಿದ್ಯಾಭ್ಯಾಸ, ವಿಜ್ಞಾನದ ಅಧ್ಯಯನಾವಕಾಶಗಳೆಲ್ಲ ದಕ್ಕಿಯೂ ಮನುಷ್ಯನ ಜೀವವು ಅನುಭವಿಸುವ ಅರಕೆ, ಅದನ್ನು ತುಂಬುವ ತುಡಿತವನ್ನು ಪೂರೈಸಲು ನಮ್ಮ ಮಠಗಳು ಸಮರ್ಥವಾಗಿ ವೆಯೇ? ಅಧ್ಯಾತ್ಮವು ನಮ್ಮ ನೈತಿಕ ಪ್ರಜ್ಞೆಯನ್ನು ಉದ್ದೀಪಿಸುವ ಬೆಳಕು ಎಂಬುದು ನಿಜವಾದರೂ ಲೌಕಿಕ ಚಟುವಟಿಕೆಗಳಿಂದ ಅಧ್ಯಾತ್ಮವನ್ನು ಅಳೆಯಬಾರದು.

. 1975ರಲ್ಲಿ ನಾನು UNESCO ಸಂಸ್ಥೆಯು ಟೋಕಿಯೋ ನಗರದಲ್ಲಿ ಒಂದು ತಿಂಗಳು ಏರ್ಪಡಿಸಿದ್ದ ನೀತಿ ಶಿಕ್ಷಣ ಕುರಿತ ಸಂಕಿರಣಕ್ಕೆ ಭಾರತದ ಪ್ರತಿನಿಧಿಯಾಗಿ ಹೋಗಿದ್ದೆ. ಸಂಕಿರಣಕ್ಕೆ ಪೂರಕವಾಗಿ ಜಪಾನಿನ ಕೆಲವು ಶಾಲೆಗಳನ್ನು, ಅಲ್ಲಿ ನೀತಿ ಶಿಕ್ಷಣವನ್ನು ಹೇಗೆ ನೀಡುತ್ತಾರೆಂಬ ದೃಷ್ಟಿಯಿಂದ ಸಂದರ್ಶಿಸುವ ಕಾರ್ಯಕ್ರಮವಿತ್ತು. ಅವುಗಳಲ್ಲಿ ಒಂದು ಕ್ರೈಸ್ತ ಮಿಶನರಿ ಶಾಲೆ. ವಿವರಗಳನ್ನೆಲ್ಲ ತಿಳಿದ ಮೇಲೆ ನಾನು ಅದರ ಪ್ರಿನ್ಸಿಪಾಲರನ್ನು ಕೇಳಿದೆ; 'ಈ ದೇಶದ ಇತರ ಶಾಲೆಗಳಿಗಿಂತ ನಿಮ್ಮ ಶಾಲೆಯು ಈ ವಿಷಯದಲ್ಲಿ ಭಿನ್ನವಾಗಿದೆಯೇ? ವಿಶಿಷ್ಟವಾಗಿದೆಯೆ?'

'ವೆರಿಗುಡ್ ಕ್ವೆಶ್ಚನ್. ನಮ್ಮದು ವಿಶಿಷ್ಟ'. ಜಪಾನೀ, ಆದರೆ ಕ್ರೈಸ್ತ ಮತೀಯನಾದ ಆತ ಉತ್ತರಿಸಿದ.

'ಹೇಗೆ?'

'ನಮ್ಮ ಶಾಲೆಯಲ್ಲಿ ಓದಿದ ವಿದ್ಯಾರ್ಥಿಗಳಲ್ಲಿ ಸುಮಾರು ಮೂವತ್ತು ಜನರು ಬೆಳೆದು ವಯಸ್ಕರಾದ ನಂತರ ಕ್ರೈಸ್ತ ಮತಕ್ಕೆ ಬದಲಾಯಿಸಿಕೊಂಡಿದ್ದಾರೆ'.

## ಧೈರ್ಯವೆಲ್ಲಿದೆ?

ಅವರಿಗೆ ನೀತಿ ಎಂದರೆ ಜಾತಿ ಬದಲಾಯಿಸಿಕೊಳ್ಳುವುದು. ಕ್ರೈಸ್ತನಲ್ಲದವನು ನೀತಿವಂತನಾಗಲಾರ. ಮಹಾತ್ಮ ಗಾಂಧಿಯ ವಿಷಯವಲ್ಲಿ ಒಬ್ಬ ಮುಸ್ಲಿಂ ನಾಯಕನು ಹೇಳಿದ ಮಾತು ಪ್ರಸಿದ್ಧವಾಗಿದೆ. 'ಅವನು ಮಹಾತ್ಮನಿರಬಹುದು. ಆದರೆ ಒಬ್ಬ ಲಫಂಗನಾದ ಮುಸ್ಲಿಮನಿಗಿಂತ ಅವನು ಕೀಳೇ. ಏಕೆಂದರೆ ಅವನು ಮುಸ್ಲಿಮನಲ್ಲ'. ಈ ಮನಃಸ್ಥಿತಿಯವರಿಗೆ ನೀತಿಯು ಮತವನ್ನು ಅವಲಂಬಿಸಬೇಕಿಲ್ಲ ಎಂಬ ದೃಷ್ಟಿಯಾಗಲಿ, ಮತ ವಿಸ್ತರಣೆಗೆ ಹಿಂಸೆ, ಕ್ರೌರ್ಯ, ಬಲ, ಹಣ, ಆಮಿಷ, ಪ್ರಚಾರಗಳನ್ನು ಬಳಸಬಾರದೆಂಬ ಸೂಕ್ಷ್ಮವಾಗಲಿ ಇರುವುದು ಸಾಧ್ಯವಿಲ್ಲ.

ಎಲ್ಲೆಲ್ಲಿಯೂ, ಎಲ್ಲಾ ಮಾಧ್ಯಮಗಳಲ್ಲಿ, ರಾಜಕೀಯ ಶಕ್ತಿ ಸ್ಥಾನಗಳಲ್ಲಿ, ಅಂತಾರಾಷ್ಟ್ರೀಯ ವಲಯಗಳಲ್ಲಿ ಭಾರಿ ಪ್ರಚಾರವನ್ನು ಗಿಟ್ಟಿಸಿಕೊಂಡು ಈಗ ವ್ಯಾಟಿಕನ್‌ನಿಂದ ಸೇಂಟ್ ಎಂಬ ಬಿರುದನ್ನು ಪಡೆಯುವ ಹಂತದಲ್ಲಿರುವ ಮದರ್ ಥೆರೇಸಾರ ಬಗೆ

ಒಂದು ಪ್ರಶ್ನೆ: ಅನಾಥ ಮಕ್ಕಳನ್ನು ತಮ್ಮ ಆಶ್ರಮಕ್ಕೆ ಸೇರಿಸಿಕೊಂಡು ಪೋಷಿಸಿದ ಆಕೆಯು ಈ ಮಕ್ಕಳನ್ನು ಅವರವರ ಮೂಲ ಧರ್ಮವನ್ನರಿಯಲು, ಅನುಸರಿಸಲು ಬಿಟ್ಟರೆ? ಆಕೆ ತೀರಿದ ಮೇಲೆ ನಾನು ಕಲ್ಕತ್ತೆಯಲ್ಲಿ ಆ ಆಶ್ರಮಕ್ಕೆ (Missionaries of Charity) ಹೋಗಿ ವಿಚಾರಿಸಿದೆ. ಆ ಮಕ್ಕಳನ್ನೆಲ್ಲ ಕ್ರೈಸ್ತರನ್ನು ಮಾಡಿಯೇ ಇದ್ದಾರೆ. ಇದೊಂದು ಮತ ವಿಸ್ತರಣೆಯ ಹುನ್ನಾರವಲ್ಲವೆ? ಇಂಥವರಿಗೆ ವ್ಯಾಟಿಕನ್ ಸಹಾಯದಿಂದ ಹಣ ಮತ್ತು ಪ್ರಚಾರಗಳು ದೊರೆತು, ಪಾಶ್ಚಿಮಾತ್ಯ ಮಾಧ್ಯಮಗಳ ಪ್ರತಿಧ್ವನಿಯಾದ ನಮ್ಮ ಮಾಧ್ಯಮಗಳೂ ಆ ಪ್ರಚಾರವನ್ನೇ ಪ್ರತಿಧ್ವನಿಸಿ, ಆಕೆಯನ್ನು ಮುಗಿಲೆತ್ತರಕ್ಕೆ ಏರಿಸಲಿಲ್ಲವೆ? ಸೇಂಟ್ ಎನ್ನಿಸಿಕೊಳ್ಳುವ ವ್ಯಕ್ತಿಯು ತನ್ನ ಜೀವನದಲ್ಲಿ ಕೆಲವಾದರೂ ಪವಾಡಗಳನ್ನು ಮಾಡಿರಬೇಕೆಂಬ ಕ್ರೈಸ್ತ ನಿಯಮವನ್ನು ಪೂರೈಸಲು ಕಲ್ಕತ್ತಾ ಆಶ್ರಮದ ಕೆಲವು ಸಂನ್ಯಾಸಿನಿಯರು ಆಕೆ ಕೆಲವು ಪವಾಡಗಳನ್ನು ಮಾಡಿದ್ದನ್ನು ತಾವು ಕಣ್ಣಾರೆ ಕಂಡೆವೆಂದು ಹೇಳಿಕೆ ನೀಡಿದಾಗ, ಸಾಯಿಬಾಬಾ ಮಾಡುತ್ತಿದ್ದರೆಂಬ ಪವಾಡಗಳಿಗೆ ಸಾರ್ವಜನಿಕ ಸವಾಲು ಎಸೆದ ನಮ್ಮ ಬುದ್ಧಿಜೀವಿಗಳು ನಿಶ್ಶಬ್ದವಾಗಿರಲಿಲ್ಲವೆ?

ಈಗ ಅರವತ್ತು ವರ್ಷಗಳ ಹಿಂದೆ ನಾನು ನನ್ನ ಹಳ್ಳಿ ಮತ್ತು ಸುತ್ತಣ ಹಳ್ಳಿಗಳಲ್ಲಿ ಕಣ್ಣಾರೆ ನೋಡುತ್ತಿದ್ದ ಸಂಗತಿ: ಒಂದು ಬಸವನ ಮೇಲೆ ಕಟ್ಟಿದ ನಗಾರಿಯ ಸದ್ದು. ಅದನ್ನು ಕೇಳುತ್ತಿದ್ದ ಗ್ರಾಮಸ್ಥರು 'ಸಿದ್ಧಗಂಗೆ ಸ್ವಾಮಿಗಳು ಭಿಕ್ಷಕ್ಕೆ ಬಂದವರೆ' ಎಂದು ಮನೆಯಿಂದ ಹೊರಗೆ ಬರುತ್ತಿದ್ದರು. ಈಗ ಶತಾಯುಷಿಯಾಗಿರುವ ಶಿವಕುಮಾರ ಸ್ವಾಮಿಗಳಿಗೆ ಆಗ ನಲವತ್ತರ ಪ್ರಾಯ. ಎತ್ತಿನ ಗಾಡಿಯಲ್ಲಿ ಕುಳಿತು ಬರುತ್ತಿದ್ದರು. ಹಳ್ಳಿಯವರು ತಾವೇ ಮನೆಮನೆಗಳಿಂದ ರಾಗಿ, ಕಾಳು, ಮೆಣಸಿನಕಾಯಿಗಳನ್ನು ಎತ್ತಿ ಮೂಟೆ ಕಟ್ಟಿ ತಮ್ಮದೇ ಗಾಡಿಗೆ ತುಂಬಿ ತಮ್ಮ ಎತ್ತುಗಳನ್ನು ಕಟ್ಟಿ, ಆಳಿನೊಡನೆ ನಲವತ್ತು ಮೈಲಿ ದೂರದ ಸಿದ್ಧಗಂಗೆಗೆ ಕಳಿಸುತ್ತಿದ್ದರು. ಹಳ್ಳಿ ಹಳ್ಳಿಗಳಿಂದ ಹೀಗೆ ದಿನಸಿ ಹೋಗುತ್ತಿತ್ತು. ಸ್ವಾಮಿಗಳು ದಿನಸಿಯನ್ನು ಕೇಳುತ್ತಿರಲಿಲ್ಲ. ಗ್ರಾಮಸ್ಥರು ತಾವಾಗಿಯೇ ಕೊಡುತ್ತಿದ್ದರು. ಸ್ವಾಮಿಗಳು ಕೇಳುತ್ತಿದ್ದದ್ದು 'ನಿಮ್ಮೂರಿನಲ್ಲಿ ಬಡ ಮಕ್ಕಳು ಎಷ್ಟು ಜನವಿದ್ದರೂ ನನ್ನ ಜೊತೆ ಕಳಿಸಿ, ನಾವು ಊಟ ಹಾಕಿ, ಬಟ್ಟೆ, ಸ್ಲೇಟು ಪುಸ್ತಕ ಕೊಟ್ಟು ಓದಿಸುತೀವಿ. ವಿದ್ಯಾಭ್ಯಾಸ ಮುಖ್ಯ'. ಆಗ ಸಿದ್ಧಗಂಗೆಯಲ್ಲಿ ಇಷ್ಟು ಮಕ್ಕಳಿರ ಲಿಲ್ಲ. ಕ್ರಮೇಣ ಸಂಖ್ಯೆಯು ವರ್ಧಿಸಿ ಈಗ ಏಳೆಂಟು ಸಾವಿರವಾಗಿದೆ. ಸ್ವಾಮಿಗಳು ಸಂನ್ಯಾಸಿ ಧರ್ಮವಾದ ಭಿಕ್ಷಾಟನೆಯಿಂದ ದಿನಕ್ಕೆ ಮೂರು ನಾಲ್ಕು ಹಳ್ಳಿಗಳನ್ನು ಸುತ್ತಿ, ದಾಸೋಹದ ಪ್ರಮಾಣವನ್ನು ಬೆಳೆಸಿದರು. ಎಲ್ಲ ಜಾತಿ, ಎಲ್ಲ ಪಂಗಡಗಳ ಮಕ್ಕಳನ್ನೂ ಬೆಳೆಸಿದರು. ಮುಸಲ್ಮಾನ ಹುಡುಗರನ್ನೂ ನಾನು ಅಲ್ಲಿ ನೋಡಿದ್ದೇನೆ. ಯಾರಿಗೂ ಲಿಂಗಧಾರಣೆ ಮಾಡಿಲ್ಲ. ಅವರವರ ಜಾತಿ ಆಚರಣೆಗಳು ಅವರವರದ್ದು. ಉತ್ತಮ ನಡತೆ ಕಲಿಸುವುದಷ್ಟೇ ನಮ್ಮ ಕರ್ತವ್ಯ ಎಂಬ ನಿಯಮವಿಟ್ಟುಕೊಂಡು ನಡೆಸುತ್ತಿದ್ದಾರೆ.

ಅವರಿಗೆ ಮೊನ್ನೆ ಮೊನ್ನೆ ನೂರು ವರ್ಷವಾದಾಗ ಪತ್ರಿಕೆಗಳು ಗಮನಹರಿಸಿದವು; ಅವೂ ಕನ್ನಡ ಪತ್ರಿಕೆಗಳು. ಅವರಿಗೆ ಮದರ್ ಥೆರೇಸಾರಿಗೆ ದಕ್ಕಿದ ಪ್ರಚಾರ ಸಿಗಲಿಲ್ಲ. ಸಿಗುತ್ತಿಲ್ಲ ವೆಂದು ನಾವು ಖೇದ ಪಡಬೇಕಿಲ್ಲ. ಯಾವ ಒಳ್ಳೆಯ ಕೆಲಸ ಮಾಡಿದರೂ ಅದನ್ನು ಈಶ್ವರ ಪ್ರಣಿಧಾನ ಭಾವನೆಯಿಂದ ಸಾಧಿಸುವುದು ಯೋಗಿಯ ಪಂಚನಿಯಮಗಳಲ್ಲಿ ಒಂದು. ನಾನು ಮಾಡಿದೆ ಎಂಬ ಭಾವನೆಗೆ ಒಳಗಾಗುವುದು ಅಹಂಕಾರವನ್ನು ಉಬ್ಬಿಸಿ ಕೊಂಡಂತೆ. ಅವನು ಯೋಗ ಸಾಧನೆಯ ಮುಂದಿನ ಮೆಟ್ಟಿಲನ್ನು ಹತ್ತಲಾರ. ಮಲ್ಲಾಡಿ ಹಳ್ಳಿಯ ರಾಘವೇಂದ್ರ ಸ್ವಾಮಿಗಳು, ಬಾಬಾ ಆಮ್ಟೆ, ಬಿಳಿಗಿರಿರಂಗನಬೆಟ್ಟದ ಡಾ. ಸುದರ್ಶನ ಮೊದಲಾಗಿ ಆಧುನಿಕ ಭಾರತದ ಹಲವರು ಜನಸೇವೆಯ ನಿಷ್ಕಾಮ ಕರ್ಮದಲ್ಲಿ ತೊಡಗಿದ್ದಾರೆ. ಮದರ್ ಥೆರೇಸಾರಿಗಿಂತ ಹೆಚ್ಚಿನ ಸೇವೆ ಮಾಡಿದ್ದಾರೆ. ಅವರು ಯಾರಿಗೂ ಆಕೆಗೆ ಸಂದ ವೈಭವ ದೊರೆಯಲಿಲ್ಲ. ಏಕೆಂದರೆ ಅವರದು ಏಸುವಿನ ಮಹಿಮೆಯನ್ನು ಪ್ರಚಾರ ಮಾಡುವ ಸೇವೆಯಲ್ಲ.

**ಅನುಷ್ಠಾನಗೊಳಿಸುವವರಾರು?**

ಹಲವರನ್ನಾದರೂ ಕ್ರೈಸ್ತ ಮತಕ್ಕೆ ತಂದರೆ ಮಾತ್ರ ನೀನು ನಿಜವಾದ ಕ್ರೈಸ್ತ ಎಂಬ ಬೋಧನೆಯನ್ನು ತಲೆಗೆ ತುಂಬಿಕೊಂಡ ಸಾವಿರಾರು ಜನರು ಕೇರಿ-ಕೇರಿಗಳಲ್ಲಿ, ಹಳ್ಳಿ ಹಳ್ಳಿಗಳಲ್ಲಿ, ಕಾಡು-ಗುಡ್ಡಗಳಲ್ಲಿ ಮತ ಪರಿವರ್ತನೆಯ ಕೆಲಸದಲ್ಲಿ ತೊಡಗಿದ್ದಾರೆ. ಅವರಿಗೆ ಬೇಕಾದ ಕಡೆ ತರಬೇತಿ, ಹಣ, ಮಾರ್ಗದರ್ಶನ, ಎಲ್ಲಾದರೂ ಎಡವಟ್ಟಾದರೆ ಸಾರ್ವಜನಿಕ ಹಾಗೂ ರಾಜಕೀಯ ಅಬ್ಬರವನ್ನು ಒದಗಿಸುವ ಮಹಾದಂಡ ನಾಯಕತ್ವವು ವಿದೇಶೀ ಮೂಲದ ಮಿಶನರಿಗಳದು. ಹಿಂದೂಗಳಿಗಾದರೋ ಕಳೆದು ಗೊತ್ತೇ ಹೊರತು ಗಳಿಸಿ ಗೊತ್ತಿಲ್ಲ. ಮತ ಪರಿವರ್ತನೆಗೆ ಸಂಬಂಧಿಸಿ ಒಂದು ಕಾನೂನೇನೋ ಇದೆ. ಅದನ್ನು ನ್ಯಾಯಾಲಯವು ಕೂಡ ವಿವರಿಸಿದೆ. ಆದರೆ ಈ ವಿವರಣೆಯನ್ನು ಅನುಷ್ಠಾನ ಗೊಳಿಸುವವರಾರು? ಯಾರಾದರೂ ಹಿಂದೂಗಳು ಪರಿವರ್ತನೆಯಲ್ಲಿ ತೊಡಗಿರುವವರನ್ನು ಹಿಡಿದು ಪೊಲೀಸರಿಗೆ ಒಪ್ಪಿಸಲು ಯತ್ನಿಸಿದರೆ ನಮ್ಮ ಮಾಧ್ಯಮಗಳ ಚಿತ್ರಣಗಳಲ್ಲಿ ಅವರೇ ಧರ್ಮಾಂಧರಾಗುತ್ತಾರೆ. ಪೊಲೀಸರು ಕ್ರಮ ಕೈಗೊಳ್ಳುವುದಿಲ್ಲ. ಯಾವ ಪಾತಕಿಗೂ ಶಿಕ್ಷೆಯಾಗುವುದಿಲ್ಲ. ತಡೆಯ ಹೊರಟವರನ್ನು ನೂರಾರು ಹೆಸರಿನ ಕ್ರೈಸ್ತ ಸಂಘಗಳಲ್ಲದೆ ನಮ್ಮ ರಾಜಕೀಯ ಪಕ್ಷಗಳು, ವಿವಿಧ ಬಣ್ಣಗಳ ಸಾಮಾಜಿಕ ಪಕ್ಷಗಳು, ವಿವಿಧ ಬಣ್ಣಗಳ ಬುದ್ಧಿಜೀವಿಗಳು ಮುಗಿಲು ಮುಟ್ಟುವಂತೆ ಖಂಡಿಸುತ್ತಾರೆ. ಸರ್ಕಾರವಂತೂ ಅವರನ್ನು ಅರೇಸ್ಟ್ ಮಾಡಿಸುತ್ತದೆ. ಅಶಾಂತಿಯ ಉತ್ಪಾದಕರು ಎಂಬ ಆಪಾದನೆ ಹೊರಿಸುತ್ತದೆ. ಕಾಂಗ್ರೆಸ್ಸಿಗೆ ನೆಹರೂ ಕಾಲದಿಂದಲೂ ಹಿಂದೂಗಳನ್ನು ಬಲಿಕೊಟ್ಟು ಅದನ್ನು ಸಮರ್ಥಿಸುವ ಪರಿಪಾಠವಿದೆ. ಕಾಂಗ್ರೆಸ್ ಮೇಲೆ ಮಹಾತ್ಮ ಗಾಂಧಿಯ ಹಿಡಿತವು ಸ್ವಾತಂತ್ರ್ಯ ಪ್ರಾಪ್ತಿಯ ಮೊದಲೇ ಸಡಿಲವಾಗಿತ್ತು. ನೆಹರೂರ ರೀತಿ-ನೀತಿಗಳು ಎಂದೂ ಗಾಂಧೀ ತತ್ವಕ್ಕೆ ವಿರೋಧ

ವಾಗಿಯೇ ಇದ್ದವು. ಈಗಂತೂ ಈ ಪಕ್ಷವನ್ನು ವ್ಯಾಟಿಕನ್ ದೇಶದ ಕ್ರೈಸ್ತ ಮಹಿಳೆಯು ನಿಯಂತ್ರಿಸುತ್ತಿದ್ದಾಳೆ. ಪ್ರತಿಯೊಬ್ಬ ಕಾಂಗ್ರೆಸ್ಸಿಗನೂ ಆಕೆಗೆ ಡೊಗ್ಗು ಸಲಾಮು ಹಾಕದೆ ತನ್ನ ರಾಜಕೀಯ ಅಸ್ತಿತ್ವವನ್ನು ಉಳಿಸಿಕೊಳ್ಳಲು ಅಸಾಧ್ಯವಾಗಿರುವಾಗ, ಪ್ರತಿಯೊಬ್ಬ ಕಾಂಗ್ರೆಸ್ಸಿಗನಿಗೂ ಅಧಿಕಾರದಲ್ಲುಳಿದು, ಹಣ ಮಾಡುವುದೇ ಗುರಿಯಾಗಿರುವಾಗ ಆಕೆಯನ್ನು, ಆಕೆಯ ಮತ ವಿಸ್ತರಣೆಯನ್ನು ವಿರೋಧಿಸಿ ಒಂದೇ ಒಂದು ಮಾತನಾಡುವ, ವಿರೋಧಿಸುವವರನ್ನು ನಾಮುಂದು ತಾಮುಂದು ಎಂದು ಬೈಯದೆ ಸುಮ್ಮನಿರುವ ಧೈರ್ಯ ಎಲ್ಲಿಂದ ಬರಬೇಕು? ಕಾಂಗ್ರೆಸ್ಸಿನಲ್ಲಿಲ್ಲದ ದೇವೇಗೌಡರು, ಮುಲಾಯಂ ಸಿಂಗ್, ಲಾಲೂ ಪ್ರಸಾದ್ ಯಾದವ್ ಮೊದಲಾದವರಿಗೆ ಅಲ್ಪಸಂಖ್ಯಾತರ ಓಟಿನ ಮೇಲೆ ಕಣ್ಣು. ಹಿಂದೂ ಪರವೆಂದು ಬಿಂಬಿಸಿಕೊಂಡಿರುವ ಬಿಜೆಪಿ ಮೇಲೆ ದ್ವೇಷ. ಹಿಂದೂದ್ವೇಷವು ಭಾರತದ ಕಮ್ಯೂನಿಸ್ಟರ ಬದ್ಧ ತತ್ವಗಳಲ್ಲೊಂದು. ಬುದ್ಧಿಜೀವಿಗಳ ಬುದ್ಧಿಯು ರೂಪಿತವಾಗಿರು ವುದೇ ಮೆಕಾಲೆಯು ಗುರಿ ಇಟ್ಟ ವಿಚಾರಗಳಿಂದ. ದಿನಕ್ಕೆ ಒಂದು ವೇದ ಮಂತ್ರಗಳಿಂದ ಪೂಜೆ ನಡೆಯುವ ದೇವಾಲಯ, ಒಂದು ಕುರಿ ಹೋತಗಳ ಬಲಿಯನ್ನು ಕದ್ದು ಮಾಡುವ ದೇವಾಲಯಗಳಿಗೆ ಹೋಗಿ ಪೂಜೆ ಮಾಡಿಸಿ, ಇಪ್ಪತ್ತೊಂದು, ಐವತ್ತೊಂದು ಅಥವಾ ನೂರಾ ಒಂದು ಋತ್ವಿಜರಿಂದ ಹತ್ತಾರು ಲಕ್ಷ ರೂಪಾಯಿಗಳ ಖರ್ಚಿನಿಂದ ಹೋಮ ಮಾಡಿಸಿ, ಅದರ ಭಸ್ಮವನ್ನು ಹಣೆಗೆ ಹಚ್ಚಿ, ಸಂಜೆ ಮಸೀದಿಗೆ ಹೋಗಿ ಮುಂದಿನ ಜನ್ಮದಲ್ಲಿ ಮುಸಲ್ಮಾನ ಜನ್ಮವನ್ನು ಕೊಡುವಂತೆ ತಾನು ದೇವರನ್ನು ಸದಾ ಪ್ರಾರ್ಥಿಸುತ್ತಿ ರುವುದಾಗಿ ಭಾಷಣ ಮಾಡುವ ರಾಜಕಾರಣಿಗಳೇ ನಮ್ಮಲ್ಲಿ ಹೆಚ್ಚು. ಹಾಗೆ ಮಾಡದಿದ್ದರೆ ಪ್ರಜಾಪ್ರಭುತ್ವದಲ್ಲಿ ಉಳಿಯುವುದೆಂತು? ಎಂಬುದು ಅವರ ಅಂತರಂಗದ ಕಾಳಜಿ. ಇವರು ಮತ ಪರಿವರ್ತನೆಯನ್ನು ವಿರೋಧಿಸುವವರ ವಿರುದ್ಧ ಗಾಂಧಿ ಪ್ರತಿಮೆಯ ಎದುರು ಮಧ್ಯಾಹ್ನ ಊಟದ ಹೊತ್ತಿನವರೆಗೆ ಉಪವಾಸ ಮಾಡುತ್ತಾರೆ. ಮತ ಪರಿವರ್ತನೆ ಯನ್ನು ಕಾನೂನಿನಲ್ಲಿ ನಿಷೇಧಿಸಬೇಕೆಂಬ ಬೇಡಿಕೆಯನ್ನು ದಲಿತ ಬುದ್ಧಿಜೀವಿಗಳು ವಿರೋಧಿಸುತ್ತಾರೆ. ತಾವೆಲ್ಲ ಒಟ್ಟಿಗೆ ಕ್ರೈಸ್ತ ಅಥವಾ ಮುಸಲ್ಮಾನರಾಗುತ್ತೇವೆಂಬ ಬೆದರಿಕೆಯ ಅಸ್ತ್ರ ಕಳೆದುಹೋಗುತ್ತದೆಂಬ ಕಾರಣ ಅವರದು. ಆದರೆ ಕ್ರೈಸ್ತರಾದ ದಲಿತರಿಗೂ ಮೀಸಲಾತಿ ಕೊಡಿಸುವ, ಆ ಮೂಲಕ ಕ್ರೈಸ್ತರಾದರೆ ಮೀಸಲಾತಿ ಹೋಗುತ್ತ ದೆಂಬ ಅಡ್ಡಿಯನ್ನು ನಿವಾರಿಸುವ ಚರ್ಚಿನ ಹುನ್ನಾರವನ್ನು ಇದೇ ದಲಿತ ಬುದ್ಧಿಜೀವಿಗಳು ವಿರೋಧಿಸುತ್ತಾರೆ. ದಲಿತ ಕ್ರೈಸ್ತರಿಗೂ ಮೀಸಲಾತಿಯನ್ನು ವಿಸ್ತರಿಸಿದರೆ ದಲಿತರಾಗಿಯೇ ಇರುವ ತಮಗೆ ದೊರೆಯುವ ಈ ಸೌಲಭ್ಯವನ್ನು ಹಂಚಿಕೊಳ್ಳಬೇಕಾಗುವ ಅನುಕೂಲಕ್ಕೆ ಅವರು ಸಿದ್ಧರಿಲ್ಲ. ಮುಸಲ್ಮಾನರಿಗೂ ಮೀಸಲಾತಿಯನ್ನು ವಿಸ್ತರಿಸಿದ ಆಂಧ್ರದ ಸ್ಯಾಮ್ಯು ಯೆಲ್ ರಾಜಶೇಖರ ರೆಡ್ಡಿಯದು ಮುಂದೆ ಈ ವಿಸ್ತರಣೆಯನ್ನು ಕ್ರೈಸ್ತರಿಗೆ ಕೊಡುವ ಯೋಜಿತ ತಂತ್ರ. ದಲಿತರಿಗೆಲ್ಲ ತಮ್ಮ ಮನೆಯಿಂದ ಹಿಂದೂ ದೇವದೇವತೆಯರ, ಮಾರಮ್ಮನದೂ ಸೇರಿದಂತೆ, ಪಟಗಳನ್ನು ಹೊರ ಹಾಕಿಸಿ ಬುದ್ಧ ದೀಕ್ಷೆ ಕೊಡಿಸುವ

ತಳವಳಿ ಮಾಡುವ ದಲಿತ ಬುದ್ಧಿಜೀವಿಗಳು ಸರ್ಕಾರಿ ದಾಖಲೆಯಲ್ಲಿ ಮಾತ್ರ ದಲಿತ ಜಾತಿ ಎಂದೇ ಬರೆಸುತ್ತಾರೆ. ಪರಿವರ್ತನೆಯನ್ನು ನಿಷೇಧಿಸಬೇಕೆಂದು ಮನವಿ ಅರ್ಪಿಸುವ ಮಠಾಧೀಶರಿಗೆ ಈ ಎಲ್ಲ ತಂತ್ರಗಾರರೂ 'ಮಠಾಧೀಶರು ತಮ್ಮ ಕೆಲಸ ತಾವು ಮಾಡಿಕೊಂಡಿರಲಿ. ಈ ವಿಷಯಕ್ಕೆ ಬರುವುದು ಬೇಡ' ಎಂದು ಎಚ್ಚರಿಕೆ ನೀಡುತ್ತಾರೆ.

ಮಠಾಧೀಶರ ಕೆಲಸವೆಂದರೆ ಚುನಾವಣಾ ಪೂರ್ವದಲ್ಲಿ ರಾಜಕಾರಣಿಗಳು ತಾವು ಕರೆತರುವ ಛಾಯಾಚಿತ್ರಕಾರನ ಎದುರು ಅವರಿಗೆ ಫಲ-ಪುಷ್ಪಗಳನ್ನು ಅರ್ಪಿಸಿ ಪಾದಸ್ಪರ್ಶ ಮಾಡುವಾಗ, ಆಶೀರ್ವಾದ ಸೂಚಕ ಬಲಗೈ ಎತ್ತುವುದು ಮಾತ್ರವೆ?

**ನೈತಿಕ ಹೊಣೆ ಯಾರದು?**

ಇಂಥ ಸ್ಥಿತಿಯಲ್ಲಿ ಕೆಲವು ಹಿಂದೂ ಯುವಕರು, ಮತ ಪರಿವರ್ತನೆಯು ಅವ್ಯಾಹತವಾಗಿ ನಡೆಯುವ ಪ್ರದೇಶದವರು, ತಾವೇ ಅದನ್ನು ತಡೆಯಲು ಮುಂದೆ ಹೋದಾಗ ಈ ತಂತ್ರಗಾರರು ಮತ್ತು ಮಾಧ್ಯಮದವರು ದೊಡ್ಡ ಗದ್ದಲ ಎಬ್ಬಿಸುತ್ತಾರೆ. ಆ ಮೂಲಕ ಅಂತಾರಾಷ್ಟ್ರೀಯ ಅಧಿಪತ್ಯವುಳ್ಳ ಕ್ರೈಸ್ತರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾರೀ ಅನಾಹುತವಾಗುತ್ತಿದೆ ಎಂಬ ಗದ್ದಲ ಎಬ್ಬಿಸುತ್ತಿದ್ದಾರೆ. ಫ್ರಾನ್ಸ್ ದೇಶದಲ್ಲಿ ಯಾವ ಶಾಲಾ ಮಕ್ಕಳೂ ತಮ್ಮ ಮತ ಲಾಂಛನಗಳನ್ನು ಧರಿಸಬಾರದು. ಎಲ್ಲರಲ್ಲೂ ಭೇದವಿಲ್ಲದೆ ತಾವು ಫ್ರೆಂಚರು ಎಂಬ ಭಾವನೆ ಬೆಳೆಯಬೇಕು ಎಂಬ ಉದ್ದೇಶದಿಂದ ಮುಸ್ಲಿಂ ಹುಡುಗಿಯರು ತಲೆಗೆ ಚೌಕ ಕಟ್ಟುವುದನ್ನೂ ಸಿಖ್ ಹುಡುಗರು ಪೇಟಾ ಕಟ್ಟುವುದನ್ನೂ ನಿಷೇಧಿಸಿದ್ದಾರೆ. ಮೊನ್ನೆ ಫ್ರಾನ್ಸಿಗೆ ಅಲ್ಪಾವಧಿ ಭೇಟಿ ನೀಡಿದ ನಮ್ಮ ಪ್ರಧಾನಿ ಮನಮೋಹನ ಸಿಂಗರು ಸಿಖ್ ಹುಡುಗರಿಗೆ ಪೇಟಾ ಕಟ್ಟಿ ಶಾಲೆಗೆ ಹೋಗುವ ಅವಕಾಶ ಕೊಡುವಂತೆ ಅಧ್ಯಕ್ಷ ಸರ್ಕೋಜಿಗೆ ಮನವಿ ಮಾಡಿದರು. ಆದರೆ ಮಿಶನರಿಗಳ ವಿರುದ್ಧ ಒರಿಸ್ಸಾ ಮತ್ತು ಕರ್ನಾಟಕದ ಕೆಲವು ಕಡೆಗಳಲ್ಲಿ ನಡೆಯುತ್ತಿರುವ ಗಲಭೆಯ ಹಿಂದಿರುವ ಕಾರಣವನ್ನು ವಿವರಿಸದೆ ತಾವು ಸ್ವದೇಶಕ್ಕೆ ಹಿಂತಿರುಗಿದ ತಕ್ಷಣ ಕಠಿಣ ಕ್ರಮ ಕೈಗೊಂಡು ಗಲಭೆಯನ್ನು ಹತ್ತಿಕ್ಕುವುದಾಗಿ ಆಶ್ವಾಸನೆ ಇತ್ತು ಬಂದರು. ದಿಲ್ಲಿಗೆ ಬಂದ ತಕ್ಷಣ ಈ ಗಲಭೆಗಳನ್ನು ಬಳಸಿಕೊಂಡು ಈ ಎರಡು ರಾಜ್ಯಗಳಲ್ಲಿ ಸರ್ಕಾರವನ್ನು ವಜಾ ಮಾಡಿ ರಾಷ್ಟ್ರಪತಿ ಆಳ್ವಿಕೆ ಎಂದರೆ ತಮ್ಮದೇ ಆದ ಕಾಂಗ್ರೆಸ್ ಆಳ್ವಿಕೆಯನ್ನು ಹೇರುವ ಹುನ್ನಾರ ನಡೆಸಿದ್ದಾರೆ.

ಪ್ರಜಾಪ್ರಭುತ್ವಾತ್ಮಕವಾಗಿ, ಕಾನೂನುಸಮ್ಮತವಾದ ವಿಧಾನಗಳಿಂದ ಮತಾಂತರದ ಪಿಡುಗನ್ನು ತಡೆಯುವುದು ಸಾಧ್ಯವಿಲ್ಲವೆಂಬ ಸ್ಥಿತಿಯಲ್ಲಿ ಕೆಲವರಾದರೂ ಹತಾಶರು ಹಿಂಸಾ ಮಾರ್ಗಕ್ಕೆ ಇಳಿದು, ಹಿಂಸಾಮಾರ್ಗದ ಪರಿಣಾಮದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಭೂಗತ ಮಾರ್ಗವನ್ನು ಆರಂಭಿಸಿದರೆ ಅದಕ್ಕೆ ನೈತಿಕ ಹೊಣೆ ಯಾರದು? ಮುಸ್ಲಿಂ ಭಯೋತ್ಪಾದಕರನ್ನು ನಿವಾರಿಸುವ ಇಚ್ಛೆಯಾಗಲಿ, ಶಕ್ತಿಯಾಗಲಿ ಸರ್ಕಾರ ಮತ್ತು

ರಾಜಕೀಯ ಪಕ್ಷಗಳಿಗೆ ಇಲ್ಲದಿರುವಾಗ ತಾವೇ ಯಾಕೆ ದೇಶದ ಸಂಸ್ಕೃತಿಯ ರಕ್ಷಣೆಯ ಮಾರ್ಗಗಳನ್ನು ಹುಡುಕಬಾರದು ಎಂಬ ವಿಚಾರದ ಜನರು ಇಲ್ಲವೆ? ಸೆಪ್ಟೆಂಬರ್ 11ರ ನಂತರ ಅಮೆರಿಕದಲ್ಲಿ ಒಂದೇ ಒಂದು ಭಯೋತ್ಪಾದನೆ ನಡೆದಿಲ್ಲ. ನಮ್ಮಲ್ಲಿ ಪ್ರತಿದಿನ ಒಂದಲ್ಲ ಒಂದು ಊರಿನಲ್ಲಿ ಹತ್ತಿಪ್ಪತ್ತು ಮೂವತ್ತು ಐವತ್ತು ಜನರನ್ನು ಸಾಯಿಸುತ್ತಲೇ ಇದ್ದಾರೆ. ಏನಕೇನ ಪ್ರಕಾರೇಣ ಅಧಿಕಾರ ಹಿಡಿದುಕೊಂಡಿರುವ ರಾಜಕಾರಣಿಗಳು ಇದನ್ನು ತಡೆಯುವುದು ಕನಸಿನ ಮಾತು. ಸತತ ಭಯೋತ್ಪಾದನೆಯಿಂದ ದೇಶದ ಧೃತಿಯನ್ನು ಉಡುಗಿಸಿ ಅನಂತರ ಎಲ್ಲ ಕಡೆಗಳಲ್ಲೂ ಏಕಕಾಲದಲ್ಲಿ ಬೆಂಕಿ ಹಚ್ಚಿ ಅಧಿಕಾರ ಹಿಡಿಯುವ ತಂತ್ರ ಭಯೋತ್ಪಾದಕರದು. ಲೆನಿನ್ ಮಾಡಿದ್ದೂ ಇದೇ ತಂತ್ರವನ್ನು, ಮಾವೋ ಮಾಡಿದ್ದೂ ಇದೇ ತಂತ್ರವನ್ನು. ನೇಪಾಳದ ಪ್ರಚಂಡನದೂ, ನಮ್ಮ ನಕ್ಸಲೀಯರದೂ ಇದೇ ತಂತ್ರ, ಇದೇ ವಿಧಾನ. ಈ ಹತಾಶೆ ಹಿಂದೂಗಳಲ್ಲಿಲ್ಲವೆ? ಅವರಲ್ಲಿ ಕೆಲವರಾದರೂ ಹತಾಶೆಯ ದಾರಿ ಹಿಡಿದರೆ ಸಮೂಹ ಖಂಡನೆಯಿಂದ ಅದನ್ನು ತಡೆಯಲು ಸಾಧ್ಯವೇ?

ಜಾತಿ ಆಧಾರದ ಮೇಲೆ ಅಧಿಕಾರ ಹಿಡಿಯುವ ರಾಜಕಾರಣಿಗಳು, ಮಾಧ್ಯಮದವರು, ಬುದ್ಧಿಜೀವಿಗಳೆನ್ನಿಸಿಕೊಳ್ಳುವವರು ಈ ಅತ್ಯಂತ ಜವಾಬ್ದಾರಿಯ ಪ್ರಶ್ನೆಯನ್ನು ಸ್ವಲ್ಪವಾದರೂ ಜವಾಬ್ದಾರಿಯಿಂದ ಚಿಂತಿಸಿ, ತುಸುವಾದರೂ ಪ್ರಾಮಾಣಿಕತೆಯಿಂದ ವರ್ತಿಸಬೇಕು.

ಫ್ರಾಂಕ್ವಾ ಗೋತಿಯೇ ತಮ್ಮ ಲೇಖನವನ್ನು ಈ ವಾಕ್ಯಗಳಿಂದ ಮುಗಿಸುತ್ತಾರೆ. 'ಸೋನಿಯಾ ಗಾಂಧಿಯ ಚುಕ್ಕಾಣಿಯಲ್ಲಿ ನಾವು ಕ್ರೈಸ್ತ ಇಂಡಿಯಾದೆಡೆಗೆ ಸಾಗುತ್ತಿದ್ದೇವೆಯೆ? ಅದು ಭಾರತಕ್ಕೆ ಮಾತ್ರವಲ್ಲ. ಪ್ರಪಂಚಕ್ಕೇ ಬಹು ದೊಡ್ಡ ನಷ್ಟವಾಗುತ್ತದೆ. ಏಕೆಂದರೆ ಈ ಗ್ರಹದಲ್ಲಿ ಜೀವಂತವಾಗಿರುವ ಅಧ್ಯಾತ್ಮವು ಭಾರತದಲ್ಲಿ ಮಾತ್ರ ಇದೆ.'

***ಈ ವಿಷಯದಲ್ಲಿ ಆಸಕ್ತಿಯುಳ್ಳವರು ಕೆಳಗಿನ ಗ್ರಂಥಗಳನ್ನು ಪರಾಮರ್ಶಿಸಬಹುದು***

1. Arun Shourie : Harvesting Our Souls (ASA)
2. Arun Shourie : Missionaries in India (ASA)
3. Matilda Joslyn Gage : Woman, Church and State (Voice of India, New Delhi)
4. Sitaram Goel : Catholic Ashrams Sannyasins or Swindiers? (Voice of India New Delhi)
5. Sitaram Goel : History of Hindu-Christianity Emcounters (A.D. 304 to 1996) (Voice of India. New Delhi)

6. ಡಾ. ನವರತ್ನ ಎಸ್. ರಾಜಾರಾಂ: ಕ್ರೈಸ್ತ ಮತದ ಉಗಮ ಮತ್ತು ಸದ್ಯ: ಸ್ಥಿತಿ (ಹೊಸ ಶೋಧಗಳು)
ಜಾಗರಣ ಪ್ರಕಾಶನ, ಬೆಂಗಳೂರು.

7. ಡಾ. ನವರತ್ನ ಎಸ್. ರಾಜಾರಾಂ: Dead Sea Scrolls and The Crisis of Christianity.
(Minerva Press London)

8. N.S. Rajaram : Profiles in Deception; Ayodhya and the Dead Sea Scrolls (Voice of India)

9. N.S. Rajaram : Christianity's Collapsing Empire and its Designs in India.
(Hindu Writers Forum, New Delhi)



# ಮತಾಂತರದ ಇತಿಹಾಸ;
# ಸಂಸ್ಕೃತಿ ನಾಶ, ಕ್ಷಾತ್ರಬಲದ ಕುಸಿತ

*- ಡಾ. ನವರತ್ನ ರಾಜಾರಾಂ*

ಭೈರಪ್ಪನವರು ತಮ್ಮ ವಿಸ್ತಾರವಾದ ಲೇಖನದಲ್ಲಿ ಕ್ರೈಸ್ತಮತ ಪ್ರಚಾರಕರ ಕಾರ್ಯ ಕ್ಷೇಪಗಳು ಮತ್ತು ಅದರಿಂದ ಭಾರತಕ್ಕೆ ಆಗಿರುವ ಮತ್ತು ಮುಂದೆಯೂ ಆಗಬಹುದಾದ ಗಂಡಾಂತರಗಳನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಇದೇ ವಿಷಯದಲ್ಲಿ ನಾನು 15 ವರ್ಷ ಗಳಿಗೂ ಹೆಚ್ಚು ಕಾಲ ಸಂಶೋಧನೆ ಮಾಡಿದ್ದೇನೆ ಮತ್ತು ಹಲವಾರು ಲೇಖನಗಳನ್ನು ಮತ್ತು ಪುಸ್ತಕಗಳನ್ನು ಬರೆದಿದ್ದೇನೆ. ಇವು ಭಾರತ ಮತ್ತು ಯೂರೋಪ್-ಅಮೆರಿಕಗಳಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ಹಲವನ್ನು ಭೈರಪ್ಪನವರು ತಮ್ಮ ಲೇಖನದಲ್ಲಿ ಉಲ್ಲೇಖಿಸಿ ದ್ದಾರೆ. ನನ್ನ ಅಭಿಪ್ರಾಯದಲ್ಲಿ ಈ ರೀತಿಯ ಚಿಂತನೆ ಮತ್ತು ಸಂವಾದ ಭಾರತಕ್ಕೆ ಸ್ವಾತಂತ್ರ್ಯ ಬಂದಾಗಲೇ ಆರಂಭವಾಗಬೇಕಿತ್ತು, ಆದರೆ ಆಗಲಿಲ್ಲ. ಅದು ಹೇಗೇ ಇರಲಿ, ಈಗ ಆಗುತ್ತಿರುವ ಸಂವಾದವನ್ನು ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿ ಚಿಂತನೆಯನ್ನು ಓದುಗರ ಮುಂದಿಡಲು ಪ್ರಯತ್ನ ಮಾಡಿದ್ದೇನೆ. ಈ ನನ್ನ ಲೇಖನದಲ್ಲಿ, ಒಂದೊಂದು ವಿಷಯದ ಪರ-ವಿರುದ್ಧ ವಾದಗಳ ಜತೆ ಕ್ರೈಸ್ತಮತದ ಇತಿಹಾಸ ಮತ್ತು ನಡತೆಗಳ ಹಿನ್ನೆಲೆಯ ವಸ್ತುಸ್ಥಿತಿಯನ್ನು ಚಿತ್ರಿಸಿದ್ದೇನೆ. ಏಕೆಂದರೆ ಭಾರತದಲ್ಲಿ ಬಹುಮಟ್ಟಿಗೆ ಜನ ಕ್ರೈಸ್ತಮತ ಪ್ರಚಾರವನ್ನೇ ಇತಿಹಾಸವೆಂದು ನಂಬಿದ್ದಾರೆ. ಕಳೆದ 200 ವರ್ಷಗಳ ಸಂಶೋಧನೆಯ ಬಗ್ಗೆ ಬಹುಮಟ್ಟಿಗೆ ಅಜ್ಞಾನವೇ ಕಂಡುಬರುತ್ತದೆ. ವಸ್ತುಸ್ಥಿತಿಯನ್ನು ಅರಿಯದೆ ವಾದ ಮಾಡುವುದು ಅರ್ಥಹೀನವೆಂದು ಬೇರೆ ಹೇಳಬೇಕಿಲ್ಲ.

ಈ ಸಂವಾದವನ್ನು ಸರಿಯಾಗಿ ವಿಮರ್ಶಿಸಬೇಕಾದರೆ ಅಬ್ರಹಾಮೀಯ (ಎಂದರೆ ಕ್ರೈಸ್ತ, ಮುಸಲ್ಮಾನ ಮತ್ತು ಯಹೂದಿ) ಮತಗಳಿಗೂ ಮತ್ತು ಸನಾತನ ಅಥವಾ ಹಿಂದೂ ಸಂಪ್ರದಾಯಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಲೇಬೇಕು. ಇದು ಅವರ ಲೇಖನದ ಮೂಲ ಅಂಶಗಳಲ್ಲಿ ಒಂದು. ಭೈರಪ್ಪನವರು ಹೇಳಿರುವಂತೆ ನೂರಾರು ವರ್ಷಗಳಿಂದಲೂ ಹಿಂದೂಧರ್ಮದ ಆಚರಣೆಯಲ್ಲಿ ಮತ್ತು ಸಮಾಜದಲ್ಲಿ ಸುಧಾರಣೆಗಳಾಗಿವೆ. ಇನ್ನೂ

ಆಗುತ್ತಲೂ ಇವೆ. ಭಾರತದ ರಾಜ್ಯಾಂಗ ಮತ್ತು ನ್ಯಾಯಾಂಗ-ಇವುಗಳನ್ನು ಸೃಷ್ಟಿಸಿದ ಧುರೀಣರು ಬಹುಮಟ್ಟಿಗೆ ಉನ್ನತ ಜಾತಿಯವರೇ. ಆದರೂ ಮನುಸ್ಮೃತಿಯನ್ನು ತಿರಸ್ಕರಿಸಿ ಆಧುನಿಕತ್ವಕ್ಕೆ ಹೊಂದುವಂತಹ ರಾಷ್ಟ್ರವನ್ನು ಅಸ್ತಿತ್ವಕ್ಕೆ ತಂದಿದ್ದಾರೆ. ಅಲ್ಲದೆ ಹಿಂದುಳಿದ ವರ್ಗದವರನ್ನು ಮುಂದೆತರಲು ರಿಸರ್ವೇಷನ್ ಮೊದಲಾದ ಕಾನೂನುಗಳನ್ನು ಜಾರಿಗೆ ತಂದಿದ್ದಾರೆ. ಆದರೆ ಭೈರಪ್ಪನವರ ಲೇಖನಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸಿರುವ 'ಬುದ್ಧಿ ಜೀವಿಗಳು' ಈ ಮುಖ್ಯ ಅಂಶವನ್ನು ಅಲಕ್ಷ್ಯ ಮಾಡಿ, ಮನುವೇ ಹಿಂದುಗಳ ಪ್ರತೀಕ ಎನ್ನುವ ಧೋರಣೆಯನ್ನು ತಳೆದು ಅವರನ್ನು ಟೀಕಿಸಿದ್ದಾರೆ. ಇದರಿಂದ ಆಗಬೇಕಾದ ಸಂವಾದ ಹಳಿ ತಪ್ಪಿದಂತಾಗಿದೆ. ಇದು ವಿಷಾದಕರ.

ಭೈರಪ್ಪನವರು ಎತ್ತಿರುವುದು ಬಹಳ ಗಂಭೀರವಾದ ವಿಷಯ, ಆಳವಾಗಿ ಚಿಂತಿಸ ಬೇಕಾದದ್ದು. ಏಕೆಂದರೆ ಅವರು ತಮ್ಮ ಲೇಖನದಲ್ಲಿ ಬಲವತ್ತರವಾದ ಆಧಾರಗಳನ್ನು ಕೊಟ್ಟಿದ್ದಾರೆ. ಸುಮ್ಮನೆ ಅವರಿಗೆ ಕೋಮುವಾದಿ ಅಥವಾ ಇನ್ನಿತರ ಅಪಾದನೆಯ 'ಲೇಬಲ್' ಕಟ್ಟಿ ತಳ್ಳಿಹಾಕುವುದು ಪ್ರಬುದ್ಧತೆಯ ಲಕ್ಷಣವಲ್ಲ. ಅವರ ಲೇಖನವನ್ನು ವಿವೇಚಿಸುವುದಕ್ಕೆ ಮೊದಲು, ಸೂಕ್ಷ್ಮವಾಗಿ ಹಲವು ಪ್ರತಿಕ್ರಿಯೆಗಳನ್ನು ನೋಡುವುದು ಉಚಿತ. ಅವರನ್ನು ಟೀಕಿಸಿರುವ ಪ್ರತಿಕ್ರಿಯೆಗಳಲ್ಲಿ ಅಂತಹ ಅಧ್ಯಯನವೇನೂ ಕಂಡು ಬರುವುದಿಲ್ಲ. ಕೇವಲ ತಮ್ಮ ಪೂರ್ವಗ್ರಹದ ಆಧಾರದ ಮೇಲೆ ಮಾಡಿರುವ ಅಭಿಪ್ರಾಯ ಗಳ ಪುನರುಚ್ಚಾರಣೆಗಳೇ ಕಂಡುಬರುತ್ತವೆ. ಇವರಲ್ಲಿ ಹಲವನ್ನು ನೋಡಬಹುದು.

ಈ ಪ್ರತಿಕ್ರಿಯೆಗಳಲ್ಲಿ ಕೆಲವರಿಗೆ ಮೂಲಗ್ರಂಥಗಳ ಪರಿಚಯವೇ ಇರುವಂತೆ ಕಾಣುವುದಿಲ್ಲ. ಕೇವಲ ಪೂರ್ವಗ್ರಹ ಪೀಡಿತ ಅಭಿಪ್ರಾಯಗಳನ್ನೇ ಮಂಡಿಸಿದ್ದಾರೆ. ಒಂದು ಉದಾಹರಣೆ ಸಾಕು ಅವರ ಅಜ್ಞಾನಕ್ಕೆ. ಆ ಕೆಲವರ ಪ್ರಕಾರ ಹಿಂದೂಗಳು ಭಾರತದ ಹೊರಗೆ ಏನನ್ನೂ ಸ್ಥಾಪಿಸಿಲ್ಲ. ಅಂದರೆ ಅವರಿಗೆ ಇಂಡೋನೇಷಿಯ, ಥೈಲಾಂಡ್, ಕಾಂಬೋಡಿಯ ಮತ್ತಿತರ ಪೂರ್ವ ಏಷ್ಯಾ ದೇಶಗಳ ಇತಿಹಾಸ-ಸಂಸ್ಕೃತಿಗಳ ಅರಿವೇ ಇಲ್ಲವೆಂದು ಹೇಳಬೇಕಾಗಿದೆ. ಹಲವು ಶತಮಾನಗಳ ಹಿಂದೆ ಅಲ್ಲಿ ಶೈಲೇಂದ್ರ ಸಾಮ್ರಾಜ್ಯ ಮತ್ತು ಅದಕ್ಕೂ ಹಿಂದೆ ಶ್ರೀವಿಜಯ ಸಾಮ್ರಾಜ್ಯ ಇವುಗಳು ಇದ್ದುವೆನ್ನುವ ಜ್ಞಾನವನ್ನು ಇಂತಹವರಿಂದ ನಿರೀಕ್ಷಿಸುವುದರಲ್ಲಿ ಅರ್ಥವಿಲ್ಲ. ಇಷ್ಟಕ್ಕೇ ಬಿಡುವುದು ಲೇಸು.

ಮತ್ತೆ ಕೆಲವರು ಪ್ರದರ್ಶಿಸಿರುವ ಅಜ್ಞಾನ ಆಶ್ಚರ್ಯವುಂಟು ಮಾಡುತ್ತದೆ. ಅವರು ಕ್ರೈಸ್ತಮತ ಪ್ರಚಾರಕ್ಕಾಗಿ ರಚಿಸಿರುವ ಸುವಾರ್ತೆಗಳು (Gospels) ಇತಿಹಾಸವೆಂದು ನಂಬಿರುವಂತೆ ಕಾಣುತ್ತದೆ. ಇಲ್ಲದಿದ್ದರೆ ಯಹೂದಿಗಳು ಏಸುವನ್ನು ಶಿಲುಬೆಗೇರಿಸಿದವರು ಎಂದು ಹೇಳುತ್ತಿರಲಿಲ್ಲ. ಈ ಅಪಪ್ರಚಾರವನ್ನು ಯೂರೋಪ್-ಅಮೆರಿಕಗಳಲ್ಲಿ ಮತ ಪ್ರಚಾರಕರು ಕೈಬಿಟ್ಟಿದ್ದರೂ ಭಾರತದಲ್ಲಿ ಇನ್ನೂ ಹಿಡಿದಿದ್ದಾರೆ. ಇದಕ್ಕೆ ಇತಿಹಾಸದ ಆಧಾರವಿಲ್ಲವೆನ್ನುವುದನ್ನು ವ್ಯಾಟಿಕನ್ ಸಹ ಒಪ್ಪಿಕೊಂಡಿದೆ. ಇದು 200 ವರ್ಷಗಳಿಗೂ ಮೀರಿದ ಸಂಶೋಧನೆಯ ಫಲ. ಇದನ್ನು 19ನೆಯ ಶತಮಾನದಲ್ಲಿನ ಅಲ್ಬೆರ್ಟ್ ಷ್ವೈಟ್ಜರ್‌ನಿಂದ ಹಿಡಿದು ಈಗಿನ ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದ ಉದ್ದಾಮ ಕ್ರೈಸ್ತ

ಪಂಡಿತೆ (ಮತಪ್ರಚಾರಕಳಲ್ಲ) ಎಲೈನ್ ಪಾಗೆಲ್ಸ್ ರಚಿತ 'Gnostic Gospels' ಮತ್ತು ಕ್ರೈಸ್ತ ಇತಿಹಾಸಕಾರ ಬಾರ್ಟ್ ಎಹ್ರ್ಮನ್ನನ Lost Gospels: Books that did not make it into the New Testament (ಕಳೆದುಹೋದ ಸುವಾರ್ತೆಗಳು) ಗ್ರಂಥಗಳಲ್ಲಿ ಸ್ಪಷ್ಟವಾಗುತ್ತದೆ.

ವಿಷಯ ಭೈರಪ್ಪನವರ ಅಭಿಪ್ರಾಯಗಳನ್ನು ನೀವು ಒಪ್ಪಬಹುದು ಅಥವಾ ಒಪ್ಪದಿರ ಬಹುದು, ಅದು ನಿಮಗೆ ಸೇರಿದ್ದು. ನನಗೂ ಅವರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಅವರು ಗಾಢವಾದ ಅಧ್ಯಯನ ಮಾಡದೆ ಏನನ್ನೂ ಬರಿಯುವುದಿಲ್ಲ. ಆದ್ದರಿಂದ ಅವರ ಲೇಖನವನ್ನು ಲಘುವಾಗಿ ತೆಗೆದುಕೊಂಡು ಅವರನ್ನು ವೈಯಕ್ತಿಕವಾಗಿ ಟೀಕಿಸಿದರೆ ಏನನ್ನೂ ಸಾಧಿಸಿದಂತಾಗುವುದಿಲ್ಲ.

ಭಾರತದಲ್ಲಿ ಬುದ್ಧಿಜೀವಿಗಳೆಂದು ಹೇಳಿಕೊಳ್ಳುವವರಲ್ಲಿ ಸ್ವಂತ ಚಿಂತನೆಯ ಮತ್ತು ಅಧ್ಯಯನದ ಕೊರತೆಯಿದೆ. ಇದನ್ನು ನೀಗಿಸುವುದು ನಮ್ಮೆಲ್ಲರ ಕರ್ತವ್ಯ. ಇದಕ್ಕಾಗಿ ನಾನು ಮುಂದೆ ಆಧುನಿಕ ಸಂಶೋಧನೆಗಳ ಆಧಾರದ ಮೇಲೆ ನಿಂತಿರುವ ಕ್ರೈಸ್ತಮತದ ಸಾಮ್ರಾಜ್ಯ ವಿಸ್ತಾರದ ಇತಿಹಾಸ ಮತ್ತು ಅದರ ಪರಿಣಾಮಗಳು, ಮತ್ತೆ ಭಾರತಕ್ಕೆ ಇದರಿಂದ ಆಗುತ್ತಿರುವ ಮತ್ತು ಮುಂದೆಯೂ ಆಗಬಹುದಾದ ಗಂಡಾಂತರಗಳನ್ನು ಚಿತ್ರಿಸಿದ್ದೇನೆ. ಈ ನನ್ನ ಲೇಖನದಲ್ಲಿ, ಒಂದೊಂದು ವಿಷಯದ ಪರ-ವಿರುದ್ಧ ವಾದಗಳ ಜತೆ ಕ್ರೈಸ್ತ ಮತದ ಇತಿಹಾಸ ಮತ್ತು ಚಟುವಟಿಕೆಗಳ ಹಿನ್ನೆಲೆಯ ವಾಸ್ತುಸ್ಥಿತಿಯನ್ನು ಚಿತ್ರಿಸಿದ್ದೇನೆ. ಏಕೆಂದರೆ ಭಾರತದಲ್ಲಿ ಬಹುಮಟ್ಟಿಗೆ ಜನ ಕ್ರೈಸ್ತಮತ ಪ್ರಚಾರವನ್ನೇ ಇತಿಹಾಸವೆಂದು ನಂಬಿದ್ದಾರೆ. ಕಳೆದ 200 ವರ್ಷಗಳ ಸಂಶೋಧನೆಗಳನ್ನು ಬಹುಮಟ್ಟಿಗೆ ಮುಚ್ಚಿಹಾಕಲಾಗಿದೆ. ಮತ್ತೆ ಇದರ ಅಧ್ಯಯನಕ್ಕೆ ಸಹಾಯವಾಗುವ ಹಲವು ಗ್ರಂಥಗಳನ್ನೂ ಉಲ್ಲೇಖಿಸಿದ್ದೇನೆ.

ಭೈರಪ್ಪನವರನ್ನು ಟೀಕಿಸುವವರಲ್ಲಿ ಹಲವಾರು ಮಂದಿ ತಾವು ಪ್ರಗತಿಪರರು, ಭೈರಪ್ಪ-ನವರು ಮೂಲಭೂತವಾದಿ ಮತ್ತು ಪ್ರತಿಕ್ರಿಯಾವಾದಿ ಶಕ್ತಿಗಳಿಗೆ (Reactionary forceಗಳಿಗೆ) ಬೆಂಬಲ ಕೊಡುತ್ತಿದ್ದಾರೆ ಎಂದು ಆರೋಪಿಸಿದ್ದಾರೆ. ಮತ್ತೆ ಕೆಲವರು ಕ್ರೈಸ್ತರೂ ಏನೂ ಮಾಡಿಲ್ಲವೇ ಎನ್ನುವ ಪ್ರಶ್ನೆಯನ್ನೆತ್ತಿದ್ದಾರೆ. ಅವರು ಉದಾಹರಿಸಿರುವುದು ಕಿಟ್ಟೆಲ್, ಮದರ್ ತೆರೇಸಾ ಮತ್ತು ಸೋನಿಯಾ ಗಾಂಧಿಯವರ 'ಸೇವೆ'ಯನ್ನು. ಕಿಟ್ಟೆಲ್ ಶಬ್ದಕೋಶ ಬರೆದಂತೆ ಇತರರೂ ಬರೆದಿದ್ದಾರೆ. ಭಾರತದಲ್ಲಿ ಯಾಸ್ಕನ ನಿಘಂಟುವಿಗಿಂತ ಹಿಂದೆ ಹೋಗುವ ಸಾವಿರಾರು ವರ್ಷಗಳ ವಿಶ್ವದಲ್ಲಿ ಇನ್ನೆಲ್ಲೂ ಸರಿಗಟ್ಟದ ಭವ್ಯ ಸಂಪ್ರದಾಯವಿದೆ. ಅದಲ್ಲದೇ ಕಿಟ್ಟೆಲ್ಲಿನ ನಿಘಂಟಿಗೂ ಭೈರಪ್ಪನವರು ಎತ್ತಿರುವ ವಿಷಯಗಳಿಗೂ ಏನೇನೂ ಸಂಬಂಧವಿಲ್ಲ.

ಈ ಸಂದರ್ಭದಲ್ಲಿ ಪ್ರಗತಿಪರರೆಂದು ಹೇಳಿಕೊಂಡಿರುವ ಕೆಲವರು ಪ್ರಶಂಸಿಸಿ ರುವ ಇನ್ನೆರಡು ವ್ಯಕ್ತಿಗಳ 'ಸೇವೆ'ಯನ್ನು ಸ್ಥೂಲವಾಗಿ ನೋಡುವುದು ಉಚಿತ. ಮದರ್ ತೆರೇಸಾರವರ ಸೇವೆಯಿಂದ ಭಾರತಕ್ಕೆ ಎಷ್ಟು ಉಪಕಾರವಾಗಿದೆಯೋ ಅದರ ಹತ್ತರಷ್ಟು

ನೂರರಷ್ಟು ಉಪಯೋಗ ಪ್ರಚಾರ, ಪ್ರಶಸ್ತಿಗಳು ಮತ್ತು ಧನ-ಇವುಗಳಿಂದ ಮದರ್ ತೆರೇಸಾ ಮತ್ತು ಅವರ ಸಂಸ್ಥೆಯಾದ ವ್ಯಾಟಿಕನ್ನಿಗೆ ದೊರೆತಿದೆ. ಅವರು ಕೋಲ್ಕತ್ತಾದ ಅನಾಥರ ಹೆಸರಿನಲ್ಲಿ ಸಂಗ್ರಹಿಸಿದ ಧನದಲ್ಲಿ ಹೆಚ್ಚು ಪಾಲು ವ್ಯಾಟಿಕನ್ನಿಗೇ ಸಂದಾಯ-ವಾಗಿದೆ. ಕೋಲ್ಕತ್ತೆಯಲ್ಲಿ ಹೇಳುವಂತಹ ಕೆಲಸಗಳೇನೂ ಆಗುತ್ತಿಲ್ಲ. ಸತ್ಯಸಾಯಿ ಬಾಬಾರವರು ಮಾಡಿರುವ ಆಸ್ಪತ್ರೆಗಳು, ಶಾಲೆ-ಕಾಲೇಜುಗಳೂ ಮತ್ತು ನೀರಾವರಿ ಕೆಲಸಗಳಿಗೆ ಹೋಲಿಸಿದರೆ ಮದರ್ ತೆರೇಸಾರವರ ಕೊಡುಗೆ ಅತಿ ಸ್ವಲ್ಪವೆಂದು ಹೇಳ ಬೇಕಾಗುತ್ತದೆ. ಕಾರ್ಯಕ್ಕಿಂತ ಪ್ರಚಾರವೇ ಹೆಚ್ಚಾಗಿದೆ.

ಅಲ್ಲದೇ, ಮದರ್ ತೆರೇಸಾ ಅವರು ಕಳ್ಳಕಾಕರು ಮತ್ತು ಕೊಲೆಗಾರರನ್ನೂ ಸಹ ಧನಸಂಗ್ರಹಕ್ಕಾಗಿ ಸಂಪರ್ಕಿಸಿದ್ದಲ್ಲದೆ ಅಂತಹವರನ್ನು ಸಮರ್ಥಿಸಿದ್ದಾರೆ. ಅಮೆರಿಕದಲ್ಲಿ ಸಾವಿರಾರು ಅಮಾಯಕರ ಉಳಿತಾಯ ಹಣವನ್ನು ಲೂಟಿಮಾಡಿ ಜೈಲಿಗೆ ಹೋಗಿರುವ ಚಾರ್ಲಸ್ ಕೀಟಿಂಗಿನ ಮೇಲೆ ದಯೆತೋರಿಸಬೇಕೆಂದು ಸರಕಾರಕ್ಕೆ ಮನವಿ ಮಾಡಿದರು ಮದರ್ ತೆರೇಸಾ. ಇವನು ಮದರ್ ತೆರೇಸಾರವರಿಗೆ ಹೇರಳವಾಗಿ ಧನಸಹಾಯ ಮಾಡಿದ್ದ. (ಕ್ಯಾಲಿಫೋರ್ನಿಯದ ನ್ಯಾಯಾಧೀಶರು ಇದನ್ನು ಹಾಸ್ಯಾಸ್ಪದವೆಂದು ತಳ್ಳಿಹಾಕಿದರು.) ಭಾರತದಲ್ಲಿಯೇ ಭೋಪಾಲಿನಲ್ಲಿ ಯೂನಿಯನ್ ಕಾರ್ಬೈಡ್ ಅಪಘಾತದಲ್ಲಿ ಸಾವಿರಾರು ಜನರು ಸತ್ತಾಗ ಮದರ್ ತೆರೇಸಾ ಮಾಡಿದ್ದಾದರೂ ಏನು? ಘಾಸಿಗೊಂಡು ಕಂಗಾಲಾಗಿದ್ದ ಸಹಸ್ರಾರು ಅಮಾಯಕರನ್ನು ಅಲಕ್ಷಿಸಿ, ತಮಗೆ ಅಪಾರ ಧನಸಹಾಯ ಮಾಡಿದ್ದ ಯೂನಿಯನ್ ಕಾರ್ಬೈಡಿನ ಅಧ್ಯಕ್ಷ ರಾಬರ್ಟ್ ಆಂಡರ್ಸನ್ನನ ಪರವಾಗಿ ಅವನನ್ನು ಏಸುವಿನ ಹೆಸರಿನಲ್ಲಿ ಎಲ್ಲರೂ ಕ್ಷಮಿಸುವಂತೆ ಬೇಡಿಕೊಂಡರು. ಇದೆಲ್ಲಾ ಉದಾರತೆಯ ಲಕ್ಷಣವೇ?

ಇನ್ನು ಭಾರತಕ್ಕೆ ಸೋನಿಯಾ ಗಾಂಧಿಯವರ ಕೊಡುಗೆಯಾದರೂ ಎಂತಹುದು? ಅವರು ಇಟಲಿಯಲ್ಲೇ ಉಳಿದಿದ್ದರೆ ಭಾರತಕ್ಕೇನಾದರೂ ಭಾರಿ ನಷ್ಟವಾಗುತ್ತಿತ್ತೇ ಅಥವಾ ಸೋನಿಯಾ, ಕ್ವಾತ್ರೋಕ್ಕಿ ಮತ್ತು ಅವರ ಇತರ ಮಿತ್ರರಿಗೆ ನಷ್ಟವಾಗುತ್ತಿತ್ತೆ? ಇದು ಮದರ್ ತೆರೇಸಾರವರಿಗೂ ಅನ್ವಯಿಸುತ್ತದೆ; ಅವರು ಭಾರತಕ್ಕೆ ಬರದೇ ಆಲ್ಬೇನಿಯಾ ದಲ್ಲೇ ಉಳಿದಿದ್ದರೆ ಇಷ್ಟು ವಿಶ್ವವಿಖ್ಯಾತರಾಗುತ್ತಿದ್ದರೇ? ನೊಬೆಲ್ ಪ್ರಶಸ್ತಿ ದೊರೆತು, ವ್ಯಾಟಿಕನ್ನಿನ ಬೊಕ್ಕಸಕ್ಕೆ ಕೋಟ್ಯಂತರ ಡಾಲರುಗಳ ಸುರಿಮಳೆಯಾಗುತ್ತಿತ್ತೆ? ತಮ್ಮನ್ನು ತಾವೇ ಪ್ರಗತಿಪರರೆಂದು ಹೇಳಿಕೊಂಡರೆ ಸಾಲದು. ತಮ್ಮ ನಿಲುವು ಮತ್ತು ಕಾರ್ಯಗಳಲ್ಲಿ ತೋರಿಸಬೇಕು. ಬರೀ ಬಾಯಿ ಮಾತಿನಲ್ಲಲ್ಲ. ಮದರ್ ತೆರೇಸಾ ಮತಾಂಧರೆನ್ನುವುದು ನಿರ್ವಿವಾದ. ಇಲ್ಲದಿದ್ದರೆ ಅವರು ಮಹಾವಿಜ್ಞಾನಿ ಗೆಲಿಲಿಯೋನನ್ನು ಇನ್ಕ್ವಿಸಿಶನ್ ಮೂಲಕ ಹಿಂಸೆಗೆ ಗುರಿಮಾಡಿದ ವ್ಯಾಟಿಕನ್ನಿನ ಮಹಾಪರಾಧವನ್ನು ಸಮರ್ಥಿಸುತ್ತಿರಲಿಲ್ಲ. ಸೋನಿಯಾ ಗಾಂಧಿಯವರೂ ಸಹ ಅಮಾಯಕ ಮುಸ್ಲಿಂ ಮಹಿಳೆ ಇಮ್ರಾನಾಳನ್ನು ಬಲಾತ್ಕಾರವಾಗಿ ವಿವಾಹ ವಿಚ್ಛೇದನ ಮಾಡಿಸಿ ತನ್ನ ಎರಡನೆಯ ಹೆಂಡತಿಯನ್ನಾಗಿ ಮಾಡಿಕೊಂಡ ಅವಳ ಮಾವನನ್ನು ಖಂಡಿಸುವ ಧೈರ್ಯ ತೋರಿಸಲಿಲ್ಲ. ಅಷ್ಟೇಕೆ,

ಸೋನಿಯಾರವರ ಕಾನೂನು ಸಚಿವ ಎಚ್.ಆರ್. ಭಾರದ್ವಾಜ್ ಪರೋಕ್ಷವಾಗಿ ಸಮರ್ಥಿಸಿದರು ಸಹ-ಸರಕಾರ ಧರ್ಮದ ವಿಷಯದಲ್ಲಿ ಕೈಹಾಕಬಾರದೆಂದು! ಇದನ್ನು ಯಾವ ಪ್ರಗತಿಪರ ಸೆಕ್ಯುಲರಿಸ್ಟರು ಖಂಡಿಸಿದರು?

ಈಗ ಭೈರಪ್ಪನವರ ಮುಖ್ಯ ಅಂಶವಾದ ಕ್ರೈಸ್ತಮತ ಪ್ರಚಾರದ ಪರಿಣಾಮವೇನೆಂದು ನೋಡಬೇಕಾಗಿದೆ. ಇತಿಹಾಸದಿಂದ ತಿಳಿಯುವುದು ಮತಪ್ರಚಾರ ಒಂದು ಸಾಮ್ರಾಜ್ಯ ವಿಸ್ತಾರ ನೀತಿ. ಇದು ಅಧ್ಯಾತ್ಮ ಧರ್ಮವಲ್ಲ, ಒಬ್ಬ ವ್ಯಕ್ತಿಯ ಬೋಧನೆಯನ್ನೇ ಆಧಾರವಾಗಿ ಹಿಡಿದು ಮತವಿಸ್ತಾರ ಮಾಡುವ ಸಿದ್ಧಾಂತ. ಇಸ್ಲಾಂ ಮತ್ತು ಕಮ್ಯೂನಿಸಮ್‌ಗಳಂತೆ. ಇಸ್ಲಾಮಿಗೆ ಜಿಹಾದ್ ಹೇಗೋ ಕ್ರೈಸ್ತಮತಕ್ಕೆ ಮತಪ್ರಚಾರ ಹಾಗೆಯೆ. ಇದಕ್ಕೆ ನಾನು ಕ್ರೈಸ್ತಮತದ ಇತಿಹಾಸದಿಂದಲೇ ಉದಾಹರಣೆಗಳನ್ನು ಕೊಡುತ್ತೇನೆ. ಕ್ರೈಸ್ತಮತದ ಇತಿಹಾಸದಿಂದ ಎರಡು ವಿಷಯಗಳು ಸ್ಪಷ್ಟವಾಗುತ್ತವೆ. ಮೊದಲನೆಯದಾಗಿ ಕ್ರೈಸ್ತಪ್ರಚಾರಕರು ಹೋದೆಲ್ಲ ಕಡೆ ಪ್ರಾಚೀನ ಸಂಸ್ಕೃತಿಗಳು ನಾಶವಾಗಿವೆ. ಎರಡನೆಯದಾಗಿ ಆ ದೇಶ ಮತ್ತು ಪ್ರದೇಶಗಳಲ್ಲಿ ಕ್ಷಾತ್ರಬಲ ಕ್ಷೀಣವಾಗಿ ಅವು ಬರ್ಬರೀ ಶಕ್ತಿಗಳಿಗೆ ಬಲಿಯಾಗಿವೆ. ಭಾರತಕ್ಕೂ ಇದೇ ಅಪಾಯ ಬರುವ ಸಾಧ್ಯತೆಯಿದೆ. ಇದನ್ನು ನಾವು ಅರ್ಥಮಾಡಿಕೊಳ್ಳಬೇಕು.

ಕ್ರೈಸ್ತಪ್ರಚಾರಕರು ಹೇಳುವುದೆಂದರೆ ತಾವು ಸೇವೆಗಾಗಿ ಬಂದಿದ್ದೇವೆ-ಎಂದು. ಇದು ಒಂದು ಸೋಗು ಮಾತ್ರ. ಭೈರಪ್ಪನವರು ಹೇಳಿದಂತೆ: 'ಚರ್ಚಿನ ತಂತ್ರವು ಒಂದೊಂದು ಸಂದರ್ಭದಲ್ಲಿ ಒಂದೊಂದು ತರನಾಗಿರುತ್ತದೆ. ಬೆದರಿಸುವಲ್ಲಿ ಬೆದರಿಕೆ, ಹಿಂಸಿಸುವಲ್ಲಿ ಹಿಂಸೆ, ನಯಗಾರಿಕೆಯಲ್ಲಿ ನಯ, ಆಮಿಷದಲ್ಲಿ ಪ್ರೂಲೈಕೆ ಅವರದು ವಿವಿಧ ಸಮಯಸಾಧಕ ಮಾರ್ಗಗಳು': ಈ ತಂತ್ರವನ್ನು ಕ್ರೈಸ್ತಮತದ ನಿಜಸ್ಥಾಪಕನಾದ ಸಂತ ಪಾಲನೇ ಈ ರೀತಿ ವಿವರಿಸಿದ್ದಾನೆ: 'ನಾನು ಎಲ್ಲರಿಗೂ ಹೇಗಿರಬೇಕೋ ಹಾಗೆಯೇ ಆಗಿರುತ್ತೇನೆ' ಎಂದು. (I am made all things to all men) ಪ್ರಚಾರಕರು ಹೇಳುವ 'ಸೇವೆ'ಯನ್ನು ಸಂತ ಪಾಲನ ಈ ತಂತ್ರದ ಹಿನ್ನೆಲೆಯಲ್ಲಿ ನೋಡಬೇಕು. ಇದು ನಿಷ್ಕಾಮಸೇವೆ ಖಂಡಿತ ಅಲ್ಲ, ಸಮಯಸಾಧಕ ತಂತ್ರದ ಒಂದು ರೂಪ ಅಷ್ಟೆ.

ಕ್ರೈಸ್ತಮತದ ಮೊದಲನೆಯ ಬಲಿಪಶುವೆಂದರೆ ಭವ್ಯವಾದ ಗ್ರೀಕ್ ಸಂಸ್ಕೃತಿ. ನಾಲ್ಕನೆಯ ಶತಮಾನದವರೆಗೂ ರೋಮ್ ಸಾಮ್ರಾಜ್ಯ ಭಾರತದಂತೆ ಎಲ್ಲಾ ಮತಗಳನ್ನೂ ಸಮಾನವಾಗಿ ನೋಡುತ್ತಿತ್ತು. ಎಲ್ಲರಿಗೂ ಮತ ಸ್ವಾತಂತ್ರ್ಯವಿತ್ತು. ಆದರೆ, ಕ್ರಿಸ್ತಶಕ 325ರಲ್ಲಿ ಕಾನ್ಸ್ಟಂಟೈನ್ ಚಕ್ರವರ್ತಿಯ ಔದಾರ್ಯದಿಂದ ಕ್ರೈಸ್ತಮತದ ಪ್ರಭಾವ ಹೆಚ್ಚಾಯಿತು. ಹಲವೇ ದಶಕಗಳಲ್ಲಿ (ಕ್ರಿಸ್ತಶಕ 380) ಥಿಯಡೊಸಿಯಸ್ ಚಕ್ರವರ್ತಿಯು ಕ್ರೈಸ್ತಮತ ಬಿಟ್ಟು ಇನ್ನೆಲ್ಲಾ ಮತಧರ್ಮಗಳನ್ನು ಕಾನೂನಿಗೆ ವಿರುದ್ಧವೆಂದು ಬಹಿಷ್ಕಾರ ಮಾಡಿದ. ಇದರಿಂದ ಉದಾರವಾದ, ಸರ್ವ ಮತ ಸಹಿಷ್ಣುವಾಗಿದ್ದ ರೋಮ್ ಸಾಮ್ರಾಜ್ಯ ಸಂಕುಚಿತ ಮತ್ತು ಮತಾಂಧ ಕ್ರೈಸ್ತ ಸಾಮ್ರಾಜ್ಯವಾಗಿ ಮಾರ್ಪಟ್ಟಿತು. ಇದರ ಪರಿಣಾಮವಾಗಿ ಗ್ರೀಸ್‌ನಲ್ಲಿ ಉಗಮವಾಗಿದ್ದ ಅತಿಭವ್ಯ ಸಂಸ್ಕೃತಿ ನಾಶವಾಯಿತು. ಅಲೆಕ್ಸಾಂಡ್ರಿಯದ

ಪ್ರಸಿದ್ಧ ಗ್ರಂಥಾಲಯ ಮತ್ತು ವಿಶ್ವವಿದ್ಯಾಲಯವನ್ನು 'ಸಂತ' ಸಿರಿಲ್ ಮತ್ತು ಅವನ ಅನುಯಾಯಿಗಳು ಸುಟ್ಟು ಭಸ್ಮ ಮಾಡಿದರು. ಅಲ್ಲದೆ, ಅದರ ಪ್ರಾಧ್ಯಾಪಕಳಾಗಿದ್ದ ಖ್ಯಾತ ಪಂಡಿತೆ ಹೈಪಾಟಿಯಾಳನ್ನು ಬೀದಿಗೆಳೆದು ಕೊಲೆ ಮಾಡಿದರು. ಈ ಮಹಾಕಾರ್ಯಕ್ಕಾಗಿಯೇ ಸಿರಿಲ್‌ನನ್ನು 'ಸಂತ' ಪಟ್ಟಕ್ಕೇರಿಸಿದ್ದು.

ಇದಾದ ಹಲವೇ ವರ್ಷಗಳಲ್ಲಿ ರೋಮ್ ಸಾಮ್ರಾಜ್ಯ ಪೂರ್ವ ಮತ್ತು ಪಶ್ಚಿಮ (ಎಂದರೆ ಯೂರೋಪ್ ಮತ್ತು ಏಷ್ಯಗಳ) ರಾಜ್ಯಗಳಾಗಿ ಇಬ್ಭಾಗವಾಯಿತು. ಕ್ರೈಸ್ತ ಸಾಮ್ರಾಜ್ಯವಾದ ಮೇಲೆ ಅದರ ಉದಾರ ಸಂಸ್ಕೃತಿ ಕ್ಷೀಣವಾಗುತ್ತ ಬಂದು, ಕತ್ತಲ ಯುಗ ಎಂದು ಕರೆಯಲಾಗಿರುವ ಸಹಸ್ರ ವರ್ಷಗಳ ಅಂಧಕಾರದಲ್ಲಿ ಯೂರೋಪನ್ನು ಮುಳುಗಿಸಿತು. ಭವ್ಯವಾದ ರೋಮ್ ಸಾಮ್ರಾಜ್ಯದ ಆಂತರಿಕ ಶಕ್ತಿಯೂ ದುರ್ಬಲವಾಗಿ, ಪಶ್ಚಿಮದಲ್ಲಿ ಹೂಣರ ಆಘಾತಕ್ಕೆ ಸಿಕ್ಕಿ ಹಲವಾರು ದಶಕಗಳಲ್ಲಿ ಕ್ರಿ.ಶ. 476 ವರ್ಷದಲ್ಲಿ ಮುಕ್ತಾಯವಾಯಿತು. ಪೂರ್ವದಲ್ಲಿಯೂ ಉಳಿದಿದ್ದ ರೋಮ್ ಸಾಮ್ರಾಜ್ಯ ಇಸ್ಲಾಮಿನ ದಾಳಿಯನ್ನೆದುರಿಸಲಾಗದೆ, ಮೊದಲು ಜೆರೂಸಲೆಮ್ ಮತ್ತು ನಂತರ ಕಾನ್ಸ್ಟಾನ್ಟಿನೋ-ಪಲ್ ಕಳೆದುಕೊಂಡು ಇರಾಕ್‌ನಿಂದ ಹಿಡಿದು ಈಜಿಪ್ಟ್ ಮತ್ತು ಟರ್ಕಿ ಮೊದಲಾದ ಪ್ರದೇಶಗಳನ್ನು ಇಸ್ಲಾಮಿಗೆ ಕಳೆದುಕೊಂಡಿತು. ಇವೆಲ್ಲವೂ ಮುಂಚೆ ರೋಮ್ ಸಾಮ್ರಾ-ಜ್ಯದ ಪ್ರಾಂತಗಳಾಗಿದ್ದವು. ಕ್ರೈಸ್ತಮತ ವಿಸ್ತಾರವಾದಂತೆ ಇವುಗಳು ತಮ್ಮ ಕ್ಷಾತ್ರಬಲವನ್ನು ಕಳೆದುಕೊಂಡು ಯೂರೋಪಿನಲ್ಲಿ ಹೂಣರ ಮತ್ತು ಏಷ್ಯಾದಲ್ಲಿ ಅರಬ್ ಮತ್ತು ತುರ್ಕರ ದಾಳಿಯನ್ನು ಎದುರಿಸಲು ಅಶಕ್ತವಾಗಿ ಛಿದ್ರವಾಗಿ ನಾಶವಾದುವು. ಇದನ್ನು ಖ್ಯಾತ ಇತಿಹಾಸಕಾರ ಎಡ್ವರ್ಡ್ ಗಿಬ್ಬನ್ ತನ್ನ ಉದ್ದಾಮ ಗ್ರಂಥ 'ರೋಮ್ ಸಾಮ್ರಾಜ್ಯದ ಇಳಿತ ಮತ್ತು ಕುಸಿತ' (Decline and Fall of the Roman Empire) ಇದರಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಈ ಕತ್ತಲಯುಗದಿಂದ ಹೊರಬರಲು ಯೂರೋಪಿನ ಜನರು ಮತ್ತು ರಾಜ್ಯಗಳು ಚರ್ಚಿನ ಅದರಲ್ಲೂ ಪೋಪುಗಳ ದಬ್ಬಾಳಿಕೆಯ ವಿರುದ್ಧ ಘೋರವಾಗಿ ಹೋರಾಡಬೇಕಾಯಿತು. ಚರ್ಚ್ ಹೇರಿಸಿದ್ದ ಅಜ್ಞಾನದ ಮುಸುಕಿನಿಂದ ಹೊರಬರಲು ಯೂರೊಪಿನ ಚಿಂತಕರಿಗೆ ಕ್ರಿಸ್ತಪೂರ್ವದ ಭವ್ಯವಾದ ಗ್ರೀಕ್ ಸಂಸ್ಕೃತಿಯೇ ಸ್ಫೂರ್ತಿಯಾಯಿತು. ಇದಕ್ಕೆ ಯೂರೋಪಿನ ಪುನರುದ್ಧಾರ (European Renaissance) ಎನ್ನುತ್ತಾರೆ. ಆದರೆ ಚರ್ಚ್ (ಎಂದರೆ ವ್ಯಾಟಿಕನ್ ಸಂಸ್ಥೆ) ತನ್ನ ಹಿಡಿತವನ್ನು ಸುಲಭಕ್ಕೆ ಬಿಡಲು ಸಿದ್ಧವಿರಲಿಲ್ಲ. ಯೂರೊಪಿನಲ್ಲಿ ಅದರ ಪ್ರಭಾವ ಕಡಿಮೆಯಾದರೂ, ಸ್ಪೈನ್ ಮತ್ತು ಪೋರ್ಚುಗಲ್ ದೇಶಗಳ ಮತಾಂಧ ರಾಜರುಗಳ ಜತೆ ಸೇರಿ ಅಮೆರಿಕ ಮತ್ತು ಏಷ್ಯಾ ಖಂಡಗಳಲ್ಲಿ (ಭಾರತವನ್ನೂ ಸೇರಿ) ತನ್ನ ಮತವಿಸ್ತಾರ ಮಾಡಿಕೊಂಡಿತು. ಈಗಲೂ ಸಹ ಯುರೋಪಿಗಿಂತ ಅಮೆರಿಕ ಮತ್ತು ಏಷ್ಯಾ ಖಂಡಗಳಲ್ಲೇ (ಭಾರತವನ್ನೂ ಸೇರಿ) ಚರ್ಚಿನ ಪ್ರಭಾವ ಹೆಚ್ಚಾಗಿದೆ. ಪೋಪಿಗೆ ಭಾರತ, ಫಿಲಿಪ್ಪೀನ್ಸ್ ಮತ್ತು ದಕ್ಷಿಣ ಅಮೆರಿಕಗಳಲ್ಲಿರುವ ಗೌರವ ಯೂರೋಪಿನಲ್ಲಿಲ್ಲ.

ಕ್ರೈಸ್ತಮತ ಅಧ್ಯಾತ್ಮಕ್ಕಿಂತ ಸಾಮ್ರಾಜ್ಯಶಾಹಿ ಸಂಸ್ಥೆಯೆಂದು ನೋಡಲು ಅದರ ಸ್ಥಾಪಕ ಕೊಲಂಬಸನೇ ಸಾಕ್ಷಿ. ಅವನ ಮತ್ತು ಕ್ರೈಸ್ತ ಸೈನಿಕರಿಂದ ಅಮೆರಿಕದ ಮೂಲ ನಿವಾಸಿಗಳ ಮಾರಣ ಹೋಮವೇ ನಡೆಯಿತು. ಇದರಲ್ಲಿ, ದಕ್ಷಿಣ ಮತ್ತು ಮಧ್ಯ ಅಮೆರಿಕಗಳಲ್ಲಿ ಸುಮಾರು ನೂರಕ್ಕೆ ಎಂಬತ್ತೈದರಷ್ಟು ಜನರ ಕೊಲೆಯಾಯಿತೆಂದು ಇತಿಹಾಸಕಾರರು ಹೇಳುತ್ತಾರೆ. ಇದರಿಂದ ಮೆಕ್ಸಿಕೋದಿಂದ ಚಿಲಿ ದೇಶದವರೆಗೆ ಇಂಕಾ, ಮಾಯಾ, ಆಸ್ಟೆಕ್ ಮೊದಲಾದ ಭವ್ಯ ಸಂಸ್ಕೃತಿಗಳು ಸಂಪೂರ್ಣ ನಾಶವಾದುವು. ಇದು ಹಿಟ್ಲರ್, ಸ್ಟಾಲಿನ್, ಮಾವೊಗಳು ಮಾಡಿದ್ದನ್ನು ಮೀರಿಸುವ ನರಹೋಮ. ಇದರ ಬಗ್ಗೆ, ಕೊಲಂಬಸ್ ಸಂಗಡಿಗನಾದ ಬರ್ತೊಲೋಮೆ ದೆ ಲಾಸ್ ಕಾಸಾಸ್ (Bartholome de Las Casas) ಎಂಬ ಕ್ರೈಸ್ತ ಪಾದ್ರಿ ಕೂಲಂಕಶವಾಗಿ ಬರೆದಿದ್ದಾನೆ. ಅವನ ಪ್ರಕಾರ, 'ಇಂಕಾ ರಾಜ್ಯದಲ್ಲಿ, ಕಳೆದ ಹತ್ತು ವರ್ಷಗಳಲ್ಲಿ ನಲವತ್ತು ಲಕ್ಷಕ್ಕೂ ಹೆಚ್ಚು ಜನರ ಕೊಲೆಯಾಗಿದೆ. ಗ್ವಾತೆಮಾಲಾದಲ್ಲಿ ಕೊಲೆಯಾದವರ ಸಂಖ್ಯೆ ಐವತ್ತು ಲಕ್ಷವನ್ನು ಮೀರಿದೆ. ಕ್ಯೂಬಾದಲ್ಲಿ ಈಗ ಜನರೇ ಇಲ್ಲ, ಸಂಪೂರ್ಣ ನಿರ್ಜನವಾಗಿದೆ, ಈ ಕ್ರೈಸ್ತ ಕೊಲೆಗಾರರಿಂದ' (ಇದೆಲ್ಲವನ್ನೂ ಭಾರತದ ಪಠ್ಯಪುಸ್ತಕಗಳಲ್ಲಿ ಏಕೆ ಹೇಳುವುದಿಲ್ಲ? ಯೂರೋಪ್-ಅಮೆರಿಕಗಳಲ್ಲಿ ಇದನ್ನು ಮುಚ್ಚಿಹಾಕಿಲ್ಲ.)

ಸ್ಪೈನ್ ಮತ್ತು ಪೋರ್ಚುಗಲ್ ಇವುಗಳ 'ಕ್ಯಾಥೊಲಿಕ್' ಸಾಮ್ರಾಜ್ಯಗಳ ವಿಸ್ತಾರದಲ್ಲಿ ಕ್ರೈಸ್ತಮತ ಪ್ರಚಾರಕರ ಪಾತ್ರ ಮಹತ್ತರವಾದದ್ದು. ಇದನ್ನು ಕೊಲಂಬಸನೇ ತನ್ನ ಪ್ರಭುಗಳಾದ ರಾಜ ಫರ್ಡಿನಾಂಡ್ ಮತ್ತು ರಾಣಿ ಇಸಬೆಲ್ಲಾ ಇವರಿಗೆ ಹೀಗೆ ಹೇಳಿದ; 'ನನ್ನ ಕಾರ್ಯದಿಂದ ತಾವು ಮಹಾಪ್ರಭುಗಳಿಗೆ ಇನ್ನೊಂದು ಸಾಮ್ರಾಜ್ಯವೆ ದೊರೆತಿದೆ. ಇದರಿಂದ ನಮ್ಮ ಧರ್ಮವೂ ಬೆಳೆಯುತ್ತದೆ ಮತ್ತು ಅಪಾರವಾದ ಧನ-ಧಾನ್ಯ ಸಂಪತ್ತನ್ನೂ ಬೆಳೆಯಲು ಸಾಧ್ಯವಾಗುತ್ತದೆ'? ಅಮೆರಿಕದ ಮೂಲನಿವಾಸಿಗಳ ಮಾರಣಹೋಮಕ್ಕೆ ಕೊಲಂಬಸ್ ಮತ್ತು ಅವನ ಕ್ರೈಸ್ತ ಅನುಯಾಯಿಗಳ ಮಿತಿಯಿಲ್ಲದ ಧನಲೋಭವೇ ಕಾರಣವೆಂದು ಲಾಸ್ ಕಾಸಾಸ್ ಬರೆದಿದ್ದಾನೆ. (ಭಾರತದ ಆದಿವಾಸಿಗಳ ಬಗ್ಗೆ ಕಣ್ಣೀರು ಸುರಿಸುವ ಕ್ರೈಸ್ತ ಪ್ರಚಾರಕರು ಈ ಇತಿಹಾಸವನ್ನೇಕೆ ಹೇಳುವುದಿಲ್ಲ?)

ಅಮೆರಿಕದಲ್ಲಿ ಕೊಲಂಬಸ್ ಮಾಡಿದ ಕೆಲಸವನ್ನೇ ಏಷ್ಯದಲ್ಲಿ ವಾಸ್ಕೊ ಡಿ ಗಾಮಾ ಮಾಡಿದ್ದು. ಅವನು ಬಂದಿದ್ದು ವ್ಯಾಪಾರಕ್ಕೆ, ಸ್ಥಾಪಿಸಿದ್ದು ಕ್ರೈಸ್ತಮತ ಸಾಮ್ರಾಜ್ಯ. ಇದರ ಕ್ರೌರ್ಯ ಅಮೆರಿಕದಲ್ಲಿ ನಡೆದ ಕ್ರೌರ್ಯಕ್ಕಿಂತ ಕಡಿಮೆಯೇನಿರಲಿಲ್ಲ. ಆದರೆ ವಿಜಯನಗರ ಮೊದಲಾದ ಬಲವಾದ ರಾಜ್ಯಗಳಿದ್ದ ಕಾರಣದಿಂದ ಅಷ್ಟು ಭಾರೀ ಪ್ರಮಾಣದಲ್ಲಿ ಕೊಲೆ ಮಾಡಲು ಸಾಧ್ಯವಾಗಲಿಲ್ಲ ಇಲ್ಲಿ. ಆದರೆ ಪೋರ್ಚುಗೀಸರ ಮತಾಂಧತೆಯೇನೂ ಕಡಿಮೆಯಾಗಲಿಲ್ಲ. 'ಸಂತ ಝೇವಿಯರನು 'ಇನ್ಕ್ವಿಸಿಷನ್' ವಿಚಾರಣೆಯನ್ನು ಸ್ಥಾಪಿಸಿ, ಸಾವಿರಾರು ಮುಗ್ಧ ಜನರಿಗೆ ದೇವರ ಹೆಸರಿನಲ್ಲಿ ಚಿತ್ರಹಿಂಸೆ ಕೊಡಿಸಿ ಕೊಲ್ಲಿಸಿದ. ಇದು ಯೂರೊಪಿನಲ್ಲಿ ಗೋವಾದ ಇನ್ಕ್ವಿಸಿಷನ್ ಎಂದು ಕುಖ್ಯಾತವಾಗಿದೆ, ಆದರೆ ಭಾರತದ ಇತಿಹಾಸದಲ್ಲಿ ಇದರ ಉಲ್ಲೇಖ ಬಹುಮಟ್ಟಿಗೆ ಇಲ್ಲವೇ ಇಲ್ಲ.

ಕ್ರೈಸ್ತಮತ ಹರಡಿದ ಪ್ರದೇಶಗಳಲ್ಲಿ ಭವ್ಯ ಸಂಸ್ಕೃತಿಗಳು ನಾಶವಾಗಿವೆ. ಇದು ಅಮೆರಿಕದಲ್ಲಂತೂ ಸ್ಪಷ್ಟ. ಇದನ್ನು ಪೂರ್ವ ಏಷ್ಯದಲ್ಲಿಯೂ ನೋಡಬಹುದು. ಥೈಲಾಂಡ್, ಇಂಡೋನೇಷಿಯ, ಬಾಲಿ ಮತ್ತು ಕಾಂಬೋಡಿಯಾ ದೇಶಗಳಲ್ಲಿ ಅದ್ಭುತವಾದ ಸಂಸ್ಕೃತಿಗಳಿವೆ, ಭಾರತದ ಸ್ಫೂರ್ತಿಯಿಂದ. ಆದರೆ ಫಿಲಿಪ್ಪೀನ್ಸ್‌ನಲ್ಲಿ ಮಾತ್ರ ತನ್ನದೇ ಎಂದು ಹೇಳಿಕೊಳ್ಳುವ ಸಂಸ್ಕೃತಿ ಏನೂ ಉಳಿದಿಲ್ಲ. ಇದಕ್ಕೆ ಕಾರಣ 400 ವರ್ಷಗಳ ಸ್ಪೈನಿನ 'ಕ್ಯಾಥೊಲಿಕ್' ಸಾಮ್ರಾಜ್ಯದ ದಬ್ಬಾಳಿಕೆ. ಇದರಿಂದ ಅಮೆರಿಕದಲ್ಲಿ ಆದಂತೆ ಮೂಲ ಸಂಸ್ಕೃತಿ ಸಂಪೂರ್ಣ ನಾಶವಾಗಿದೆ. ಇದನ್ನು, ನಾವು ಪೋರ್ಚುಗಲ್ಲಿನ 'ಕ್ಯಾಥೊಲಿಕ್' ಸಾಮ್ರಾಜ್ಯಕ್ಕೆ ಸೇರಿದ ಗೋವಾದಲ್ಲಿಯೂ ನೋಡಬಹುದು. ಸಣ್ಣ ಊರುಗಳಾದ ಮೈಸೂರು, ತಂಜಾವೂರು, ತಿರುವನಂತಪುರ ಮೊದಲಾದವುಗಳು ಸಂಗೀತ, ನೃತ್ಯ ಮತ್ತಿತರ ಕಲೆಗಳಿಗೆ ಪ್ರಸಿದ್ಧವಾಗಿವೆ. ಆದರೆ ಗೋವಾದಲ್ಲಿ ಪೋರ್ಚುಗೀಸರ 400 ವರ್ಷಗಳ ಆಳ್ವಿಕೆಯಲ್ಲಿ ಏನು ಕಲೆಯ ಅಭಿವೃದ್ಧಿಯಾಯಿತು? ಈಗಲೂ ಗೋವಾದ ಹೆಸರು ಹೆಚ್ಚಾಗಿ ಕೇಳಿಬರುವುದು ವ್ಯಭಿಚಾರ, ಅತ್ಯಾಚಾರ ಇಂತಹ ಅಕಾರ್ಯಗಳಿಂದಾಗಿಯೇ ಹೊರತು ಯಾವ ಸುಕಾರ್ಯಗಳಿಂದಲ್ಲ.

ಕ್ರೈಸ್ತನಾಯಕರು ಪ್ರಚಾರ, ತಂತ್ರ, ಕುತಂತ್ರ ಮತ್ತು ಷಡ್ಯಂತ್ರಗಳಲ್ಲಿ ನಿಸ್ಸೀಮರೇ ಆಗಿದ್ದರೂ, ಅವರಲ್ಲಿ ಕ್ಷಾತ್ರಗುಣದ ಅಭಾವವಿದೆ. ಅದಕ್ಕೆ ಪೂರ್ವ ರೋಮ್ ಸಾಮ್ರಾಜ್ಯದ ಕುಸಿತವೇ ಉದಾಹರಣೆ. ಇಟಲೀ ದೇಶದಲ್ಲಿ ಕ್ರೈಸ್ತಮತ ಸ್ಥಾಪಿತವಾದ ಮೇಲೆ ಜೂಲಿಯಸ್ ಸೀಸರನಂತಹ ಯಾವ ವೀರನೂ ಹುಟ್ಟಿಲ್ಲ. (ಅವನು ಕ್ರೈಸ್ತನಲ್ಲ.) ಈಗ ಯೂರೋಪ್ ಇಸ್ಲಾಮಿನ ಆಕ್ರಮಣದ ಭಯದಿಂದ ಜರ್ಜರಿತವಾಗಿದೆ. ಈ ಭೀತಿ ಇಟಲಿಯಲ್ಲಿ ಹೆಚ್ಚು ತೀವ್ರವಾಗಿದೆ. ಹಿಂದೆ ಹೇಗೆ ಪವಿತ್ರ ಕ್ಷೇತ್ರಗಳಾದ ಜೆರೂಸಲೆಂ ಮತ್ತು ಕಾನ್ಸ್ಟಾಂಟಿನೋಪಲ್ ಇಸ್ಲಾಮಿನ ವಶವಾದುವೋ ಹಾಗೆಯೇ ರೋಮಿನ ಸರದಿಯೂ ಮುಂದೆ ಬರಬಹುದು ಎನ್ನುವ ಭೀತಿ ಕ್ರೈಸ್ತ ಸಂಸ್ಥೆಗಳನ್ನು, ಅದರಲ್ಲಿಯೂ ವ್ಯಾಟಿಕನ್ನನ್ನು ಕಾಡುತ್ತಿದೆ. ಅದಕ್ಕಾಗಿಯೇ ಅವರ ಮತಾಂತರ ಭಾರತದಲ್ಲಿ ತೀವ್ರಗತಿಯಿಂದ ನಡೆಯುತ್ತಿರುವುದು. ರೋಮ್ ಅನ್ನೂ ಸಹ ಮುಂದೆ ಕಳೆದುಕೊಂಡರೆ ಭಾರತದಲ್ಲಿ ಆಶ್ರಯ ಪಡೆಯೋಣ ಎಂದು.

ಈ ರೀತಿಯ ಮತಾಂತರದ ಆಕ್ರಮಣ ಪ್ರಾಚೀನ ಇತಿಹಾಸಕ್ಕೆ ಮಾತ್ರ ಸೀಮಿತವಾದದ್ದಲ್ಲ. ಈಗ ಭಾರತದಲ್ಲಿ ಆಗುತ್ತಿರುವ ಸಂಘರ್ಷ ಎರಡು ದಶಕಗಳಿಂದಲೂ ದಕ್ಷಿಣ ಕೊರಿಯಾದಲ್ಲಿ ನಡೆದಿದೆ. ಬೌದ್ಧ ಪ್ರಧಾನವಾದ ದೇಶದಲ್ಲಿ ಈಗ ಸರಕಾರ ಬಹುಮಟ್ಟಿಗೆ ಕ್ರೈಸ್ತರ ಕೈಯಲ್ಲಿಯೇ ಇದೆ. ಕೊರಿಯಾದ ಮಂತ್ರಿಮಂಡಲದ 16 ಜನ ಸಚಿವರಲ್ಲಿ 13 ಜನ ಕ್ರೈಸ್ತರು, ಒಬ್ಬ ಬೌದ್ಧ ಮತ್ತು ಇನ್ನಿಬ್ಬರು ಯಾವ ಪಂಥಕ್ಕೂ ಸೇರದವರು. ರಾಷ್ಟ್ರಪತಿ ಲೀ ಮ್ಯುಂಗ್ ಬಾಕ್ ಸಹ ಕ್ರೈಸ್ತರೇ. ಕೊರಿಯಾದ ಪ್ರಚಾರಕರು ರಾಜಾರೋಷವಾಗಿ ಬೌದ್ಧ ಧರ್ಮವನ್ನು ಮುಳುಗುತ್ತಿರುವ ಮತ ಎಂದು ಹೇಳುತ್ತಿದ್ದಾರೆ. ಸೋನಿಯಾ ಗಾಂಧಿಯವರ ಪರಿವಾರಕ್ಕೂ ಮತ್ತು ರಾಷ್ಟ್ರಪತಿ ಲೀ ಬಾಕ್ ಅವರ ಸಂಪುಟಕ್ಕೂ ಅಂತಹ

ವ್ಯತ್ಯಾಸವೇನೂ ಕಾಣುವುದಿಲ್ಲ. ಅವಕಾಶ ಸಿಕ್ಕಿದರೆ ಕ್ರೈಸ್ತ ನಾಯಕರು ಭಾರತವನ್ನೂ ಸಹ ಇನ್ನೊಂದು ಕೊರಿಯಾವನ್ನಾಗಿ ಮಾಡುವುದರಲ್ಲಿ ಸಂಶಯವಿಲ್ಲ. ಇದನ್ನು ಅವರ ಎಂದರೆ, ಕ್ರೈಸ್ತ ಪ್ರಚಾರಕರ ಹೇಳಿಕೆಗಳೂ ಮತ್ತು ದಾಖಲೆಗಳೂ ಸ್ಪಷ್ಟ ಮಾಡುತ್ತವೆ, ಪೋಪರಿಂದ ಹಿಡಿದು ಬೀದಿ ಮೂಲೆಯ ಪಾದ್ರಿಯವರೆಗೆ. ಎಂದರೆ ಪ್ರಾಚೀನ ಗ್ರೀಸ್‌ನಿಂದ ಹಿಡಿದು ಆಧುನಿಕ ಕೊರಿಯಾದವರೆಗೂ ನಮಗೆ ಇತಿಹಾಸದ ಪಾಠ ಹೇಳುವುದು ಒಂದೇ- ಕ್ರೈಸ್ತ ಮತಾಂತರದ ಗುರಿ ರಾಜ್ಯ ವಿಸ್ತಾರ. ಈಗ ಅದು ಭಾರತವನ್ನು ತನ್ನ ಸಮರಕ್ಷೇತ್ರ ವನ್ನಾಗಿ ನೋಡುತ್ತಿದೆ. ಇದನ್ನು ತಡೆಯದಿದ್ದರೆ, ಭಾರತದ ಸ್ವಾತಂತ್ರ್ಯ ಮತ್ತು ಭಾರತೀಯ ಸಂಸ್ಕೃತಿ ಇವೆರಡೂ ನಾಶವಾಗುವುದು ಖಂಡಿತ. ಈ ಇತಿಹಾಸದ ಪಾಠವನ್ನು ಎಲ್ಲರೂ ಮನದಟ್ಟು ಮಾಡಿಕೊಳ್ಳಬೇಕು.

ಇದು ಊಹೆ ಮಾತ್ರವಲ್ಲ, ಕ್ರೈಸ್ತ ಸಂಸ್ಥೆಗಳ ದಾಖಲೆಗಳೇ ಹೀಗೆ ಹೇಳುತ್ತವೆ. ಈ ಬಗ್ಗೆ ಖ್ಯಾತ ಚಿಂತಕ ದಿವಂಗತ ರಾಮಸ್ವರೂಪರು ಫಾದರ್ ಮೊನಾಖನಿನ್ ಎನ್ನುವ ಪಾದ್ರಿಯನ್ನು ಉಲ್ಲೇಖಿಸಿದ್ದಾರೆ: 'ಭಾರತೀಯರು ಅಧ್ಯಾತ್ಮಪ್ರಿಯರು. ಪರಮಾತ್ಮ ನೊಂದಿಗೆ ಐಕ್ಯವಾಗುವುದು ಅವರ (ಹಿಂದೂಗಳ) ಪರಮ ಗುರಿ. ಆದರೆ ಭಾರತೀಯ ಅಧ್ಯಾತ್ಮ ಚಿಂತನೆಯು ಅನೇಕ ಪ್ರಮಾದಗಳನ್ನು ಸೇರಿಸಿಕೊಂಡು ಕಳಂಕಪೂರಿತವಾಗಿದೆ ಮತ್ತು ಪ್ರೌಢತೆ ಮತ್ತು ಸಮತೋಲನಗಳನ್ನು ಪಡೆದಿಲ್ಲ. ಹಿಂದೆ ಗ್ರೀಕರ ಚಿಂತನೆಯೂ ಇತ್ತು. ಆದರೆ ಅದು ಏಸುವಿನ ಸಂದೇಶವನ್ನು ಸ್ವೀಕರಿಸಿ, ತನ್ನ ಪ್ರಾಚೀನ ಪ್ರಮಾದಗಳನ್ನು ಕಿತ್ತೆಸೆದು ಶಾಂತಿಯನ್ನು ಪಡೆಯಿತು. ವಿಶ್ವಕ್ಕೆ ಭಾರತ ತೋರಿಸಬೇಕಾದ ಪಾಠವೂ ಪ್ರಾಚೀನ ಗ್ರೀಸ್ ತೋರಿಸಿದ ಪಾಠವೇ ಅಲ್ಲವೇ? ಆದಕಾರಣ ಭಾರತದ ಪ್ರಾಚೀನ ಸಂಸ್ಕೃತಿಯನ್ನು ಕ್ರಿಸ್ತೀಕರಿಸುವುದು ಗ್ರೀಸನ್ನು ಕ್ರಿಸ್ತೀಕರಿಸಿದ್ದಷ್ಟೇ ಮುಖ್ಯವಾದ ಕಾರ್ಯ. ಇದು ಈಗ ನಮ್ಮ ಮುಂದಿರುವ ಅತಿ ಮುಖ್ಯ ಕಾರ್ಯ.'

ಈ ಸಮರದಲ್ಲಿ ಮತಾಂತರ ಕ್ರೈಸ್ತರ ಮುಖ್ಯ ಆಯುಧ. ಕ್ರೈಸ್ತಮತ ವಿಸ್ತಾರದಲ್ಲಿ ಮತಾಂತರವೆಂದರೆ ಇಸ್ಲಾಮಿನಲ್ಲಿ ಜಿಹಾದ್ ಇದ್ದಂತೆ. ಎರಡೂ ದೇವರ ಹೆಸರಿನಲ್ಲಿ ಮಾಡುವ ಆಕ್ರಮಣ. ಏಸುವಿನ ಹೆಸರಿನಲ್ಲಿ ಕ್ರೈಸ್ತ ಪಾದ್ರಿಗಳು ಮತ್ತು ಅವರ ಪ್ರತಿನಿಧಿಗಳು ಎಲ್ಲ ಕಡೆಯಲ್ಲೂ ಪ್ರಾಚೀನ ಸಂಸ್ಕೃತಿಗಳನ್ನು ನಾಶ ಮಾಡಿದ್ದಾರೆ. ಭಾರತದಲ್ಲಿಯೂ ಈಗ ನಡೆಯುತ್ತಿರುವುದು ಈ ಸಮರವೇ. ಸಾವಿರ ವರ್ಷಗಳಿಗೂ ಹಿಂದೆ ಹೇಗೆ ಭವ್ಯವಾದ ಗ್ರೀಕ್ ಸಂಸ್ಕೃತಿಯನ್ನು ನಾಶ ಮಾಡಿದರೋ ಅದೇ ರೀತಿ ಭಾರತದ ಸಂಸ್ಕೃತಿಯನ್ನೂ ನಿರ್ಮೂಲನ ಮಾಡಿ ಭಾರತವನ್ನು ಕ್ರೈಸ್ತದೇಶವಾಗಿ ಮಾಡುವುದೇ ಪೋಪ್ ಮೊದಲಾದ ಕ್ರೈಸ್ತ ನಾಯಕರ ಗುರಿ.

ಇದನ್ನು ನಾವೆಲ್ಲರೂ ಸ್ಪಷ್ಟವಾಗಿ ತಿಳಿಯಬೇಕು. ಇದಕ್ಕೆ ವಿಪುಲವಾದ ಆಧಾರ ದೊರೆಯುತ್ತದೆ. ಇದನ್ನು ಲೇಖಕರು ಸಂಶೋಧಿಸಿ ಬರೆದಿದ್ದಾರೆ (ನಾನು ಸಹ). ಇದರಲ್ಲಿ ಸ್ವಲ್ಪ ಭಾಗವನ್ನು ಮೇಲೆ ಕೊಟ್ಟಿದ್ದೇನೆ. ಭಾರತದ ಕ್ರೈಸ್ತ ನಾಯಕರು ಮತ್ತು ಮತಪ್ರಚಾರ ಕರು ಭಾರತ ಸ್ವತಂತ್ರ ರಾಷ್ಟ್ರ ಎಂದು ಒಪ್ಪಿಕೊಳ್ಳಲು ಸಿದ್ಧರಿಲ್ಲ. ಅವರ ದೃಷ್ಟಿಯಲ್ಲಿ

ಭಾರತ ಮತ್ತು ಭಾರತೀಯರು ಪಾಶ್ಚಾತ್ಯ ದೇಶಗಳ ಅಧೀನರಂತೆ ನಡೆದುಕೊಳ್ಳಬೇಕು. ಇದಕ್ಕಾಗಿ ಅವರು ಮತಾಂತರದ ಮೂಲಕ ಶತಗತ ಪ್ರಯತ್ನ ಮಾಡುತ್ತಿದ್ದಾರೆ, ಮುಂದೆಯೂ ಮಾಡುತ್ತಾರೆ.

ಕ್ರೈಸ್ತ ನಾಯಕರ ಈ ಮನೋವೃತ್ತಿಯನ್ನು ಅರ್ಥಗತ ಮಾಡಿಕೊಂಡರೆ ಅವರ ಧೋರಣೆಗಳು ಮತ್ತು ನಡತೆ ಇವುಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ. ಸೆಕ್ಯುಲರಿಸ್ಟರೂ ಸಹ ಭಾರತದ ಸ್ವಂತ ರಾಷ್ಟ್ರೀಯತೆಯ ಅಸ್ತಿತ್ವವನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲ. ಅವರಿಗೆ ಭಾರತಮೂಲದ ಎಲ್ಲ ಚಿಂತನೆಗಳೂ ಮತ್ತು ಸಂಪ್ರದಾಯಗಳೂ ಅಸಹನೀಯ. ಮಹರ್ಷಿ ಅರವಿಂದರು ತಮ್ಮ ಪ್ರಸಿದ್ಧವಾದ ಉತ್ತರಪಾರ ಭಾಷಣದಲ್ಲಿ 'ಸನಾತನ ಧರ್ಮವೇ ನಮ್ಮ ರಾಷ್ಟ್ರೀಯತೆ' ಎನ್ನುವ ಘೋಷಣೆಯನ್ನು ಅವರು ಎಂದಿಗೂ ಒಪ್ಪುವುದಿಲ್ಲ. ಈ ಪ್ರಗತಿಪರರೆಂದು ಹೇಳಿಕೊಳ್ಳುವ ಬುದ್ಧಿಜೀವಿಗಳ ದೃಷ್ಟಿಯಲ್ಲಿ, ರಾಷ್ಟ್ರೀಯತೆ ಎನ್ನುವ ಧೋರಣೆಯೇ ಸರಿಯಲ್ಲ, ಇದು ಸಂಕುಚಿತ ಪ್ರಗತಿವಿರೋಧ ಚಿಂತನೆ.

ಇದು ಕಮ್ಯುನಿಸ್ಟರ ದೃಷ್ಟಿಕೋಣ ಸಹ. ಕಮ್ಯುನಿಸ್ಟ್-ಸೆಕ್ಯುಲರಿಸ್ಟರು, ಇಸ್ಲಾಮಿಗಳು ಮತ್ತು ಕ್ರೈಸ್ತರು ಇವರೆಲ್ಲರೂ ಹಿಂದೂಧರ್ಮ ವಿರೋಧಿಗಳಾಗಿ ಒಂದಾಗಿರುವುದಕ್ಕೆ ಇದೇ ಕಾರಣ. ರಾಷ್ಟ್ರೀಯತೆಯನ್ನು ನಾಶ ಮಾಡಿದ ಹೊರತು ಇವರ, ಎಂದರೆ ಇಸ್ಲಾಮೀ, ಕ್ರೈಸ್ತ ಮತ್ತು ಕಮ್ಯೂನಿಸ್ಟ್-ಸೆಕ್ಯುಲರಿಸ್ಟರ ಕನಸಿನ ವಿಶ್ವಸಾಮ್ರಾಜ್ಯ ಕನಸಾಗಿಯೇ ಉಳಿಯ ಬೇಕಾಗುತ್ತದೆ. ಇದನ್ನು ಅರ್ಥಗತ ಮಾಡಿಕೊಂಡರೆ, ಈ ಪ್ರಗತಿಪರರೆಂದು ಹೇಳಿಕೊಳ್ಳುವ ವರು ಮತಾಂಧ ಕ್ರೈಸ್ತ ಮತ್ತು ಇಸ್ಲಾಮಿ ಶಕ್ತಿಗಳ ಸಹಯೋಗಿಗಳಾಗಿರಲು ಮೂಲಭೂತ ಕಾರಣ ಏನೆನ್ನುವುದು ಗೊತ್ತಾಗುತ್ತದೆ. ರಾಷ್ಟ್ರೀಯತೆಯ ಅಸ್ತಿತ್ವವೇ ಇವರ ಶತ್ರು.

ಒಟ್ಟನಲ್ಲಿ ಹೇಳಬೇಕಾದರೆ ಭೈರಪ್ಪನವರು ಗಂಭೀರವಾದ ವಿಷಯಗಳನ್ನು ಕೂಲಂಕಶವಾಗಿ, ಆಧಾರಸಹಿತವಾಗಿ ನಮ್ಮೆಲ್ಲರ ಮುಂದಿಟ್ಟಿದ್ದರೂ ಪ್ರತಿಕ್ರಿಯೆಗಳಲ್ಲಿ ಹೆಚ್ಚಾಗಿ ಪೂರ್ವಾಗ್ರಹಪ್ರೇರಿತ ಅಭಿಪ್ರಾಯಗಳು ಮತ್ತು ವೈಯಕ್ತಿಕ ನಿಲುವುಗಳು ಕಂಡು ಬರುತ್ತವೆಯೇ ಹೊರತು ಹೊಸ ವಿಷಯವಾಗಲೀ ಚಿಂತನೆಯಾಗಲೀ ಕಂಡು ಬರುವುದಿಲ್ಲ. ಇತರರು ಹಾಗಿರಲಿ, ಕೆಲವು ಹಿರಿಯ ಲೇಖಕರೂ ಸಹಿತ ಈ ಗಂಭೀರವಾದ ವಿಷಯವನ್ನು ಸರಿಯಾಗಿ ವಿಮರ್ಶಿಸದೇ ಕೇವಲ ತಮ್ಮ ಅಭಿಪ್ರಾಯಗಳನ್ನು ಮಂಡಿಸಿರುವುದು ನಿರಾಶಾದಾಯಕವೆಂದೇ ಹೇಳಬೇಕಾಗಿದೆ. ಈ ಹಿರಿಯರು, ಈ ಸಂದರ್ಭವನ್ನು ಉಪಯೋಗಿಸಿಕೊಂಡು ಯುವ ಪೀಳಿಗೆಯ ಚಿಂತಕರಿಗೆ ದಾರಿ ತೋರಿಸಬೇಕು. ಆದರೆ ಹಾಗಾಗದಿದ್ದರೋ. ಅದು ನಮ್ಮ ದುರದೃಷ್ಟ.



# ಮತಾಂತರ ಹಿನ್ನೆಲೆ ಮತ್ತು ಶ್ರೇಷ್ಠರ ಧೋರಣೆ

-ಡಾ|| ಎಂ. ಚಿದಾನಂದಮೂರ್ತಿ

---

ಸಮುದ್ರದ ಮೂಲಕ ಪೋರ್ಚುಗಲ್‌ನಿಂದ ವಾಸ್ಕೋಡಗಾಮನು 1498ರಲ್ಲಿ ಕಲ್ಲಿಕೋಟೆ ತಲುಪಿ, ಪೋರ್ಚುಗೀಸರ ವ್ಯಾಪಾರದ ಆರಂಭವಾಗಿ, ಗೋವೆ ಅವರ ವಶವಾಯಿತು. ಕ್ರಿ.ಶ. 1600ರಲ್ಲಿ ಸ್ಥಾಪಿತವಾದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ರಾಣಿ ಎಲಿಜಬೆತ್‌ರಿಂದ ಅಧಿಕೃತ ಆದೇಶ ಪಡೆದು ಭಾರತದಲ್ಲಿ ಮುಂಬೈ, ಕೋಲ್ಕತಾ, ಚೆನ್ನೈ ಬಂದರುಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಆರಂಭಿಸಿತು. ಮುಂದೆ ಫ್ರೆಂಚರು ವ್ಯಾಪಾರದ ನಿಮಿತ್ತ ಬಂದು ಪಾಂಡಿಚೇರಿಯನ್ನು ಕೇಂದ್ರವಾಗಿಸಿಕೊಂಡರು. ಔರಂಗಜೇಬನ ಸಾವಿನ ಬಳಿಕ 1700ರಿಂದ ಈಸ್ಟ್ ಇಂಡಿಯಾ ಕಂಪನಿ ಒಂದು ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆದು 1757ರಲ್ಲಿ ರಾಬರ್ಟ್ ಕ್ಲೈವ್ ಭಾರತೀಯರನ್ನು ಪ್ಲಾಸಿ ಕದನದಲ್ಲಿ ಬ್ರಿಟಿಷ್ ಸೈನ್ಯದ ಸಹಾಯದಿಂದ ಸೋಲಿಸಿದ್ದು ಆ ಕಂಪನಿ ಪ್ರಬಲ ಆಡಳಿತ ಶಕ್ತಿಯಾಗಿ ಬೆಳೆಯಲು ನಿಮಿತ್ತವಾಯಿತು. ಪೋರ್ಚುಗೀಸರು ಗೋವಾದಲ್ಲಿ ಹಿಂದೂಗಳನ್ನು ಬೆದರಿಸಿ, ಅವರ ದೇವಾಲಯಗಳನ್ನು ಸುಟ್ಟು, ಅವರ ಚರ್ಮ ಸುಲಿದು ಬೆಂಕಿ ಉರಿಯ ಮಧ್ಯೆ ನಿಲ್ಲಿಸಿ ಸುಡುವುದಾಗಿ ಬೆದರಿಕೆ ಹಾಕಿ, ಸಾವಿರಾರು ಜನರನ್ನು ಮತಾಂತರಗೊಳಿಸಿದ್ದು ಗೋವೆಯ ಚರಿತ್ರೆಯಲ್ಲಿ ದಾಖಲಾಗಿದೆ; ಹಲವು ಹಿಂದೂಗಳನ್ನು ಕಂಬಕ್ಕೆ ಕಟ್ಟಿ ಜೀವಂತ ಸುಟ್ಟು ಹಾಕಿದರು. (ಎನ್. ರಾಜಗೋಪಾಲನ್: Old Goa): 1684ರ ಪೋರ್ಚುಗೀಸ್ ರಾಜಾಜ್ಞೆ ಪ್ರಕಾರ, ಗೋವೆಯಲ್ಲಿ ಸ್ಥಳೀಯ ಭಾಷೆಯನ್ನು ಯಾರೂ ಮಾತನಾಡುವಂತಿರಲಿಲ್ಲ. ಪೋರ್ಚುಗಲ್ ದೊರೆ ಮೂರನೇ ಜೋ ಆ ಎ ಇಲ್ಲಿಯ ವೈಸ್‌ರಾಯ್‌ಗೆ (16ಶ) ಪತ್ರ ಬರೆದು 'ಲೋಹ, ಮರ, ಶಿಲೆ ಯಾವುದೇ ಆಗಿರಲಿ ಎಲ್ಲ ವಿಗ್ರಹಗಳನ್ನು ನಾಶಪಡಿಸಬೇಕು' ಎಂದು ಆಜ್ಞೆ ಹೊರಡಿಸಿದ.

1857ರಲ್ಲಿ 'ಸಿಪಾಯಿ ದಂಗೆ' ಎಂದು ಬ್ರಿಟಿಷರು ಕರೆದರೂ, ವಾಸ್ತವವಾಗಿ ಭಾರತೀಯ ಮೊದಲ ಸ್ವಾತಂತ್ರ್ಯ ಹೋರಾಟ ನಡೆದು, ಅದು ವ್ಯಾಪಕವಾಗಿ ಹಬ್ಬಿದಾಗ ಬ್ರಿಟಿಷ್ ಸರಕಾರವು ಈಸ್ಟ್ ಇಂಡಿಯಾ ಕಂಪನಿಯಿಂದ ಅಧಿಕಾರವನ್ನು ಕಿತ್ತುಕೊಂಡು ಈಚಿನ ಪಾಕಿಸ್ತಾನ, ಬಾಂಗ್ಲಾ ಸೇರಿದಂತೆ ಇಡೀ ಭಾರತವನ್ನು ಆಕ್ರಮಿಸಿತು. ಕ್ರಿ.ಶ. 1858ರಿಂದ ಭಾರತವು 'ಬ್ರಿಟಿಷ್ ಇಂಡಿಯಾ' ಆಯ್ತು, ಮೊದಮೊದಲು ಈಸ್ಟ್ ಇಂಡಿಯಾ ಕಂಪನಿಯು ಭಾರತಕ್ಕೆ ಮಿಷನರಿಗಳನ್ನು ಕಳುಹಿಸಲು ಸಿದ್ಧವಿರಲಿಲ್ಲ. ಕುರಾನ್ ಧರ್ಮಗ್ರಂಥವು ಬೈಬಲ್‌ನಿಂದ ಹಲವು ಭಾಗಗಳನ್ನು ಕದ್ದಿದೆಯೆಂದು, ಮಹಮ್ಮದ್ ಪ್ರವಾದಿಯು ಒಬ್ಬ tyrant ಎಂದು ಕ್ರೈಸ್ತರು ಅಪಪ್ರಚಾರ ಮಾಡುವುದು ಸಾಗಿಯೇ ಇತ್ತು. ಕ್ರಮೇಣ, 1813ರ ಬಳಿಕ ಇಂಗ್ಲೆಂಡಿನಿಂದ ಮಿಷನರಿಗಳು ಭಾರತಕ್ಕೆ ಬರುವುದು ಹೆಚ್ಚಾಯಿತು. ಕ್ರಿ.ಶ. 1800ರಲ್ಲಿ ಸೆರಾಂಪುರದಲ್ಲಿ (ಬಂಗಾಳದ) ಕೃಷ್ಣಪಾಲ್ ಎಂಬ ಬಡಗಿಯು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡ ಮೊದಲ ಮತಾಂತರಿ ಎಂದು ದಾಖಲಾಗಿದೆ. ಅವನಿಗೆ ಸಾವಿರ ರೂಪಾಯಿ ಸಂಭಾವನೆ ಮಾತ್ರವಲ್ಲ, ಒಬ್ಬ ವಿಧವೆ ಯನ್ನೂ ಕೊಟ್ಟು ಮದುವೆ ಮಾಡಲಾಯಿತು (ಕಾಂತಿ ಪ್ರಸನ್ನ ಸೇನ ಗುಪ್ತ: The Christian Missionaries in Bengal. 1793-1833).

ಮಿಷನರಿಗಳ ಮುಖ್ಯ ವೃತ್ತಿಯು (vocation) ಕ್ರೈಸ್ತಮತ ಬೋಧನೆ, ಪ್ರಚಾರ ಮತ್ತು ಮತಾಂತರವಾಗಿತ್ತು. ಅವರು ಶಾಲೆ, ಆಸ್ಪತ್ರೆಯಂತಹ ಯಾವುದೇ ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರೂ ಅವರ ಏಕೈಕ ಗುರಿ ಕ್ರಿಶ್ಚಿಯನ್ನರಲ್ಲದವರನ್ನು, ಹಿಂದೂಗಳನ್ನು, ಮುಸ್ಲಿಮರನ್ನು ಮತಾಂತರಗೊಳಿಸುವುದೇ ಆಗಿತ್ತು. ('... Conversion of the non-Christians remained their sole aim'-Raj Bahadur Sharma: Christian Missions in North India. ಭಾರತೀಯ ಧರ್ಮ ಗುರುಗಳ ಆದರ್ಶ ಅಂತರಂಗದ ಸಾಧನೆ, ಆಧ್ಯಾತ್ಮಿಕ ಪ್ರಗತಿ ಎಂಬುದನ್ನು ಲಕ್ಷಿಸಬೇಕು.) ಗೆದ್ದವರು ಯಾವಾಗಲೂ ಸೋತವರನ್ನು ನಿಯಂತ್ರಿಸುತ್ತಾರೆ. ಬ್ರಿಟಿಷರ ಕೈಯಲ್ಲಿ ಇಡೀ ಭಾರತವು ದಾಸ್ಯದಲ್ಲಿ ತೊಳಲುತ್ತಿರುವಾಗ ಅವರ ಸಂಪೂರ್ಣ ಬೆಂಬಲವಿದ್ದುದರಿಂದ ಮೊದಮೊದಲು ಪಾದ್ರಿಗಳು ಬಹಿರಂಗವಾಗಿ ಹಿಂದೂ ದೇವತೆಗಳನ್ನು ನಿಂದಿಸುತ್ತಾ ಬಹಿರಂಗ ಮತ ಪ್ರಚಾರದಲ್ಲಿ ತೊಡಗಿದ್ದುದು, ವಿರುದ್ಧ ಫಲ ನೀಡುವ ಸೂಚನೆ ಕಂಡು ಬಂದೊಡನೆ, ಚರ್ಚುಗಳನ್ನು ಬಳಸಿಕೊಂಡು ಮತಾಂತರವನ್ನು ಸಾಂಸ್ಥೀಕರಣಗೊಳಿಸಲು (Institutionalize) ಶುರುಮಾಡಿದರು. ಅವರು ಏಸುವೊಬ್ಬನೇ ಭಗವಂತ, ಭಗವಂತನ ನಿಜಪುತ್ರ; ಮನುಷ್ಯರೆಲ್ಲ ಹುಟ್ಟಿನಿಂದ ಪಾಪಿಗಳು ಎಂದು ಪ್ರಬಲವಾಗಿ ನಂಬಿದ್ದರು. (ಭಾರತೀಯ ಧರ್ಮಗಳು ಆತ್ಮವು ಸ್ವಭಾವತಃ ಶುದ್ಧ, ಪರಮಾತ್ಮ ರೂಪಿ ಎಂದು

ನಂಬುತ್ತವೆ). ಶಾಲೆಗಳನ್ನು ಆರಂಭಿಸಿ ಅಲ್ಲಿ ವಿದ್ಯಾರ್ಥಿಗಳಿಗೆ ಪಾಠಗಳ ಜತೆ ಕ್ರೈಸ್ತ ಧರ್ಮ ಬೋಧನೆ ಮಾಡಿದರು. ಕ್ರೈಸ್ತ ಉಪಾಧ್ಯಾಯರು ಸಿಗದಿದ್ದಾಗ ಮಾತ್ರ ಕ್ರೈಸ್ತೇತರ ಉಪಾಧ್ಯಾಯರನ್ನು ನೇಮಕ ಮಾಡಿಕೊಳ್ಳುತ್ತಿದ್ದರು. ಅಲ್ಲಿ ಇಂಗ್ಲಿಷ್ ಮಾಧ್ಯಮವಿದ್ದುದರಿಂದ ಮತ್ತು ಅದು ಆಡಳಿತ ವರ್ಗದ ಭಾಷೆಯಾಗಿದ್ದುದರಿಂದ ವಿದ್ಯಾರ್ಥಿಗಳಿಗೆ ತಾವು ಉಳಿದವರಿಗಿಂತ ಶ್ರೇಷ್ಠ ಎಂಬ ಭಾವನೆ ಬಂದುದಲ್ಲದೆ, ಹಲವರಲ್ಲಿ ಕ್ರೈಸ್ತ ಧರ್ಮದ ಕಡೆ ಒಲವು ಕಾಣಿಸಿಕೊಂಡಿತು. ಸಾಂಪ್ರದಾಯಿಕ ತಾಯ್ತಂದೆಯರಲ್ಲಿ ಇದರಿಂದ ಗೊಂದಲ ಉಂಟಾಗಿ ಅನೇಕರು ತಮ್ಮ ಮಕ್ಕಳ ಜತೆ ಕ್ರಿಶ್ಚಿಯನ್ನರಾದರು. ಮಿಷನರಿಗಳು ತಮಗೆ ದೊರಕಿದ್ದ ಅಧಿಕಾರಬೆಂಬಲವನ್ನು ಮಾತ್ರವಲ್ಲದೆ, ಯಥೇಚ್ಛವಾಗಿ ಹಣವನ್ನೂ ಮತಾಂತರಕ್ಕಾಗಿ ಬಳಸಿದರು. ಹಣದ ಆಮಿಷವು ಬಹು ಪ್ರಧಾನವಾಗಿತ್ತು. ('material inducement'). ಮಿಷನರಿಗಳಿಗೆ ಭಾರತೀಯರೆಲ್ಲರೂ ಅನಾಗರಿಕರಾಗಿ ವಿಧರ್ಮೀಯರಾಗಿ (Heathens) ಕಂಡರು. ಹತ್ತೊಂಬತ್ತನೇ ಶತಮಾನದಲ್ಲಿ ಮೊದಮೊದಲು ಹಿಂದೂ ಸಮಾಜದ ಮೇಲು ಜಾತಿಯವರನ್ನು ಮತಾಂತರಗೊಳಿಸಲು ಗಮನ ನೀಡಿದರು. ಅಲ್ಲಿಂದ ತಾವು ನಿರೀಕ್ಷಿಸಿದಷ್ಟು ಜನರು ಮತಾಂತರಗೊಳ್ಳುವುದು ಸಾಧ್ಯವಿಲ್ಲವೆಂದು ತಿಳಿದಾಗ ಅವರ ಗಮನವು ಕೆಳ ಸ್ತರದವರ ಕಡೆ, ಬಡವರ, ಅಸ್ಪೃಶ್ಯರ ಕಡೆ ಹರಿಯಿತು. ಕ್ರಿಶ್ಚಿಯನ್ನರಾದ ಹಿಂದೂಗಳು ತಾವು ಇತರ ಹಿಂದೂಗಳಿಗಿಂತ ಶ್ರೇಷ್ಠರು ಎಂಬ ಮೇಲರಿಮೆಯಿಂದ ಬೀಗುತ್ತಿದ್ದರು.

ಮಿಷನರಿಗಳಂತೂ ಬ್ರಿಟಿಷ್ ಸರಕಾರದ ಏಜೆಂಟರೇ ಆಗಿದ್ದರು. ಅವರ ನಿಷ್ಠೆ ಇಂಗ್ಲೆಂಡಿಗಿತ್ತೇ ಹೊರತು ಭಾರತದ ಕಡೆಗಲ್ಲ. ಅವರು ಬ್ರಿಟಿಷ್ ಸರಕಾರದ paid religious workers ಆಗಿದ್ದರು. ಇಡೀ ಭಾರತವೆಂಬ ಸ್ಲೇಟ್ (Slate)ನಿಂದ ಹಿಂದೂ ಧರ್ಮವನ್ನು ಸಂಪೂರ್ಣ ಅಳಿಸಿ ಹಾಕುವುದು ಅವರ ಉದ್ದೇಶವಾಗಿತ್ತು. ಕ್ರಿಶ್ಚಿಯನ್ನರ ಉಡುಪು, ಭಾಷೆ, ಜೀವನ ವಿಧಾನವೆಲ್ಲ ಸಂಪೂರ್ಣ ಪಾಶ್ಚಾತ್ಯಮಯವಾಯಿತು. ಮಿಷನರಿಗಳಿಗಂತೂ ಬ್ರಿಟಿಷ್ ಸರಕಾರವು ಮತಾಂತರಕ್ಕಾಗಿ ಸ್ವತಃ ಏಸುವೇ ಸ್ವರ್ಗದಿಂದ ಕಳುಹಿಸಿದ ದೇವದೂತರಾಗಿ ಕಾಣಿಸಿದರು. ಭಾರತದಲ್ಲಿ ಬ್ರಿಟಿಷರ ಸ್ಥಾನವನ್ನು ಭದ್ರಗೊಳಿಸುವುದೂ ಅವರ ಗುರಿಯಾಗಿತ್ತು.

ಭಾರತದಲ್ಲಿ ಕೆಲಸ ಮಾಡಿದ ಎಲ್ಲ ಐರೋಪ್ಯರಲ್ಲಿ ವಿದ್ವಾಂಸರು ಹಲವರು. ಅವರಲ್ಲಿ ಕೆಲವರು ಪಾದ್ರಿಗಳು-ಮಿಷನರಿಗಳಾಗಿ ಕೆಲಸ ಮಾಡಿದರು; ಅಥವಾ ಬೆಂಬಲವನ್ನು ನೀಡಿದರು. ಸಂಸ್ಕೃತ-ಇಂಗ್ಲಿಷ್, ಇಂಗ್ಲಿಷ್-ಕನ್ನಡ ನಿಘಂಟು ಬರೆದ ವಿದ್ವಾಂಸ ಮೋನಿಯಲ್ ವಿಲಿಯಂಸ್ 1878ರಲ್ಲಿ ಲೇಖನ ಬರೆದು ಕ್ರಿಶ್ಚಿಯನ್ ಧರ್ಮಕ್ಕೆ 'Oriental Format' ನೀಡಿದರೆ ಮತಾಂತರ ಸುಲಭವಾಗುತ್ತದೆ ಎಂದರು-'He

advised the young and enthusiastic missionaries to become Muslim to the Muslims and Hindu to the Hindus in order that both Muslims and Hindus may be won over to Christ'-(ರಾಜ್ ಬಹಾದ್ದೂರ್ ಶರ್ಮ ಕೃತಿಯಿಂದ). ಸಂಸ್ಕೃತ ಧಾರ್ಮಿಕ ಗ್ರಂಥಗಳನ್ನು ಇಂಗ್ಲೀಷಿಗೆ ಅನುವಾದಿಸಿರುವ ಸುಪ್ರಸಿದ್ಧ ರೆ. ಮ್ಯಾಕ್ಸ್ ಮುಲರ್, ತಾನು ಸಂಸ್ಕೃತ ಕೃತಿಗಳನ್ನು ಇಂಗ್ಲೀಷಿಗೆ ಅನುವಾದಿಸಿ ಹಿಂದೂ ಧರ್ಮದ ಟೊಳ್ಳುತನವನ್ನು ಬಯಲು ಮಾಡಿರುವು-ದಾಗಿ ಹೇಳಿ ಈ ಮುಂದಿನ ಮಾತು ಆಡಿದ್ದಾನೆ-'...But the ancient religion (Hinduism) is doomed... and if Christianity does not step in whose fault will it be?' (Life and letters of Max Muller. I. 1902 and 357-8). ರೆ. ಉತ್ತಂಗಿ ಚನ್ನಪ್ಪ ಕನ್ನಡ ಸಾಹಿತ್ಯಕ್ಕೆ, ವಿಶೇಷವಾಗಿ ಸರ್ವಜ್ಞನ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಚಿರಸ್ಮರಣೀಯ. ಅವರ ಮಾತುಗಳು ಹೀಗಿವೆ-'ಬನಾರಸದ ಹಿಂದೂ ಬಾಂಧವರೇ, ನಿಮಗೆ ಬೆತ್ಲಹೇಮೆಂಬ ಕುಗ್ರಾಮವು ಮಾಡುವ ವಿನಂತಿಯೆಂದರೆ, ಆತನನ್ನು (ಕ್ರಿಸ್ತನನ್ನು) ಇದ್ದಂತೆ ಸ್ವೀಕರಿಸಿ' (ಬನಾರಸಕ್ಕೆ ಬೆತ್ಲಹೇಮ್‌ನ ಸಂದೇಶ). 'ಬನಾರಸದ ಹಿಂದೂ ಬಾಂಧವರು' ಎಂದರೆ ಸಮಸ್ತ ಹಿಂದೂಗಳು-ಅವರೆಲ್ಲ ಕ್ರಿಸ್ತ ಧರ್ಮವನ್ನು ಅಂಗೀಕರಿಸಬೇಕು ಎಂಬುದೇ ರೆ. ಉತ್ತಂಗಿ ಚನ್ನಪ್ಪನವರ ಸಂದೇಶ. ಪ್ರಸಿದ್ಧ ಕನ್ನಡ-ಇಂಗ್ಲಿಷ್ ನಿಘಂಟುಕಾರ ರೆ. ಕಿಟಲರು 1865ರಲ್ಲಿ ಮಂಗಳೂರಿನ 'English School'ನಲ್ಲಿ ಮಾಡಿರುವ ಉಪನ್ಯಾಸದಲ್ಲಿ ಹೀಗಿದೆ- '...This distasteful and miserable doctrine (i.e. Vedic Polytheism) which pretends to be the highest wisdom, but which in reality is the most worthless trash that has ever been born in man's brain.' (A Short survey of Vedic Polytheism and Pantheism.). ವೇದ ನಿಂದನೆಯ ಭಾಷೆ ಅತ್ಯಂತ ಕ್ರೂರವಾಗಿದೆಯೆಂಬುದು ಸ್ವಯಂ ವೇದ್ಯ. ಮರಾಠಿ-ಇಂಗ್ಲಿಷ್ ಕೋಶ ಸಿದ್ಧಪಡಿಸಿದ ರೆ. ಮೋಲ್ಸ್‌ವರ್ಥ್ ಪ್ರಕಾರ, ಅವನೂ ಸೇರಿದಂತೆ ಎಲ್ಲ ಮಿಷನರಿಗಳ ಉದ್ದೇಶ-('humble desire of promoting the propogation of the glorious gospel') ಪಾದ್ರಿಗಳಿಂದ ಭಾರತೀಯ ಭಾಷೆಗಳಿಗೆ ಸಹಾಯವಾಯಿತು; ಆದರೆ ಅವರ ಗುರಿ ಭಾರತೀಯ ಭಾಷೆಗಳಲ್ಲಿ ಕೆಲಸ ಮಾಡಿ ಹಿಂದೂಗಳನ್ನು ಕ್ರಿಶ್ಚಿಯನ್ ಧರ್ಮದತ್ತ ಸೆಳೆಯುವುದೇ ಆಗಿತ್ತು ಎಂಬುದು ಸ್ಪಷ್ಟ. ರೆ. ಫ್ರೆಡರಿಕ್ ಜತನಯ್ಯ ಎಂಬ ಪಾದ್ರಿ 1907ರಲ್ಲಿ ಪ್ರಕಟಿಸಿದ 'ಸ್ವದೇಶಾಭಿಮಾನ' ಎಂಬ ಕನ್ನಡ ಕೃತಿಯಲ್ಲಿ ಆ ಕಾಲದಲ್ಲಿ 'ವಂದೇಮಾತರಂ' 'ಸ್ವದೇಶಿ' ಎಂಬ ಘೋಷಣೆಗಳು ಹೊರಡುತ್ತಿದ್ದುದನ್ನು ಖಂಡಿಸಿ,

ಬ್ರಿಟಿಷರ ಶಾಶ್ವತ ಆಡಳಿತ ಒಪ್ಪಿ, ಎಲ್ಲರೂ ಕ್ರಿಸ್ಚಿಯನ್ನರಾಗುವುದೇ ನಿಜವಾದ ದೇಶಾಭಿಮಾನ ಎಂದು ಘೋಷಿಸಿದರು. ಬೇಟೆಗಾರರು ತೋರಿಕೆಗೆ ಆಹಾರ ತೋರಿಸಿದರೂ ಅವರ ಉದ್ದೇಶ ಪ್ರಾಣಿಗಳನ್ನು ಹಿಡಿಯುವುದು, ಕೊಲ್ಲುವುದು. ಮೀನುಗಾರನ ಗಾಳದ ತುದಿಯಲ್ಲಿ ಮೀನುಗಳ ಆಹಾರವಿರುತ್ತದೆ-ಅವರ ಉದ್ದೇಶ ಸ್ಪಷ್ಟ.

19ನೇ ಶತಮಾನದಲ್ಲಿ ಮತ್ತು 20ನೇ ಶತಮಾನದ ಆರಂಭದ ಕೆಳಗಿನ ಜನಗಣತಿ ಅಂಕಿ-ಅಂಶ ಗಮನಿಸಿ- (ಕ್ರಿಶ್ಚಿಯನ್ನರ ಸಂಖ್ಯೆ ನೀಡಿದೆ).

| ಕ್ರಿಶ್ಚಿಯನ್ನರು | 1881 | 1911 |
|---|---|---|
| ಡೆಹ್ರಾಡೂನ್ ಜಿಲ್ಲೆ | 410 | 2,05,075 |
| ಸಹ್ರಾನ್‌ಪುರ ಜಿಲ್ಲೆ | 336 | 9,86,359 |
| ಮುಜಾಫರ್‌ನಗರ ಜಿಲ್ಲೆ | 1 | 8,08,360 |
| ಮೀರತ್ ಜಿಲ್ಲೆ | 1121 | 1,51,9,364 |
| ಬುಲಂದರ್ ಶಹರ್ ಜಿಲ್ಲೆ | 18 | 1,12,3,792 |

ಮೇಲಿನ ಅಂಕಿ-ಅಂಶಗಳು ತಮಗೆ ತಾವೇ ವಿವರಣೆ ನೀಡುತ್ತವೆ. ಬ್ರಿಟಿಷರ ಸರ್ವಾಧಿಕಾರದ ಬೆಂಬಲ, ಹಿಂದೂಗಳ ಅಸಡ್ಡೆ ಮಿಷನರಿಗಳಿಗೆ ಎಲ್ಲಿಲ್ಲದ ಉತ್ಸಾಹವನ್ನು ನೀಡಿದವು. ತಮ್ಮ ಧರ್ಮ ಶ್ರೇಷ್ಠ, ಉಳಿದವು ಕೀಳು, ತಮ್ಮ ಧರ್ಮ ಗ್ರಂಥ ಮಾತ್ರವೇ ಶ್ರೇಷ್ಠ ಎಂಬ ವಾದ-ವಿವಾದಗಳ ಪಾಂಡಿತ್ಯಪೂರ್ಣ 'ಶಾಸ್ತ್ರಾರ್ಥ'ಗಳಲ್ಲಿ ಶೈವ, ವೈಷ್ಣವ, ಇತ್ಯಾದಿ ಪಂಡಿತರು ಮಗ್ನರಾಗಿದ್ದರು.

ಇಂತಹ ಸಮಯದಲ್ಲಿ ಹಿಂದೂ ಧರ್ಮದಲ್ಲಿ ಆಮೂಲಾಗ್ರ ಸುಧಾರಣೆಗಳನ್ನು ತಂದು, ಜನಜಾಗೃತಿ ಉಂಟು ಮಾಡುವ ಸಲುವಾಗಿ 1820ರಲ್ಲಿ ರಾಜಾರಾಮ ಮೋಹನ ರಾಯ್ ಅವರಿಂದ ಸ್ಥಾಪಿತವಾದ ಬ್ರಹ್ಮಸಮಾಜವು ಇಂಗ್ಲಿಷ್ ಕಲಿಕೆ ಪ್ರೋತ್ಸಾಹಿಸಿ, ಸಹಗಮನ, ಬಹುಪತ್ನಿತ್ವ, ಪಶುಬಲಿ ಇತ್ಯಾದಿಗಳನ್ನು ವಿರೋಧಿಸಿ ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿ ಹಿಡಿದು, ಶ್ರೇಷ್ಠವಾದ ಹಿಂದೂ ಧರ್ಮದಂತೆಯೇ ಇತರ ಧರ್ಮಗಳೂ ಸಮಾನ ಗೌರವಾರ್ಹವೆಂದು ಪ್ರತಿಪಾದಿಸಿತು. ಪಾಶ್ಚಾತ್ಯ ನಾಗರಿಕ ಚಿಂತನೆಗಳನ್ನು ಭಾರತೀಯರು ಭಾರತೀಯತ್ವಕ್ಕೆ ಹೊಂದಿಸಿಕೊಳ್ಳುವುದನ್ನೂ ಎತ್ತಿ ಹಿಡಿಯಿತು. ಅವರ ಅನುಯಾಯಿಗಳೇ ಕೇಶವಚಂದ್ರ ಸೇನರು. ಬ್ರಹ್ಮ ಸಮಾಜದ ಧುರೀಣರಲ್ಲಿ ಒಬ್ಬರಾದ ಆಂಧ್ರದ ವೀರೇಶ ಲಿಂಗಂ ಪಂತುಲು (1900) ಹಿಂದೂ ಧರ್ಮದ ಕೆಲ ಅಪಾಯಕಾರಿ ತತ್ವಗಳನ್ನು ವಿರೋಧಿಸಿದರು. (ಅವರು ತಮ್ಮನ್ನು 'ವೀರಶೈವ'ರೆಂದೇ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ.)

'ಆರ್ಯ ಸಮಾಜ' ಸ್ಥಾಪಕರಾದ ದಯಾನಂದ ಸರಸ್ವತಿಯವರು (1910) 'ಅಸ್ಪೃಶ್ಯ' ಎಂಬ ಪರಿಕಲ್ಪನೆಯೇ ಹಿಂದೂ ಧರ್ಮಕ್ಕೆ ಹೊರತಾದುದು ಎಂದು ಹೇಳಿ, ಹಿಂದೂ ಧರ್ಮದಿಂದ ಮತಾಂತರಗೊಂಡವರನ್ನು ವಾಪಸ್ ತರುವ 'ಶುದ್ಧಿ' ಆಂದೋಲನ ಆರಂಭಿಸಿದರು. (ಅದನ್ನು ಜಾರಿಗೊಳಿಸುವಲ್ಲಿ 1920ರ ಸ್ವಾಮಿ ಶ್ರದ್ಧಾನಂದರ ಪಾತ್ರ ಬಹು ದೊಡ್ಡದು).

'ಪ್ರಾರ್ಥನಾ ಸಮಾಜ' ಆರಂಭಿಸಿದ ನ್ಯಾ. ಮಹಾದೇವ ಗೋವಿಂದ ರಾನಡೆಯವರು ಬಾಲ್ಯವಿವಾಹ ವಿರೋಧಿಸಿ, ವಿಧವಾ ವಿವಾಹ ಪ್ರೋತ್ಸಾಹಿಸಿದರು. ರಾಮಕೃಷ್ಣ ಪರಮ ಹಂಸರು ಸಾಧಕರಾಗಿ ಹಿಂದೂ, ಕ್ರಿಶ್ಚಿಯನ್, ಮುಸ್ಲಿಂ ಪದ್ಧತಿಗಳನ್ನು ಗೌರವಿಸಿ ಈಶ್ವರ, ವಿಷ್ಣು, ಕಾಳಿ, ಏಸು, ಅಲ್ಲಾ ಎಲ್ಲವೂ ಒಂದೇ ದೈವದ ಭಿನ್ನ ನಾಮಗಳು ಎಂಬುದನ್ನು ತಮ್ಮ ಅನುಭಾವದ ನೆಲೆಯಲ್ಲಿ ಕಂಡುಕೊಂಡರು. ಅವರ ಶಿಷ್ಯ ಸ್ವಾಮಿ ವಿವೇಕಾನಂದರು ಅಮೆರಿಕದ ಚಿಕಾಗೊದ ಸರ್ವಧರ್ಮ ಸಮ್ಮೇಳನದಲ್ಲಿ (1893, ಸೆಪ್ಟೆಂಬರ್ 11) ಹಿಂದೂ ಧರ್ಮದ ಬಗ್ಗೆ ಮಾತನಾಡಿ, ಆ ಧರ್ಮದ ಸಹನಶೀಲತೆ, ಉದಾತ್ತ ದೃಷ್ಟಿಕೋನ ವನ್ನು ಭಾರತದ ಹೊರಗೆ ಪ್ರಪ್ರಥಮವಾಗಿ ಎತ್ತಿತೋರಿದರು. ('I am proud to belong to a religion which has taught the world both tolerance and universal acceptance. I am a Hindu')-ಆಗ ಎಲ್ಲರೂ ದೀರ್ಘ ಕರತಾಡನ ಮಾಡಿ ಬಹು ಮೆಚ್ಚಿಕೊಂಡರು. ಅದನ್ನು ವರದಿ ಮಾಡಿದ New York Herald ಪತ್ರಿಕೆ -'ಭಾರತದಂತಹ ಪ್ರಬುದ್ಧ ರಾಷ್ಟ್ರಕ್ಕೆ ಮತಾಂತರಕ್ಕಾಗಿ ಪಾದ್ರಿಗಳನ್ನು ಕಳುಹಿಸುವುದು ಮೂರ್ಖತನ' ಎಂದು ಬರೆಯಿತು. ('... Undoubtedly the greatest figure in the Parliament of religious. After hearing him we feel how foolish it is to send Missionaries to this learned nation').

20ನೇ ಶತಮಾನದ ಪೂರ್ವಾರ್ಧದ ಗಾಂಧೀಜಿಯವರೆಗೆ ಬರೋಣ. ತಮ್ಮ ಬಾಲ್ಯದಲ್ಲಿ ಹೈಸ್ಕೂಲ್ ಬಳಿ ಮಿಷನರಿಗಳು ಹಿಂದೂಗಳನ್ನು, ಹಿಂದೂ ದೇವತೆಗಳನ್ನು ವಾಚಾಮಗೋಚರವಾಗಿ ನಿಂದಿಸಿದ್ದು ಕ್ರಿಶ್ಚಿಯನ್ ಧರ್ಮದ ಬಗ್ಗೆ ತಮಗೆ ಜುಗುಪ್ಸೆ ಹುಟ್ಟಿಸಿತೆಂದು ಹೇಳಿಕೊಂಡಿದ್ದಾರೆ. 'I developed a sort of dislike for it'- (ಹಿಂಗೋರನಿ: Gandhiji for 21st Century VI). ಬಲಾತ್ಕಾರದ ಗುಲಾಮಗಿರಿ, ಬಲಾತ್ಕಾರದ ಮತಾಂತರ ಎರಡೂ ಒಂದೇ; ಧರ್ಮವನ್ನು ಲೌಕಿಕ ವ್ಯವಹಾರದ ಮಟ್ಟಕ್ಕಿಳಿಸಿ ಜನರನ್ನು ಹಣದ ಆಮಿಷಕ್ಕೆ ಒಳಗುಮಾಡಿ ಲಕ್ಷಾಂತರ ಜನರ ಭಾವನೆಗಳಿಗೆ ಭಂಗವುಂಟು ಮಾಡಿರುವುದರ ಬಗ್ಗೆ ನೋವು ವ್ಯಕ್ತಪಡಿಸುತ್ತಾರೆ. (ಗಾಂಧಿ: The way to Communal Harmony). ಪ್ಲೈಮತ್ ಬ್ರದರ್ಸ್ ಒಮ್ಮೆ ಜನರಿಗೆ ಹೇಳಿದರಂತೆ- 'ನೀವೆಲ್ಲ ಕ್ರಿಶ್ಚಿಯನ್ ಆಗಿ, ಮನಸ್ಸಿಗೆ ಬಂದಂತೆ ಮಾಡಿ-ಏಸು ಕ್ಷಮಿಸುತ್ತಾರೆ'. ಸತ್ಯವು

ಯಾವುದೇ ಧರ್ಮದ ಸ್ವತ್ತು ಅಲ್ಲ-ಬೈಬಲ್, ಕುರಾನ್ ಇವು ಮಾತ್ರ ಸತ್ಯವನ್ನು ಹೇಳುತ್ತವೆ ಎಂಬುದು ಸುಳ್ಳು, ಕ್ರಿಶ್ಚಿಯನ್ ಆದ ತಕ್ಷಣ ಭಗವತ್ ಕೃಪೆ ದೊರಕುತ್ತದೆ, ಎಲ್ಲ ಕಷ್ಟಗಳೂ ನಿವಾರಣೆಯಾಗುತ್ತವೆ, ಮೋಕ್ಷ ದೊರಕುತ್ತದೆ ಎಂಬುದನ್ನು ನಾನು ಒಪ್ಪಲಾರೆ ಎಂದಿದ್ದಾರೆ-ಗಾಂಧೀಜಿ. ಮಿಷನರಿಗಳು ನಿಜವಾದ ಧರ್ಮಪ್ರಿಯರಲ್ಲ; ಅವರು ಕೇವಲ ಬೋಧಕರು, ಪ್ರಚಾರಕರು. (ಗಾಂಧೀಜಿ: An autobiography or the Story of My Experiments with Truth). ಭಾರತಾದ್ಯಂತ ಸ್ವಾತಂತ್ರ್ಯ ಹೋರಾಟದಿಂದ ಕ್ರಿಶ್ಚಿಯನ್ನರು ದೂರ ಉಳಿದಿರುವುದರ ಬಗ್ಗೆ ಗಾಂಧೀಜಿ ಖೇದ ವ್ಯಕ್ತಪಡಿಸಿದ್ದಾರೆ. ತಾವು ಬೈಬಲ್ಲಿನಲ್ಲಿನ Sermon on the Mount ಭಾಗಕ್ಕೆ ಮಾರುಹೋಗಿದ್ದರೂ ಸ್ನೇಹಿತರ ಒತ್ತಾಯಕ್ಕೆ ಮಣಿದು ಕ್ರಿಶ್ಚಿಯನ್ನರಾಗಲಿಲ್ಲವೆಂದಿದ್ದಾರೆ. ಅವರ ಈ ಮಾತು ಗಮನಾರ್ಹ-'I claim to be a staunch ಸನಾತನಿ Hindu, because, though I reject all that offends my moral sense, I find the Hindu scriptures satisfy the needs of the soul' ಯಾವುದೇ ಧರ್ಮದವರು ಮತಾಂತರ ಮಾಡ ಕೂಡದು; ಅವರ ಬೋಧನೆಯಿಂದ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಇವರು ಉತ್ತಮ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಆಗಬೇಕು. ('Our inmost prayer should be that a Hindu should be a better Hindu, a Muslim a better Muslim, a Christian a better citizen'). ಸ್ವಾಮಿ ವಿವೇಕಾನಂದರ ಅಭಿಪ್ರಾಯವೂ ಅದೇ.

ಅಸ್ಪೃಶ್ಯತೆಯ ಬಗ್ಗೆ ಗಾಂಧೀಜಿ ತೀವ್ರ ಕೋಪಾವಿಷ್ಟರಾಗಿದ್ದರು. ಅದನ್ನು ಕಿತ್ತೊಗೆಯಲು ಜೀವನವಿಡೀ ಶ್ರಮಿಸಿದರು ಎಂಬುದು ಎಲ್ಲರಿಗೂ ತಿಳಿದಿದೆ. ಹಿಂದೂ ಧರ್ಮ ಅಸ್ಪೃಶ್ಯತೆಯಿಂದ ಸಂಪೂರ್ಣ ಮುಕ್ತ ಆಗಬೇಕು-('The taint has become for me an intolerable burden'). ಅಸ್ಪೃಶ್ಯತೆಯು ಈಗಲೂ ಉಳಿದಿರುವುದನ್ನು ಗಮನದಲ್ಲಿಟ್ಟುಕೊಂಡು ಕೆಲವರು ಮತಾಂತರವನ್ನು ಬೆಂಬಲಿಸುತ್ತಾರೆ. ಅಮೆರಿಕದಲ್ಲಿದ್ದ ನೀಗ್ರೊಗಳ (ಕರಿಯರು) ಸ್ಥಾನಮಾನವನ್ನು ಗಮನಿಸಿ. ಜೇಕಬ್ ಆಗಸ್ಟ್ ಎಂಬ ಹರಾಜುಗಾರ (Auctioneer) 1859 ಅಕ್ಟೋಬರ್ 28 ನೀಡಿರುವ ಜಾಹೀರಾತು ಹೀಗಿದೆ-'Negroes for Sale'. (The World Book Encyclopaedia. "Negroes' ನೋಡಿ. ನೀಗ್ರೊಗಳು ಗುಲಾಮರಾಗಿ ಕೆಲಸ ಮಾಡಬೇಕಾಗಿದ್ದಾಗ ಅವರನ್ನು ಬಹಿರಂಗವಾಗಿ ಹರಾಜು ಹಾಕಿ ಹೆಂಡತಿ ಮಕ್ಕಳಿಂದ ಅವರನ್ನು ಬೇರ್ಪಡಿಸಿ ಮಾರುತ್ತಿದ್ದರು. 19ನೇ ಶತಮಾನದಲ್ಲಿ ಅವರಿಗೇ ಪ್ರತ್ಯೇಕ ಚರ್ಚುಗಳಿದ್ದವು; ಬಿಳಿಯರ ಚರ್ಚುಗಳಿಗೆ ಪ್ರವೇಶವಿರಲಿಲ್ಲ. ಅವರ ಚರ್ಚುಗಳಿಗೆ (African Methodist Episcopal Church) ಎಂಬಂತಹ ಹೆಸರುಗಳಿದ್ದವು. ಮುಂದೆ ಗುಲಾಮಗಿರಿ ರದ್ದಾಗಿ

ನೀಗ್ರೊಗಳು ಎಲ್ಲ ಬಿಳಿಯರಂತೆ ಸ್ವತಂತ್ರ ಹಕ್ಕುಗಳನ್ನು ಪಡೆದರು. ಗುಲಾಮಗಿರಿ ಕಾಲದಲ್ಲಿ ಅವರು ಕ್ರಿಶ್ಚಿಯನ್ ಧರ್ಮದಿಂದ ಹೊರಬರಲಿಲ್ಲ-ಅವರ ಸ್ವಾತಂತ್ರ್ಯಕ್ಕೆ ಬಿಳಿಯರು ಮನಃಪೂರ್ವಕ ಬೆಂಬಲ ನೀಡಿದರು. ಹಿಂದೆ ಹೇಳಿದ ಭಾರತದ ಎಲ್ಲ ಸಮಾಜ ಸುಧಾರಕರೂ ಮೇಲ್ಜಾತಿಯವರಿಗೆ, ದಲಿತರಿಗೆ ಸಮಾನ ಸ್ಥಾನವಿರಬೇಕೆಂದೇ ಪ್ರತಿಪಾದಿಸಿದ್ದಾರೆ. ನಮ್ಮೆಲ್ಲರ ಗುರಿ ಅದಾಗಿರಬೇಕು. (ಭಾರತವನ್ನು ಆಳುತ್ತಿದ್ದ ಕಾಲದಲ್ಲಿ ಬ್ರಿಟಿಷರು ತಮಗೇ ಮೀಸಲಾಗಿದ್ದ ಕ್ಲಬ್ಬುಗಳಲ್ಲಿ 'Indians and dogs are not allowed' ಎಂಬ ನಾಮಫಲಕಗಳನ್ನು ಹಾಕುತ್ತಿದ್ದರೆಂದು ಓದಿದ ನೆನಪು).

ಸ್ವಾತಂತ್ರ್ಯಪೂರ್ವದ ಎಲ್ಲ ದೇಶಪ್ರೇಮಿಗಳೂ ಮತಾಂತರವನ್ನು ಸಾರಾಸಗಟಾಗಿ ವಿರೋಧಿಸಿರುವಾಗ, ಈಗಿನ ಕೆಲವು ರಾಜಕೀಯ ಪಕ್ಷಗಳು, ಅಪ್ರಬುದ್ಧ ಸಾಹಿತಿಗಳು ಉದ್ವಕ್ಕೂ ನಡೆದಿರುವ, ಈಗಲೂ ನಡೆಯುತ್ತಿರುವುದು ಸಾಬೀತಾಗಿರುವ ಮತಾಂತರವನ್ನು ಖಂಡಿಸದೆ, ಕೆಲವು ಚರ್ಚ್‌ಗಳ ಮೇಲೆ ನಡೆದಿರುವ ದಾಳಿಯನ್ನು ಮಾತ್ರ ಖಂಡಿಸಿ ಮಿಷನರಿಗಳ ಕುತಂತ್ರಕ್ಕೆ ಅಪಾರ ಹುಮ್ಮಸ್ಸನ್ನು ತಂದುಕೊಟ್ಟಿದ್ದಾರೆ ಮತ್ತು ನನ್ನ ಜೀವನದಲ್ಲಿ ಹಿಂದೂ ಧರ್ಮಕ್ಕೆ ಈ ಬಗೆಯ ದಾಳಿಗಳಾಗಿರುವುದನ್ನು ನಾನು ಕಂಡಿಲ್ಲ, ಕೇಳಿಲ್ಲ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಹಿಂದೂಗಳ ಒಳ ಎಚ್ಚರ, ಮತಾಂತರ ನಿಷೇಧ ಕಾನೂನಿನ ಜಾರಿ ಇವೇ ಸದ್ಯಕ್ಕೆ ಕಾಣಿಸುವ ಪರಿಹಾರಗಳಾಗಿವೆ.

*ಈ ಲೇಖನದ ಸಿದ್ಧತೆಗೆ ಕಳೆದ ಒಂದು ವಾರದಿಂದ ತೊಡಗಿದ್ದು ಅದು ಒಂದು ಹಂತಕ್ಕೆ ಬರುವಷ್ಟರಲ್ಲಿ ಅದೇ ಮತಾಂತರಕ್ಕೆ ಸಂಬಂಧಿಸಿದ ಡಾ. ಎಸ್.ಎಲ್. ಭೈರಪ್ಪನವರ ಪ್ರಬುದ್ಧ ಲೇಖನವು 16.10.08ರ ವಿಜಯ ಕರ್ನಾಟಕದಲ್ಲಿ ಪ್ರಕಟವಾಗಿದೆ. ಇದು ಡಾ. ಭೈರಪ್ಪನವರ ಲೇಖನಕ್ಕೆ ಪ್ರತಿಕ್ರಿಯೆಯಲ್ಲ ದಿದ್ದರೂ ಪೂರಕ ಎಂಬುದನ್ನು ಓದುಗರ ಗಮನಕ್ಕೆ ತರಲು ಬಯಸುತ್ತೇನೆ.*



# ಧರ್ಮದ ಪರಿಕಲ್ಪನೆ ಮತ್ತು ಮತಾಂತರ

-ಅಜಕ್ಕಳ ಗಿರೀಶ ಭಟ್

---

ಮತಾಂತರದಂತಹ ಸೂಕ್ಷ್ಮ ವಿಷಯಗಳ ಬಗ್ಗೆ ಮುಕ್ತವಾದ ಹಾಗೂ ಬಹಿರಂಗ ವಾದ ಚರ್ಚೆಗಳು ನಡೆಯುವುದು ಸ್ವಾಗತಾರ್ಹ. ಭಾರತದಲ್ಲಿ ಬರುತ್ತಿರುವ ಕೋಮು ವಾದ ಹಾಗೂ ಮತಾಂತರದ ಕುರಿತ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ನೋಡಿದಾಗ ನನಗೆ ತೋಚಿದ ಕೆಲವು ವಿಚಾರಗಳನ್ನು ಇಲ್ಲಿ ಹಂಚಿಕೊಂಡಿದ್ದೇನೆ.

ಮೊದಲನೆಯದಾಗಿ, ಮತಾಂತರದ ಬಗ್ಗೆ ಚರ್ಚಿಸುವುದಕ್ಕಿಂತ ಮೊದಲು ಭಾರತೀಯ ಪರಂಪರೆಯಲ್ಲಿ ಬಂದ ಧರ್ಮಗಳ ಸ್ವರೂಪವನ್ನು ಅರ್ಥ ಮಾಡಿಕೊಳ್ಳಬೇಕು. ಅಖಿಲ ಭಾರತ ಮಟ್ಟದಲ್ಲಿ ಬುದ್ಧಿಜೀವಿಗಳೆನಿಸಿಕೊಂಡ ಅನೇಕರಿಗೆ ಭಾರತೀಯ ಮೂಲದ ಧರ್ಮಗಳ ಸ್ವರೂಪ, ದೇವರ ಪರಿಕಲ್ಪನೆ ಇವುಗಳ ಬಗ್ಗೆ ಸೂಕ್ಷ್ಮ ಗ್ರಹಿಕೆಗಳಿಲ್ಲ. ಹೀಗಾಗಿ ಅಂತಹ ವಿದ್ವಾಂಸರು ಕೋಮುವಾದದ ಕುರಿತಾಗಿ ಮಂಡಿಸುವ ವಾಗ್ವಾದಗಳೂ ಕೂಡ ಮೇಲುಮೇಲಿನ ನೆಲೆಯಿಂದ ಬಂದವುಗಳೇ ಆಗಿರುತ್ತವೆ. ಕ್ರೈಸ್ತ, ಇಸ್ಲಾಂ ಧರ್ಮ ಗಳನ್ನು ಗ್ರಹಿಸಿದ ಹಾಗೂ ವಿಶ್ಲೇಷಿಸಿದ ಬಗೆಯಲ್ಲಿಯೇ ಭಾರತೀಯ ಮೂಲದ ಧರ್ಮ ಗಳನ್ನು ಹಾಗೂ ದೇವರುಗಳನ್ನು ಗ್ರಹಿಸಿದಾಗ ಸಮಸ್ಯೆಗಳು ಉಂಟಾಗುತ್ತವೆ. ಈಚಿನ ಒಂದು ಉದಾಹರಣೆಯನ್ನು ನೀಡುವುದಾದರೆ, ಕಾಂಚ ಇಲಯ್ಯನವರು 'ರಾಮನು ರಾಜನಾಗಿದ್ದ ಎಂದಾದರೆ ಅವನಿಗೆ ದೇವಾಲಯ ಕಟ್ಟುವುದೇ ದೈವ ದ್ರೋಹದ ಕೃತ್ಯವಾಗು ತ್ತದೆ. ಅವನು ದೇವರೇ ಆಗಿದ್ದರೆ ಯಹೋವ ಅಥವಾ ಅಲ್ಲಾಹ್ ಮೊದಲಾದ ದೇವರು ಗಳಿಗೆ ಹೇಗೆ ನಿರ್ದಿಷ್ಟ ಜನ್ಮಸ್ಥಳಗಳಿಲ್ಲವೋ ಹಾಗೆಯೇ ರಾಮನಿಗೂ ಹುಟ್ಟಿದ ಸ್ಥಳ ಎಂಬುದು ಇರಬಾರದು' ಎಂಬ ರೀತಿಯ ವಾದವನ್ನು ಮಂಡಿಸಿದ್ದಿದೆ. (2007 ಸೆಪ್ಟೆಂಬರ್ 19ರ ಡೆಕ್ಕನ್ ಹೆರಾಲ್ಡ್). ಅಯೋಧ್ಯಾ ವಿವಾದ ಇಲ್ಲಿ ಅಪ್ರಸ್ತುತ. ಆದರೆ ಪಶ್ಚಿಮ ದೇಶಗಳ ಅಥವಾ ಅರಬ್ ದೇಶಗಳಿಗಿಂತ ಭಿನ್ನವಾದ ದೇವರ ಕಲ್ಪನೆ ಇಲ್ಲಿ

ಇರಬಹುದೆಂಬ ತಿಳಿವಳಿಕೆ ಅವರಿಗಿಲ್ಲ. ಇದರ ಹಿಂದೆ ಇರುವುದು ಇಸ್ಲಾಂ, ಕ್ರೈಸ್ತ ಧರ್ಮಗಳಂತೆಯೇ 'ಹಿಂದೂ' ಎಂಬುದೊಂದು ಏಕರೂಪಿ(?) ಧರ್ಮದ ಕಲ್ಪನೆ. ವಾಸ್ತವವಾಗಿ 'ಹಿಂದೂ' ಎಂಬುದೊಂದು ಏಕರೂಪಿ ಧರ್ಮ ಇಲ್ಲ ಎಂದು ಅವರೇ ಬೇರೆ ಕಡೆ ಹೇಳಿದ್ದಿದೆ. ಮಾತಿನ ಚಾಣ್ಮೆ ತರ್ಕವನ್ನು ಕೊಲ್ಲಬಾರದು ಎಂಬುದನ್ನು ನಾವು ನೆನಪಿಡಬೇಕು. (ಧರ್ಮಗಳ ಕುರಿತ ಕಲ್ಪನೆ ಹಾಗೂ ಅಪಕಲ್ಪನೆಗಳ ವಿಸ್ತೃತ ಅಧ್ಯಯನಕ್ಕಾಗಿ ಎಸ್.ಎನ್. ಬಾಲಗಂಗಾಧರ ಅವರ 'ದ ಹೀದನ್ ಇನ್ ಹಿಸ್ ಬ್ಲೈಂಡ್‌ನೆಸ್' ಎಂಬ ಪುಸ್ತಕ ನೋಡಬಹುದು.)

· ಭಾರತ ಬಹುಸಂಸ್ಕೃತಿಗಳ ದೇಶ. ಆದರೆ, ಹಿಂದಿನ ಇಲ್ಲಿಯ ಬಹುತೇಕ ಎಲ್ಲಾ ಸಂಸ್ಕೃತಿಗಳಲ್ಲಿಯೂ ಸಮಾನವಾಗಿ ಕಂಡುಬರುವ ಒಂದು ವಿಚಾರವೆಂದರೆ, 'ಸೃಷ್ಟಿಕರ್ತ' ಮಾತ್ರ ಪೂಜನೀಯ ಅಲ್ಲ, 'ಸೃಷ್ಟಿ' ಕೂಡ ಪೂಜನೀಯ ಎಂಬುದು. ಹೀಗಾಗಿ ಮರ, ನದಿ, ಸಮುದ್ರ, ಪ್ರಾಣಿಗಳು, ಪ್ಲೇಗು, ಮಾರಿಯಮ್ಮ ಹೀಗೆ ಎಲ್ಲವೂ ಪೂಜಿಸಲ್ಪಡುತ್ತವೆ. ಮೇಲೆ ಹೇಳಿದ ಕಾಂಚ ಇಲಯ್ಯನವರ ವಾದದ ಗುರಿ ಒಳ್ಳೆಯದೇ ಇದ್ದರೂ ಅವರ ವಾದದ ಮೊದಲ ಹೆಜ್ಜೆಯೇ ಗುರಿ ತಪ್ಪಿದ್ದು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ವೈದಿಕ, ಜನಪದ ಸಂಸ್ಕೃತಿ, ಪ್ರತಿ ಸಂಸ್ಕೃತಿ ಹೀಗೆ ಯಾವುದೇ ಸಂಸ್ಕೃತಿಯು 'ಸೃಷ್ಟಿ'ಯ ಅಮೂರ್ತ ಹಾಗೂ ಮೂರ್ತ ಸ್ವರೂಪಗಳನ್ನೆಲ್ಲ ದೈವತ್ವಕ್ಕೆ ಏರಿಸಬಲ್ಲ ಈ ಕಲ್ಪನೆ ಒಂದು ರೀತಿಯ ಅದ್ವೈತವೇ... ಈ ಹಿನ್ನೆಲೆಯಲ್ಲಿಯೇ ವೇದಾಂತದ ಕಲ್ಪನೆಗಳು, ಬೌದ್ಧರ ಶೂನ್ಯ, ಜೆನ್‌ತತ್ವ, ವಚನಕಾರರ ಬಯಲು ಇತ್ಯಾದಿ ಕಲ್ಪನೆಗಳನ್ನು ನೋಡಬೇಕು. 'ಸೃಷ್ಟಿಗೆ' 'ಸೃಷ್ಟಿಕರ್ತ'ನಷ್ಟೇ ಮಾನ್ಯತೆ ನೀಡುವ ನಂಬಿಕೆಗಳಿಗೆ ಇತರರನ್ನು ತಮ್ಮೆಡೆಗೆ ಮತಾಂತರಗೊಳಿಸಿಕೊಳ್ಳುವ ಅಗತ್ಯವೇ ಬರುವುದಿಲ್ಲ. ಇಂದು ಭಾರತದಲ್ಲಿ ಸರಕಾರಿ ದಾಖಲೆಗಳ ಪ್ರಕಾರ 'ಹಿಂದೂ' ಎಂದು ಕರೆಯಲಾಗುವ 'ಬಹುಸಂಖ್ಯಾತ' (?) ವರ್ಗದಲ್ಲಿರುವ ವಿವಿಧ ಜಾತಿಗಳ ನಡುವೆ ಇರುವ ಒಂದೇ ಒಂದು ಸಮಾನ ಅಂಶವೆಂದರೆ 'ಸೃಷ್ಟಿಕರ್ತ'ನಿಗೂ 'ಸೃಷ್ಟಿ'ಗೂ ನೀಡುವ ಸಮಾನ ಆದ್ಯತೆ.

ಎಲ್ಲ ಧರ್ಮಗಳೂ ಪುರಾಣಗಳನ್ನು ಸೃಷ್ಟಿಸುತ್ತವೆ. ಆದರೆ ಭಾರತೀಯ ಪರಂಪರೆಯಲ್ಲಿ ಅದು ಹೆಚ್ಚು. ಬೌದ್ಧರು, ಜೈನರು ತಮ್ಮ ಹಿಂದಿನ ಪುರಾಣಗಳ ಮಾದರಿಯಲ್ಲಿ ಪುರಾಣಗಳನ್ನು ಸೃಷ್ಟಿಸಿದರು. ಇಂದಿಗೂ ವಿವಿಧ ಕ್ಷೇತ್ರಗಳ ಪುರಾಣಗಳು ಸೃಷ್ಟಿಯಾಗುತ್ತಿವೆ. ಎಲ್ಲ ವರ್ಗದ ಜನರೂ ಇಲ್ಲಿ ಪುರಾಣಗಳನ್ನು ಸೃಷ್ಟಿಸಬಲ್ಲರು. ಪುರಾಣಸೃಷ್ಟಿಯ ಉದ್ದೇಶ ಏನೇ ಇರಲಿ, ಬಹುಮುಖಿ ಸ್ವರೂಪದ ಆರಾಧನೆಗೂ ಪುರಾಣಗಳಿಗೂ ನೇರ ಸಂಬಂಧವಿದೆ. ಧರ್ಮದ ಹಿಡಿತ ಬಿಗಿಯಾಗದಂತೆ ಈ ಬಹುಮುಖಿ ಸ್ವರೂಪವು ತಡೆಯುತ್ತದೆ. 'ಹಿಂದೂ' ಧರ್ಮಕ್ಕೆ ಪ್ರವಾದಿಯಿಲ್ಲ ಎಂಬುದಷ್ಟೇ ಅಲ್ಲ, ತನ್ನ ಹುಟ್ಟಿಗೆ ಕಾರಣವಾದ ಬೋಧಕನ ಬೋಧನೆಗಳನ್ನು ಮೀರುವುದು ಮತ್ತು ಅದರಿಂದ ಬಿಡಿಸಿಕೊಳ್ಳುವುದೂ ಕೂಡ ಭಾರತೀಯ ಮೂಲದ ಧರ್ಮಗಳ ಮಟ್ಟಿಗೆ ಹೆಚ್ಚು ಮುಖ್ಯವಾದ ಸಂಗತಿ. ಇದು ಬೌದ್ಧ, ಜೈನ

ಹಾಗೂ ವೀರಶೈವ ಧರ್ಮಗಳ ವಿಷಯದಲ್ಲಿಯೂ ಸತ್ಯ. ಆದರಿಂದ ಒಳ್ಳೆಯದೇ, ಕೆಟ್ಟದ್ದೇ ಎಂಬುದು ಬೇರೆಯೇ ಚರ್ಚೆ. ಆದರೆ ಕಾಲದ ಅಗತ್ಯಕ್ಕೆ ತಕ್ಕಂತೆ ಬದಲಾವಣೆ ಗೊಳ್ಳಲು ಭಾರತೀಯ ಮೂಲದ ಧರ್ಮಗಳು ಹೆಚ್ಚು ಸಿದ್ಧ ಮತ್ತು ಸನ್ನದ್ಧವಾಗಿರುತ್ತವೆ.

ಮತಾಂತರದ ಹಿಂದೆ ಇರುವ ಮನಸ್ಸು 'ಎಲ್ಲರೂ ನನ್ನಂತಾಗಬೇಕು' ಎಂಬ ಮನಸ್ಸು. ಭಾರತೀಯ ಪರಂಪರೆಯಲ್ಲಿ ಇರುವುದು 'ನಾನು ನಿನ್ನಂತಾಗಲು ಸಿದ್ಧ' ಎಂಬ ಗ್ರಹಿಕೆ. ಹುಟ್ಟಿನಿಂದ ಬ್ರಾಹ್ಮಣರಾದವರಲ್ಲಿ ಅನೇಕರು ಮದ್ಯ, ಮಾಂಸ ಸೇವಿಸುವುದರ ಬಗ್ಗೆ ಬಹಿರಂಗವಾಗಿ ಹೇಳಿಕೊಳ್ಳುವುದಾಗಲಿ, ಶೂದ್ರರು ವೈದಿಕ ಆಚರಣೆಗಳನ್ನು ರೂಢಿಸಿ ಕೊಳ್ಳುತ್ತಿರುವುದಾಗಲೀ, ಕೊನೆಗೆ ಮತಾಂತರಗೊಳ್ಳುವುದಾಗಲೀ ಈ ಹಿನ್ನೆಲೆಯಲ್ಲಿಯೆ ಗ್ರಹಿಸಬೇಕಾದ ಸಂಗತಿಗಳು. ಅನುಕರಣೆಯೊ, ಅನಿವಾರ್ಯತೆಯೋ ಗೊತ್ತಿಲ್ಲ. ಭಾರತೀಯ ಮೂಲದ ಧರ್ಮಗಳು ಇತರರನ್ನು ಅನುಸರಿಸಿದ್ದು ಜಾಸ್ತಿ. ಇದನ್ನು ಪ್ರತಿಕ್ರಿಯೆ ಎಂದೂ ಕರೆಯಬಹುದು. ಜಾತ್ರೆಗಳಿಗಿಂತ ಭಿನ್ನವಾಗಿ, ಇಂದು ಭಜನೆ ಮುಂತಾದವುಗಳ ಮೂಲಕ ಧರ್ಮದ ನೆಲೆಯಲ್ಲಿ ವಾರಕ್ಕೊಮ್ಮೆ ಸೇರಿ 'ಸಾಮೂಹಿಕ ಪ್ರಾರ್ಥನೆ' ಮಾಡು ತ್ತಾರಾದರೆ, ಅದಕ್ಕೆ ಮುಖ್ಯ ಪ್ರೇರಣೆ ಶುಕ್ರವಾರಗಳು ಮತ್ತು ರವಿವಾರಗಳೇ ಆಗಿವೆ.

ಮತಾಂತರ ವಿಷಯಕ್ಕೆ ಬಂದರೆ, ಭಾರತದಲ್ಲಿ ಹಲವು ರೀತಿಗಳ ಮತಾಂತರಗಳ ಚರಿತ್ರೆಯಿದೆ. ಬೌದ್ಧ ಧರ್ಮವನ್ನು ಒಂದು ಕಾಲದಲ್ಲಿ ಜನರು ವ್ಯಾಪಕವಾಗಿ ಸ್ವೀಕರಿಸಿದರು. ಅದೇ ರೀತಿ ಜೈನ ಧರ್ಮವನ್ನು ಸ್ವೀಕರಿಸಿದರು. ಅವರೆಲ್ಲರೂ ಜಾತಿ ಪದ್ಧತಿಯಲ್ಲಿ ಶೋಷಣೆಗೆ ಒಳಗಾದವರೇನಲ್ಲ. ಬೌದ್ಧ ಧರ್ಮದ ದೊಡ್ಡ ದೊಡ್ಡ ತತ್ತ್ವಜ್ಞಾನಿಗಳಲ್ಲಿ ಮೇಲು ಜಾತಿಯಿಂದ ಬಂದವರಿದ್ದರು. ಆದಿಕವಿ ಪಂಪನ ತಂದೆ ಜೈನಧರ್ಮ ಮತಕ್ಕೆ ಮತಾಂತರಗೊಂಡಿದ್ದ ಬ್ರಾಹ್ಮಣ. ಹಾಗೆಂದು ಪಂಪನಿಗೆ ವೈದಿಕ ಪುರಾಣ ತಿರಸ್ಕಾರಯೋಗ್ಯ ಎನಿಸಲಿಲ್ಲ. 'ಮತಾಂತರಿಯ ಆವೇಶ'ವೂ ಅವನಲ್ಲಿಲ್ಲ. ಅನಂತರದ ಕಾಲಘಟ್ಟದಲ್ಲಿ ಬಸವಣ್ಣನವರ ಚಳುವಳಿಯಿಂದಾಗಿ ಬೇರೆ ಬೇರೆ ಜಾತಿಗಳಿಗೆ ಸೇರಿದ್ದವರು ತಮ್ಮದೇ ಆದ ವೀರಶೈವ-ಲಿಂಗಾಯತ ಧರ್ಮ ಅಥವಾ ಮತವನ್ನು ಕಟ್ಟಿಕೊಂಡರು. ಇವೆಲ್ಲವೂ ಒಂದೊಂದು ಬಗೆಯಲ್ಲಿ ಮತಾಂತರಗಳೇ ಹೌದು. ಆದರೆ, ಅವೆಲ್ಲ ಮುಗಿದ ಅಧ್ಯಾಯ ಗಳು. ವರ್ತಮಾನ ಕಾಲದಲ್ಲಿ ಮತ್ತೆ ಮತ್ತೆ ಚರ್ಚೆಗೆ ಬರುತ್ತಿರುವ ಮತಾಂತರಗಳೆಂದರೆ, ಮಧ್ಯಯುಗದ ಮುಸ್ಲಿಂ ದೊರೆಗಳ ಕಾಲದಲ್ಲಿ ನಡೆದ ಮತಾಂತರಗಳು ಹಾಗೂ ಮಿಷನರಿ ಗಳು ಬಂದ ನಂತರ ನಡೆದ ಮತಾಂತರಗಳು. ಇವು ಮುಗಿದ ಅಧ್ಯಾಯಗಳಲ್ಲ. ಹಲವು ಇತಿಹಾಸಜ್ಞರು ತಪ್ಪಾಗಿ ಭಾವಿಸುವುದು ಹೇಗೆ ಎಂದರೆ ಇತಿಹಾಸವನ್ನು ಕುರಿತ ನಮ್ಮ ಗ್ರಹಿಕೆ ಸರಿಯಾದರೆ-ಸೌಹಾರ್ದವಾದರೆ ವರ್ತಮಾನದ ಕುರಿತ ನಮ್ಮ ಗ್ರಹಿಕೆ ಸರಿಯಾಗು ತ್ತದೆ-ಸೌಹಾರ್ದವಾಗುತ್ತದೆ ಎಂಬುದಾಗಿ. ವಾಸ್ತವ ಅದಲ್ಲ. ನಾವು ವರ್ತಮಾನವನ್ನು ಹೇಗೆ ಗ್ರಹಿಸುತ್ತೇವೆ ಎಂಬುದರ ಮೇಲೆ ನಮ್ಮ ಇತಿಹಾಸದ ಗ್ರಹಿಕೆ ಇರುತ್ತದೆ. ಎಡಪಂಥೀ ಯರ ಚಿಂತನೆಯು ಬಹಳ ಬಾರಿ ವರ್ತಮಾನದ ಸಂಘರ್ಷಕ್ಕೆ ಪೂರಕವಾಗುವಂತಿದ್ದು,

ಇತಿಹಾಸದ ಬಗೆಗಿನ ಸೌಹಾರ್ದಕ್ಕೆ ಕರೆ ಕೊಡುತ್ತಿರುತ್ತದೆ. ಮುಸ್ಲಿಂ ದೊರೆಗಳ ಕಾಲದಲ್ಲಿ ಮತಾಂತರಗೊಂಡವರಲ್ಲಿ ಕೆಳಜಾತಿಯವರು ಮಾತ್ರ ಇದ್ದುದಲ್ಲ. 'Asrafs' ಎಂದರೆ ಮೇಲುವರ್ಗಗಳಿಂದ ಇಸ್ಲಾಮಿಗೆ ಬಂದವರಂತೆ. ಅಧಿಕಾರದ ಆಸೆ, ಭಯ ಇತ್ಯಾದಿ ಕಾರಣಗಳು ಇದ್ದಿರಬಹುದು. ಹರ್ಬನ್ಸ್ ಮುಖಿಯ ಮೊದಲಾದ ವಿದ್ವಾಂಸರ ಪ್ರಕಾರ, ಮಧ್ಯಯುಗದಲ್ಲಿ ನಡೆದ ಮತಾಂತರಗಳು ಧಾರ್ಮಿಕ ಕಾರಣಗಳಿಗಿಂತ ಹೆಚ್ಚಾಗಿ ರಾಜಕೀಯ ಇತ್ಯಾದಿ ಕಾರಣಗಳಿಂದಾಗಿ ಆದವುಗಳು. ಇಂತಹ ವಿದ್ವಾಂಸರ ಮಾತಿನಲ್ಲಿ ಅವರಿಗೆ ಅರಿವಿಲ್ಲದೆಯೇ ಹೊರಡುವ ಧ್ವನಿ ಎಂದರೆ, ರಾಜಕೀಯ-ಆರ್ಥಿಕ ಕಾರಣಗಳಿಗಾಗಿ ಧರ್ಮವನ್ನು ಬಳಸಿಕೊಳ್ಳುವುದು ಅಥವಾ ಅನ್ಯಧರ್ಮೀಯರ ಮೇಲೆ ಧಾರ್ಮಿಕ ನಿಯಂತ್ರಣ, ನಿರ್ಬಂಧಗಳನ್ನು ಹೇರುವುದೆಂದರೆ, ಧಾರ್ಮಿಕ ಕಾರಣಕ್ಕಾಗಿ ಹಾಗೆ ಮಾಡುವುದಕ್ಕಿಂತ ಕಡಿಮೆ ಕೆಟ್ಟದ್ದು ಎಂಬುದು! ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡವರನ್ನು ಮಾತ್ರ ಧರ್ಮಕ್ಕೆ ಮರಳಿದವರು ಎಂದು ಕರೆಯುವ ಧಾರ್ಮಿಕ ನಾಯಕರೂ ಇದ್ದಾರೆ. (Convert ಎನ್ನುವ ಬದಲು Revert ಎನ್ನುತ್ತಾರೆ.)

ಇದನ್ನೆಲ್ಲಾ ಗಮನಿಸಿದಾಗ, ತಮ್ಮ ಮುಂದೆ ಬಹು ಆಯ್ಕೆಗಳು ಇದ್ದರೂ ಅಂಬೇಡ್ಕರರು ಬೌದ್ಧ ಧರ್ಮವನ್ನೇ ಯಾಕೆ ಆರಿಸಿದರು ಎಂಬುದು ಸ್ಪಷ್ಟವಾಗುತ್ತದೆ. ಅಂಬೇಡ್ಕರರಿಗೆ ಬ್ರಾಹ್ಮಣಧರ್ಮವೂ ಸೇರಿದಂತೆ ವಿವಿಧ ಧರ್ಮಗಳ ಚರಿತ್ರೆ ಮತ್ತು ವರ್ತಮಾನಗಳ ಕುರಿತು ಆಳವಾದ ಅರಿವಿತ್ತು. ಧರ್ಮಗಳ ಬಗೆಗಿನ ಅವರ ತಿಳಿವಳಿಕೆ (ಗಾಂಧೀಜಿಯವರಷ್ಟು) ಮುಗ್ಧವಾದುದಾಗಿರಲಿಲ್ಲ. ದೇಶದ ವಿಭಜನೆಯಿಂದ ಮಾತ್ರ ಹಿಂದೂಗಳಿಗೆ ಬಿಡುಗಡೆ ಮತ್ತು ನಿಜವಾದ ಸ್ವಾತಂತ್ರ್ಯ ಸಿಗಬಲ್ಲುದು ಎಂದು ಅಂಬೇಡ್ಕರ್ ಹೇಳಿದ್ದರು.

ತನ್ನ ಧರ್ಮ ಮತ್ತು ಇನ್ನೊಂದು ಧರ್ಮ ಇವೆರಡರ ಬಗ್ಗೆಯೂ ಅರಿವು ಇದ್ದು ಆಗುವ ಮತಾಂತರ ಬೇರೆ. ಇನ್ನೊಬ್ಬರ ಮನವೊಲಿಕೆ, ಆಮಿಷಗಳಿಂದ ಆಗುವ ಮತಾಂತರ ಬೇರೆ. ಅಂಬೇಡ್ಕರರದು ಅರಿವಿನ ಮತಾಂತರ. ಈಚಿನ ದಿನಗಳಲ್ಲಿ ದಲಿತ ಸಂಘಟನೆಗಳ ನೇತೃತ್ವದಲ್ಲಿ ಬೌದ್ಧಧರ್ಮಕ್ಕೆ ಆಗುತ್ತಿರುವ ಮತಾಂತರ ಕೂಡ ಸಾಕಷ್ಟು ಅರಿವಿನಿಂದಲೇ ಆಗುತ್ತಿರುವುದೆಂದು ಅನಿಸುತ್ತದೆ. ಆದರೆ ಈಶಾನ್ಯ ರಾಜ್ಯಗಳಲ್ಲಿ ನಡೆಯುತ್ತಿರುವ ಮತಾಂತರದ ಬಗ್ಗೆ ಬೇರೆಯೇ ವ್ಯಾಖ್ಯಾನ ಬೇಕಾಗುತ್ತದೆ. ಕ್ರೈಸ್ತ ಮಿಷನರಿಗಳು ಈ ದೇಶಕ್ಕೆ ಅನೇಕ ಕೊಡುಗೆಗಳನ್ನು ನೀಡಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಛತ್ತೀಸ್-ಗಢ ಬಗ್ಗೆ ಒಂದು ಲೇಖನ ಪ್ರಕಟವಾಗಿದೆ. (ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಜನವರಿ 12-18, 2008) ಹಿಂದೂ ಸಂಘಟನೆಗಳು ಹೇಗೆ ಕೋಮುದ್ವೇಷವನ್ನು ಹರಡುತ್ತವೆ ಎಂಬುದನ್ನು ವಿವರಿಸುವ ಲೇಖನ ಇದು. ಆದರೆ ಅದರ ಜತೆಗೇ ಅದು ಕೆಲವು ಮಾರ್ಮಿಕ ವಾಸ್ತವಗಳನ್ನು ತೆರೆದಿಡುತ್ತದೆ. ಅಲ್ಲಿ 170 ಬಿ-ಕಂದಾಯ ಕಾಯ್ದೆಯ ಅಡಿಯಲ್ಲಿ ಬುಡಕಟ್ಟುಗಳಿಗೆ ಸೇರಿದ ಭೂಮಿಯನ್ನು ಇತರರಿಗೆ ಮಾರಾಟ ಮಾಡುವಂತಿಲ್ಲ.

ಆದರೆ ಚರ್ಚಿಗೆ ಸೇರಿದ ಭೂಮಿಯಲ್ಲಿ ಬಹುಪಾಲು ನೋಂದಾವಣೆಯಾಗಿರುವುದು ಬುಡಕಟ್ಟಿನಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಧರ್ಮ ಗುರುಗಳ ಹೆಸರಿನಲ್ಲಿ ಅಥವಾ ಕ್ರೈಸ್ತ ಸಂನ್ಯಾಸಿನಿಯರ ಹೆಸರಿನಲ್ಲಿ. ಈಚಿನ ಅಂಕಿ-ಅಂಶಗಳ ಪ್ರಕಾರ, ಈ ರೀತಿ ಚರ್ಚಿಗೆ ಸೇರಿದ 170 ಬಿ ಅಡಿಯಲ್ಲಿ ಬರುವ ಜಮೀನಿನ ಸಂಬಂಧವಾಗಿ 253 ವ್ಯಾಜ್ಯಗಳನ್ನು ದಾಖಲಿಸಲಾಗಿದೆಯಂತೆ. ಬುಡಕಟ್ಟುಗಳಿಗೇ ಮೀಸಲಾದ ಭೂಮಿಯನ್ನು ಹೀಗೆ ತಮ್ಮ ಧಾರ್ಮಿಕ ಚಟುವಟಿಕೆಗಳಿಗೆ ಬಳಸಿಕೊಳ್ಳುವ ಕ್ರಮ (ತಾಂತ್ರಿಕವಾಗಿ ಕಾನೂನು ಬದ್ಧವಾಗಿರಬಹುದಾದರೂ) ಕಾನೂನಿನ ಆಶಯಕ್ಕೇ ವಿರುದ್ಧವಾದುದು. ಇಂತಹ ಚಟುವಟಿಕೆಗಳನ್ನು ಹಿಂದೂಪರ ಸಂಘಟನೆಗಳೂ ಈಶಾನ್ಯ ರಾಜ್ಯಗಳಲ್ಲಿ ಮಾಡುತ್ತಿರ ಬಹುದು. ಆದರೆ, ಅದನ್ನು ಟೀಕಿಸುವಾಗ ಕ್ರೈಸ್ತ ಮಿಷನರಿಗಳ ಚಟುವಟಿಕೆಯನ್ನು ಗಮನಿಸು ವುದು ಬುದ್ಧಿಜೀವಿಗಳ ಕರ್ತವ್ಯವಾಗುತ್ತದೆ.

ವಾಸ್ತವವಾಗಿ ಸ್ವಇಚ್ಛೆಯ, ಅರಿವಿನ ಮತಾಂತರವನ್ನು ತಡೆಯಲಾಗದು, ತಡೆಯಬಾರದು. ಆದರೆ ನಿಜವಾಗಿ 'ಬಹುಸಂಖ್ಯಾತ' ಎಂಬುದೊಂದು ಸಮುದಾಯವೇ ಇಲ್ಲದ, ಸೆಕ್ಯುಲರ್ ಭಾರತದಲ್ಲಿ ಸರಕಾರಿ ಸವಲತ್ತುಗಳಿಗೆ ಸಂಬಂಧಿಸಿದಂತೆ, ಅತ್ಯಂತ ಅವೈಜ್ಞಾನಿಕ ರೀತಿಯಲ್ಲಿ, ಧಾರ್ಮಿಕ ನೆಲೆಯಲ್ಲಿ ಜನರನ್ನು ಅಲ್ಪಸಂಖ್ಯಾತ-ಬಹುಸಂಖ್ಯಾತ ಎಂದು ವಿಭಾಗ ಮಾಡುವಾಗ 'ಮತಾಂತರ' ಕೂಡ ಮಹತ್ವ ಪಡೆದುಕೊಳ್ಳುತ್ತದೆ. ಯಾಕೆಂದರೆ, ಚುನಾವಣಾ ರಾಜಕೀಯದಲ್ಲಿ ನಿರ್ಣಾಯಕ 'ಸಂಖ್ಯಾಬಲ' ಹೊಂದಿರುವ ವರೇ ಇಲ್ಲಿ 'ಅಲ್ಪಸಂಖ್ಯಾತ'ರಾಗುವುದು ತಾನೇ? ಧರ್ಮ, ದೇವರು ಎಂಬುದು ಖಾಸಗಿ; ಬೀದಿಗೆ ಬರಬಾರದು ಎಂದೆಲ್ಲಾ ಹೇಳುವುದು ಸರಿ. ಆದರೆ ಖಾಸಗಿಯಾಗಿರಬೇಕಾದ ಧರ್ಮವನ್ನು ವಿಧಾನಸಭೆ, ಸಂಸತ್‌ಗೂ ತಂದು ಸರಕಾರಿ ನೀತಿ ನಿರೂಪಣೆಗಳೂ ಧರ್ಮಾ-ಧಾರಿತವಾದಾಗ ಸಮಸ್ಯೆ ಉಂಟಾಗುತ್ತದೆ. ನಿಜವಾಗಿ ಸರಕಾರ ಯಾವುದೇ ಸವಲತ್ತು ನೀಡುವಾಗ ಮಾಡಬೇಕಾದ ವರ್ಗೀಕರಣವು ಆರ್ಥಿಕ ಆಧಾರದಲ್ಲಿ ಮುಂದುವರಿದವರು-ಹಿಂದುಳಿದವರು ಎಂಬ ನೆಲೆಯಲ್ಲಷ್ಟೇ ಇರಬೇಕು. ಯಾಕೆಂದರೆ, ಈ ವರ್ಗೀಕರಣವೊಂದೇ ಅಶಾಶ್ವತವಾದುದು. ಇಲ್ಲಿ ಇಂದು ಕೆಳಗಿರುವವನು ನಾಳೆ ಕೆನೆಪದರಕ್ಕೆ ಬರಬಲ್ಲ. ಆದರೆ, ಅಶಾಶ್ವತ ವರ್ಗೀಕರಣವು ವೋಟ್‌ಬ್ಯಾಂಕನ್ನು ನಿರ್ಮಿಸಲಾರದು! ರಾಜಕಾರಣಿಗಳಿಗೆ ಬಗೆಬಗೆಯ ವೋಟ್‌ಬ್ಯಾಂಕುಗಳು ಬೇಕು. ಬುದ್ಧಿಜೀವಿಗಳಿಗೆ ಯಾಕೆ ಬೇಕೆಂದು ಗೊತ್ತಾಗುವುದಿಲ್ಲ.

ಜಾಗತಿಕ ನೆಲೆಯ ಧರ್ಮಗಳಾದ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳ ಬಗ್ಗೆ ಕೇವಲ ಭಾರತವನ್ನಷ್ಟೇ ನೆಲೆಯಾಗುಳ್ಳ (ಏಕರೂಪದಲ್ಲಿ ರೂಪುಗೊಳ್ಳುತ್ತಿರುವ) ಹಿಂದೂ ಧರ್ಮಕ್ಕೆ ಭಯವುಂಟಾಗುವ ಸನ್ನಿವೇಶ ನಿರ್ಮಾಣವಾದರೆ ಅಚ್ಚರಿಯಿಲ್ಲ. ನಿಜವಾಗಿ ಭಯ ಪಡ ಬೇಕಾದ ಪರಿಸ್ಥಿತಿ ಇದೆಯೇ ಇಲ್ಲವೇ ಎಂಬುದು ಬೇರೆ ಪ್ರಶ್ನೆ. ಭಾರತದಲ್ಲಿ ಮುಸ್ಲಿಮರು ಅಲ್ಪಸಂಖ್ಯಾತರಾದುದರಿಂದ ಅವರಿಗೆ ಅಭದ್ರತೆಯ ಭಾವನೆಯಿದೆ. ಆದರಿಂದ ಅವರು

ಹೆಚ್ಚು ಹೆಚ್ಚು ಕೋಮುವಾದಿಗಳೂ ಮೂಲಭೂತವಾದಿಗಳೂ ಆದರೆ ಅದು ಸಹಜ ಎಂದು ಹೇಳುವವರು ಹಿಂದುತ್ವವಾದಿಗಳ ಅಭದ್ರತೆಯ ಭಾವನೆಯನ್ನೂ ಒಪ್ಪ ಬೇಕಾಗುತ್ತದೆ. ಹಿಂದುಗಳು ಏಕರೂಪೀಕರಣದತ್ತ ಹೋಗುವುದನ್ನು ಹೀಗೆ ಅರ್ಥ ಮಾಡಿ ಕೊಳ್ಳಬೇಕಾಗುತ್ತದೆ.

ಹಿಂದೂ ಧರ್ಮದಲ್ಲಿರುವ ದೌರ್ಬಲ್ಯ-ದೋಷಗಳಿಂದಲೇ ಮತಾಂತರವಾಗುತ್ತದೆ ಎಂದು ಹಲವರು ವಾದಿಸುತ್ತಾರೆ. ಅದು ತಪ್ಪೆನ್ನುವಂತಿಲ್ಲ. ಆದರೆ ಅದೇ ಕಾರಣಕ್ಕೆ ಮತಾಂತರವು ಸ್ವಾಗತಾರ್ಹ ಎಂದು ಹೇಳುವವರು ಮತ್ತೆ ಕೆಲವು ಪ್ರಶ್ನೆಗಳನ್ನು ಕೇಳಿಕೊಳ್ಳ ಬೇಕಾಗುತ್ತದೆ. ಮೊದಲನೆಯದಾಗಿ ಹೀಗೆ ವಾದಿಸುವವರು ಪರೋಕ್ಷವಾಗಿ ಡಾರ್ವಿನ್ನನ Survival of the fittest ಸಿದ್ಧಾಂತವನ್ನು ನಂಬಿದವರು. ಇದನ್ನು ಅನ್ವಯಿಸಿದರೆ ತೊಡಕಾಗುತ್ತದೆ. ವಸಾಹತುಶಾಹಿಯ ವಿಸ್ತರಣೆಯ ಮೂಲದಲ್ಲಿ ಇದ್ದುದು ಇದೇ ಡಾರ್ವಿನ್ನನ ಸಿದ್ಧಾಂತವನ್ನು ಸಮಾಜ-ಸಂಸ್ಕೃತಿಗಳಿಗೆ ಅನ್ವಯಿಸಿದ ಜಾಣ್ಮೆ. ಬ್ರಾಹ್ಮಣ್ಯದ ಯಾಜಮಾನ್ಯ, ಇತರ ಜಾತಿಗಳ ದೌರ್ಬಲ್ಯದಿಂದಾಗಿ ಆದುದು; ಹಾಗಾಗಿ ಅದು ಮುಂದು ವರಿಯಲಿ ಎಂದರೆ ಹೇಗಾದೀತು? ಎಲ್ಲ ರೀತಿಯ ಏಕರೂಪೀಕರಣವನ್ನು ವಿರೋಧಿಸುವ ವರು ಮತಾಂತರವನ್ನು 'ಏಕರೂಪೀಕರಣ'ದ ವ್ಯಾಪ್ತಿಯಿಂದ ಹೇಗೆ ಹೊರಗಿಡುತ್ತಾರೆ? ಕನ್ನಡ ಭಾಷೆಯ ದೌರ್ಬಲ್ಯದಿಂದ, ಮಿತಿಗಳಿಂದ ಜನರು ಇಂಗ್ಲಿಷ್ ಮಾಧ್ಯಮಕ್ಕೆ ಹೋಗುತ್ತಿದ್ದಾರೆ, ಇದು ಸ್ವಾಗತಾರ್ಹ ಎಂದೇಕೆ ಹೇಳುವುದಿಲ್ಲ?

ಸಮಸ್ಯೆಗಳಿಗೆ ಪರಿಹಾರ ಅಷ್ಟು ಸರಳವಾದುದಲ್ಲ ಎಂಬುದನ್ನು ಕಾರಂತರ 'ಚೋಮನ ದುಡಿ' ಅಂದೇ ತೋರಿಸಿಕೊಟ್ಟಿದೆ. ಮುಖ್ಯವಾಗಿ ನಾವಿಂದು ಸಮಸ್ಯೆಗಳ ಆಳಕ್ಕಿಳಿಯದೆ ಮೇಲು ಮೇಲಿನ ಪರಿಹಾರದ ಕುರಿತು ಮಾತನಾಡುತ್ತಿದ್ದೇವೆ. ಸಿದ್ಧಾಂತ ಗಳನ್ನು ಅನ್ವಯಿಸುವಾಗ 'ಪೊಲಿಟಿಕಲಿ ಕರೆಕ್ಟ್' ಆಗಿರಲು ಯತ್ನಿಸುತ್ತೇವೆ. ದ್ವಿಮುಖ ನೀತಿಯು ಸಮಸ್ಯೆಗಳು ಬಿಗಡಾಯಿಸಲು ಕಾರಣವಾಗುತ್ತದೆ. ಚರ್ಚೆ ಹುಟ್ಟುಹಾಕಿದ ಭೈರಪ್ಪನವರಿಗೆ ವಂದನೆಗಳು. *(ಇಲ್ಲಿ ಹೇಳಿದ ಮಾತುಗಳಿಗೆ ಸಾಕಷ್ಟು ಗ್ರಂಥಾಧಾರಗಳಿವೆ. ಆಸಕ್ತರು ನನ್ನ 'ಬುದ್ಧಿಜೀವಿ ವರ್ಸಸ್ ಬೌದ್ಧಿಕ ಸ್ವಾತಂತ್ರ್ಯ' ಕೃತಿಯನ್ನು ನೋಡಬಹುದು.)*



# ಇಡೀ ದೇಶಕ್ಕೆ ಅನ್ವಯಿಸುವ ಮತಾಂತರ ನಿಷೇಧ ಕಾನೂನು ಇಲ್ಲ !

*- ಪಿ.ಪಿ. ಹೆಗ್ಡೆ*

---

ಒಬ್ಬ ಬಡತನದಲ್ಲಿರುತ್ತಾನೆ. ಮತ್ತೊಬ್ಬನಿಗೆ ಚಿಕಿತ್ಸೆಗೆ ಹಣ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಅವರಿಗೆ ಸಹಾಯ ಮಾಡಬೇಕು ಎಂದು ಒಬ್ಬರಿಗೆ ಮನಸ್ಸಾಗುತ್ತದೆ. ಆ ವ್ಯಕ್ತಿ ಹಣ, ಆಸ್ಪತ್ರೆ ಖರ್ಚು ಎಲ್ಲ ನೋಡ್ತಾರೆ, ಆದರೆ ಒಂದು ಮಾತು ಹೇಳ್ತಾರೆ 'ಎಲ್ಲ ಮಾಡ್ತೀನಿ, ಹಣ ತೆಗೆದುಕೊಂಡ ಮೇಲೆ ನಮಗೆ ಒಂದು ಸಹಾಯ ಮಾಡಬೇಕು, ನಮ್ಮ ದೇವರನ್ನು ನಂಬಬೇಕು, ಆಮೇಲೆ ನಮ್ಮ ಧರ್ಮಕ್ಕೆ ಸೇರಬೇಕು ಅಷ್ಟೇ!' ಆದರೆ ಇಲ್ಲಿ ಪ್ರಶ್ನೆ ಏನೆಂದರೆ ಇದು ಸರಿಯೇ, ತಪ್ಪೇ ಎನ್ನುವುದು. ಇದಕ್ಕೆ ಎರಡು ಮುಖದ ಉತ್ತರಗಳಿವೆ.

'ನಿಮ್ಮ ಧರ್ಮದವರಿಗೆ ನೀವು ಸಹಾಯ ಮಾಡಿಲ್ಲ. ಅವರೇನೊ ಪುಣ್ಯಾತ್ಮರು ಧನಸಹಾಯ ಮಾಡಿದ್ದಾರೆ. ಹಾಗಾಗಿ ಧರ್ಮಕ್ಕೆ ಬಾ ಅಂತ ಹೇಳ್ತಾರೆ, ಅದರಲ್ಲಿ ತಪ್ಪೇನು?' ಎನ್ನುವುದು ಕೆಲವರ ವಾದ. ವೈಚಾರಿಕ ನೆಲೆಯಲ್ಲಿ ನೋಡುವುದಾದರೆ ಬಡತನ ದುರುಪಯೋಗಪಡಿಸಿ ತಮ್ಮ ಧರ್ಮಕ್ಕೆ ಬಾ ಎಂದು ಹೇಳುವುದು ತಪ್ಪು ಎನ್ನುವುದು ಇನ್ನೂ ಕೆಲವರ ವಾದ. ಸಿದ್ಧಾಂತ ಬದಿಗಿಟ್ಟು, ನ್ಯಾಯವಾದಿಯಾಗಿ ಏನು ಹೇಳ್ತೀರಿ? ಕಾನೂನು ಏನು ಹೇಳುತ್ತದೆ ಎಂಬ ಪ್ರಶ್ನೆಯನ್ನು ನನ್ನಲ್ಲಿ ಒಬ್ಬರು ಕೇಳಿದ್ದರು. ಆಗ ಮಂಗಳೂರು ಸೇರಿದಂತೆ ರಾಜ್ಯದಲ್ಲಿ ಗಲಭೆಗಳಾಗುತ್ತಿದ್ದವು.

ಅದಕ್ಕೆ ನ್ಯಾಯವಾದಿಯಾಗಿ ನನ್ನ ಉತ್ತರ: 'ಕರ್ನಾಟಕದಲ್ಲಿ ಆಮಿಷ ನೀಡಿ ಮತಾಂತರ ಮಾಡಬಹುದು, ಇದು ಕಾನೂನು ಪ್ರಕಾರ ಸಿಂಧು, ಇದನ್ನು ನಿಷೇಧಿಸಲು ಯಾವುದೇ ಸೆಕ್ಷನ್ ಇಲ್ಲ. ಹೀಗಾಗಿ ಪೊಲೀಸರು ಯಾವುದೇ ಕ್ರಮ ಕೈಗೊಳ್ಳಲು ಸಾಧ್ಯವಿಲ್ಲ.' ಇದನ್ನು ಕೇಳಿ ಪ್ರಶ್ನೆ ಕೇಳಿದವರು ದಂಗಾಗಿ ಬಿಟ್ಟರು. ಅವರ ಆರೋಪ ಏನೆಂದರೆ 'ಆಮಿಷ ನೀಡಿ ಮತಾಂತರ ಮಾಡಿದರೂ ವಕೀಲರು ಸರಿ ಎನ್ನುತ್ತಿದ್ದಾರಲ್ಲ' ಎನ್ನುವುದು.

ಕರ್ನಾಟಕದಲ್ಲಿ ಇದು ಸಾಧ್ಯ. ಏಕೆಂದರೆ ಇಲ್ಲಿ ಮತಾಂತರ ನಿಷೇಧ ಎಂಬ ಯಾವ ಕಾನೂನೂ ಇಲ್ಲ. ಆದರೆ ಒರಿಸ್ಸಾ (1967), ಮಧ್ಯಪ್ರದೇಶ (1968), ಅರುಣಾಚಲ ಪ್ರದೇಶ (1978), ಗುಜರಾತ್ (2003), ಛತ್ತೀಸ್‌ಗಢ (2003), ರಾಜಸ್ಥಾನ (2005), ಹಿಮಾಚಲ ಪ್ರದೇಶ (2006) ಈ ರಾಜ್ಯಗಳಲ್ಲಿ ಆಮಿಷ, ಪ್ರಲೋಭನೆ ಒಡ್ಡಿ ಮತಾಂತರ ಮಾಡುವ ಹಾಗಿಲ್ಲ. ಮಾಡಿದರೆ ಅದು ಅಪರಾಧ. ಇಲ್ಲಿ ಬಿಟ್ಟು ಬೇರೆ ರಾಜ್ಯಗಳಲ್ಲಿ ಅದು ಅಪರಾಧವಲ್ಲ. (ತಮಿಳುನಾಡಿನಲ್ಲಿ ಜಯಲಲಿತಾ ಸರಕಾರ 2002ರಲ್ಲಿ ಮತಾಂತರ ನಿಷೇಧ ಕಾನೂನು ತಂದಿತು. ಬಳಿಕ ಕರುಣಾನಿಧಿ ಸರಕಾರ ಅಲ್ಪಸಂಖ್ಯಾತರ ಮತಗಳ ಮೇಲೆ ಕಣ್ಣಿಟ್ಟುಕೊಂಡು ಮತಾಂತರ ನಿಷೇಧ ಕಾಯ್ದೆಯನ್ನು ಹಿಂತೆಗೆದುಕೊಂಡಿತು.)

ರಾಜ್ಯದಲ್ಲಿ ಗಲಭೆ ನಡೆಯುತ್ತಿದ್ದ ವೇಳೆ ಮಾಧ್ಯಮದಲ್ಲಿ ಈ ಬಗ್ಗೆ ಚರ್ಚೆ ನಡೆಯುತ್ತಿತ್ತು. ವಿಶ್ವಹಿಂದು ಪರಿಷತ್‌ನವರಿಗೆ ಕಾಂಗ್ರೆಸ್‌ನವರು ಪ್ರಶ್ನೆ ಕೇಳುತ್ತಿದ್ದರು. 'ಚರ್ಚ್‌ನಲ್ಲಿ ಮತಾಂತರ ಆಗುತ್ತಿದ್ದರೆ ಕಾನೂನು ಕೈಗೆತ್ತಿಕೊಳ್ಳಲು ನಿಮಗೆ ಯಾರು ಹೇಳಿದ್ದು, ಪೊಲೀಸರಿಗೆ ತಿಳಿಸಬಹುದಲ್ಲ?' ನಮ್ಮ ರಾಜ್ಯದಲ್ಲಿ ಯಾವುದೇ ಮತಾಂತರ ನಿಷೇಧ ಕಾನೂನು ಇಲ್ಲ! ಹೀಗಾಗಿ ಕರ್ನಾಟಕದಲ್ಲಿ ಕೇಸುಗಳು ಇರುವುದಾದರೂ ಹೇಗೆ? ಅದಕ್ಕಾಗಿಯೇ ಮತಾಂತರ ಬೆಂಬಲಿಗರು 'ಮತಾಂತರ ವಿರುದ್ಧ ಕೇಸು ಎಲ್ಲಿ ದಾಖಲಾಗಿದೆ ಹೇಳಿ' ಎಂದು ಧೈರ್ಯದಿಂದ ಕೇಳುವುದು!

ಕರ್ನಾಟಕದಲ್ಲಿ ಪೊಲೀಸರಿಗೆ ಮತಾಂತರ ತಡೆಯಲು ಕಾನೂನು ಪ್ರಕಾರ ಯಾವುದೇ ಮಾರ್ಗಗಳಿಲ್ಲ. ಭಾರತ ದಂಡ ಸಂಹಿತೆ ಸೆಕ್ಷನ್ 153ಎ ಪ್ರಕಾರ ಕೋಮು ಪ್ರಚೋದನೆ ಮಾಡಿದರೆ ಕೇಸು ದಾಖಲಿಸಬಹುದು. ಸೆಕ್ಷನ್ 295ಎ ಮತ್ತು 298 ಪ್ರಕಾರ 'ಧರ್ಮನಿಂದೆ' ಅಪರಾಧ. ಆಮಿಷದ ಮತಾಂತರವನ್ನು ಶಿಕ್ಷಿಸುವ ಯಾವ ಸೆಕ್ಷನ್ನೂ ಇಲ್ಲ. ಕಾನೂನು ಕೈಗೆ ತೆಗೆದುಕೊಂಡಿರುವವರ ಕೃತ್ಯಗಳನ್ನು ನಾನು ಸಮರ್ಥಿಸುವುದಿಲ್ಲ. ಈ ಬಗ್ಗೆ ಸರಿಯಾದ ಕಾನೂನು ಇಲ್ಲವಾದರೆ ಜನರೇ ಕಾನೂನು ಕೈಗೆ ಎತ್ತಿಕೊಳ್ಳುತ್ತಾರೆ ಎಂಬುದು ಸುಸ್ಪಷ್ಟ. ಇಷ್ಟೆಲ್ಲ ಗೊಂದಲ, ಗಲಭೆಗಳಿಗೆ ಮೂಲ ಕಾರಣ ಮತಾಂತರ ತಡೆಗೆ ಕಾನೂನು ರಚನೆಯಾಗದಿರುವುದು. ಈ ಮೂಲಭೂತ ಕೊರತೆ ಬಗ್ಗೆ ಚಿಂತನೆ ನಡೆಸಲು, ಕಾನೂನು ರಚಿಸಲು ಇದು ಖಂಡಿತ ಸೂಕ್ತ ಕಾಲ. ಇದರಿಂದ ಭವಿಷ್ಯದಲ್ಲಿ ಇಂತಹ ಘಟನೆ ಮರುಕಳಿಸದಂತೆ ಈಗಲೇ ಮುಂಜಾಗ್ರತೆ ವಹಿಸಬಹುದು.

ಹಾಗಾದರೆ ಈ ದೇಶದಲ್ಲಿ ಮತಾಂತರ ಇರಲಿಲ್ಲವೆ ಎಂಬ ಪ್ರಶ್ನೆ ಬರುವುದು ಸಹಜ. ವಾಸ್ತವ ಎಂದರೆ ಬ್ರಿಟಿಷರು, ಮುಸ್ಲಿಂ ದೊರೆಗಳು ಬರುವ ಮುಂಚೆಯೂ ಭಾರತದಲ್ಲಿ ಮತಾಂತರ ನಡೆಯುತ್ತಿತ್ತು. ದೇಶದ ಒಳಗೆ ಒಂದೇ ಸಂಸ್ಕೃತಿಯೊಳಗಿನ ಧರ್ಮದೊಳಗೆ ಅಂದರೆ ಹಿಂದೂ, ಬೌದ್ಧ, ಜೈನ ಧರ್ಮದೊಳಗೆ ಬದಲಾವಣೆ ಮಾಡುವುದು ಸಂಸ್ಕೃತಿಯ ಭಾಗವೇ ಆಗಿತ್ತು. ಎಲ್ಲಿಯೂ ಅನೈತಿಕ ಎಂಬ ಭಾವನೆ ಬಂದಿರಲೇ ಇಲ್ಲ.

ಆದರೆ, ಮುಸ್ಲಿಮರ ಆಕ್ರಮಣದ ಬಳಿಕ ಬಲಾತ್ಕಾರದ ಮತಾಂತರ ವಿಜೃಂಭಿಸಿತು. ಮತಾಂತರ ವಿರೋಧಿಸಿದವರನ್ನು ಶಿಕ್ಷೆಗೆ ಗುರಿಪಡಿಸುವುದು ನಡೆದು ಬಂದವು. ಬ್ರಿಟಿಷ್ ಸಾಮ್ರಾಜ್ಯದ ಭಾರತದಲ್ಲಿನ ಬೇರೆ, ಬೇರೆ ಪ್ರಾಂತಗಳಲ್ಲಿ ಮತಾಂತರ ಪಿಡುಗಿನಿಂದ ಈಗ ಒರಿಸ್ಸಾದಲ್ಲಿ ನಡೆದಂತೆಯೇ ಅಂದೂ ಕೂಡ ಅನೇಕ ದಂಗೆಗಳು ಆದವು. ಆಗ ಮತಾಂತರ ತಡೆಯಬೇಕು ಎನ್ನುವ ಕೂಗು ಕೇಳಿಬಂದವು.

ಪರಿಣಾಮ, ಬಲಾತ್ಕಾರವಾಗಿ ಮತಾಂತರ ನಡೆಸುವುದರ ವಿರುದ್ಧ ಕೆಲ ಪ್ರಾಂತಗಳಲ್ಲಿ ಕಾಯಿದೆ ರಚನೆಯಾಯಿತು. ರಾಯ್‌ಗಢ ರಾಜ್ಯ ಮತಾಂತರ ಕಾಯಿದೆ 1936, ಸರ್ಗುಜ ರಾಜ್ಯ ಸ್ವಧರ್ಮ ತ್ಯಾಗ ನಿಷೇಧ ಕಾಯ್ದೆ-1945, ಉದಯಪುರ ರಾಜ್ಯ ಮತಾಂತರ ನಿಷೇಧ ಕಾಯಿದೆ 1946. ಆದರೆ ಮೈಸೂರು, ಮದ್ರಾಸು, ಮುಂಬೈ, ಹೈದರಾಬಾದ್ ಪ್ರಾಂತಗಳ ಮತಾಂತರ ನಿಷೇಧ ಕಾಯ್ದೆಗಳು ಅಸ್ತಿತ್ವದಲ್ಲಿ ಇರಲಿಲ್ಲ.

1950ರಲ್ಲಿ ರಚನೆಯಾದ ಸ್ವತಂತ್ರ ಭಾರತದ ಸಂವಿಧಾನದ ವಿಧಿ 25ರ ಪ್ರಕಾರ ದೇಶದ ಎಲ್ಲ ಪ್ರಜೆಗಳಿಗೆ ಆತ್ಮಸಾಕ್ಷಿ, ಸ್ವತಂತ್ರ ಧಾರ್ಮಿಕ ಆಚರಣೆ, ನಂಬಿಕೆ ಹಾಗೂ ಪ್ರಚಾರದ ಮೂಲಭೂತ ಹಕ್ಕನ್ನು ಖಚಿತಪಡಿಸಲಾಗಿದೆ. ಸಾರ್ವಜನಿಕ ಸುವ್ಯವಸ್ಥೆ, ನೈತಿಕತೆ, ಆರೋಗ್ಯ ಹಾಗೂ ಇನ್ನಿತರ ಪ್ರತಿಬಂಧಗಳಿಗೊಳಪಟ್ಟು ಈ ಹಕ್ಕನ್ನು ನೀಡಲಾಗಿದೆ.

1954ರಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರು 'ಭಾರತೀಯ ಮತಾಂತರ ನಿಯಂತ್ರಣ ಹಾಗೂ ನೋಂದಣಿ ಮಸೂದೆ' ಅಂಗೀಕಾರಕ್ಕೆ ಲೋಕಸಭೆಯಲ್ಲಿ ಪ್ರಯತ್ನಿಸಿದರು. ಜವಾಹರಲಾಲ್ ನೆಹರೂ ಅವರ ವಿನಂತಿಯಂತೆ ಅದನ್ನು ಕೈಬಿಡಲಾಯಿತು. 1979ರಲ್ಲಿ 'ಧರ್ಮ ಸ್ವಾತಂತ್ರ್ಯ ಮಸೂದೆ' ತರಲು ಪ್ರಯತ್ನಿಸಿತು.

ಮಧ್ಯಪ್ರದೇಶದಲ್ಲಿ 1960ರ ಆಸುಪಾಸಿನಲ್ಲಿ ಕ್ರೈಸ್ತ ಮಿಷನರಿಗಳು ವ್ಯಾಪಕವಾಗಿ ಮತಾಂತರ ನಡೆಸಿದ ಬಗ್ಗೆ ಗಲಭೆ, ದೊಂಬಿಗಳು ನಡೆದವು. ಆಗ ಮಧ್ಯಪ್ರದೇಶದ ಕಾಂಗ್ರೆಸ್ ಸರಕಾರ ದಿಟ್ಟ ಹೆಜ್ಜೆ ಇಟ್ಟು, ಮತಾಂತರಕ್ಕಾಗಿ ವಿದೇಶದಿಂದ ಬರುವ ಹಣ, ಆಮಿಷ ನೀಡಿ ಮತಾಂತರ ಮಾಡುವ ಬಗ್ಗೆ ವರದಿ ಸಲ್ಲಿಸಲು ಆಯೋಗ ನೇಮಿಸಿತು. ಮತಾಂತರ ನಿಷೇಧ ಕಾನೂನು ತರುವುದೇ ಸೂಕ್ತ ಎಂದು ಆಯೋಗ ವರದಿಯಲ್ಲಿ ಅಭಿಪ್ರಾಯಪಟ್ಟಿತು. ಮಧ್ಯಪ್ರದೇಶ ಸರಕಾರ ಕಾನೂನು ತರುವ ಮೊದಲೇ ಈ ಆಯೋಗದ ವರದಿ ಆಧಾರವಾಗಿಟ್ಟುಕೊಂಡು ಒರಿಸ್ಸಾ ಕಾಂಗ್ರೆಸ್ ಸರಕಾರ, ಸ್ವತಂತ್ರ ಭಾರತದಲ್ಲಿ ಪ್ರಥಮ ಬಾರಿಗೆ 1967ರಲ್ಲಿ 'ಒರಿಸ್ಸಾ ಧಾರ್ಮಿಕ ಸ್ವಾತಂತ್ರ್ಯ ಕಾಯಿದೆ' ಜಾರಿಗೆ ತಂದಿತು. ಈ ಕಾಯಿದೆ ಪ್ರಕಾರ 'ಪ್ರತ್ಯೇಕ, ಪರೋಕ್ಷವಾಗಿ ಬಲಪ್ರಯೋಗ, ಆಮಿಷ, ಕುತಂತ್ರ ಮೂಲಕ ಯಾರೂ ಕೂಡ ಯಾರೊಬ್ಬನನ್ನಾಗಲಿ ಮತಾಂತರ ಮಾಡುವುದು, ಅದಕ್ಕೆ ಪ್ರಯತ್ನಿಸುವುದು ಅಪರಾಧ. ಇಂತಹ ಕೃತ್ಯದಲ್ಲಿ ಭಾಗಿಯಾದ ಎಲ್ಲರಿಗೂ 2 ವರ್ಷ ಸಜೆ ವಿಧಿಸುವ ಕಾನೂನು' ಜಾರಿಗೆ ತರಲಾಯಿತು.

'ಧರ್ಮಕ್ಕೆ ಸೇರದಿದ್ದರೆ ದೇವರ ಶಾಪಕ್ಕೆ ಒಳಗಾಗುತ್ತಿ' ಎಂದು ಬೆದರಿಸುವುದು ಅಥವಾ 'ಸಾಮಾಜಿಕ ಬಹಿಷ್ಕಾರದ ಬೆದರಿಕೆ' ಒಡ್ಡುವುದೂ ಕೂಡ 'ಬಲಪ್ರಯೋಗ' ಅರ್ಥವ್ಯಾಪ್ತಿಗೆ ಸೇರಿಸಲಾಗಿದೆ. ಆಮಿಷ ಎಂದರೆ ಆರ್ಥಿಕ ಸೌಲಭ್ಯ ಒದಗಿಸುವುದು, ಉಡುಗೊರೆ, ನಗದು ಅಥವಾ ಇತರ ರೂಪದ ಸಹಾಯ ಎಂಬ ಅರ್ಥ ವಿವರಣೆ ನೀಡಲಾಗಿದೆ.

1968ರಲ್ಲಿ ಮಧ್ಯಪ್ರದೇಶದಲ್ಲಿ ಕಾಂಗ್ರೆಸ್ ಸರಕಾರ ಇನ್ನೂ ಕಠಿಣ ಕಾಯಿದೆಯಾದ ಧರ್ಮ ಸ್ವಾತಂತ್ರ್ಯ ಅಧಿನಿಯಮ ಜಾರಿಗೆ ತಂದಿತು. ಆಮಿಷಕ್ಕಿಂತಲೂ ಹೆಚ್ಚು ಅರ್ಥ ವ್ಯಾಪ್ತಿಯುಳ್ಳ ಪ್ರಲೋಭನೆ ಶಬ್ದವನ್ನು ಸೇರಿಸಿತು. ಯಾವುದೇ ರೀತಿಯ ಪ್ರಲೋಭನೆ ನೀಡಿ ಮತಾಂತರಗೊಳಿಸುವುದನ್ನು ನಿಷೇಧಿಸಿತು. ಯಾವುದೇ ವ್ಯಕ್ತಿ ಮತಾಂತರಕ್ಕೆ ಒಂದು ತಿಂಗಳ ಮೊದಲು, ಲಿಖಿತವಾದ ಸೂಚನೆಯನ್ನು ಜಿಲ್ಲಾಧಿಕಾರಿಗೆ ಕಳುಹಿಸಬೇಕು. ಇದರಲ್ಲಿ ಭಾಗವಹಿಸುವ ಧಾರ್ಮಿಕ ಗುರು ಕೂಡ ಜಿಲ್ಲಾಧಿಕಾರಿಗೆ ವಿವರ ಕಳುಹಿಸಿ ಒಪ್ಪಿಗೆ ಪಡೆಯಬೇಕು. ಒಪ್ಪಿಗೆ ಪಡೆಯದೆ ಸ್ವಇಚ್ಛೆಯಿಂದ ಮತಾಂತರ ಮಾಡಿದರೂ ಬಲಾತ್ಕಾರದ ಮತಾಂತರ ಎಂದು ಪರಿಗಣಿಸಿ ಕಠಿಣ ಶಿಕ್ಷೆಯನ್ನು ಘೋಷಿಸಿದೆ.

ಮಧ್ಯಪ್ರದೇಶದಲ್ಲಿ ಈ ಕಾಯಿದೆಯಡಿಯಲ್ಲಿ ರೆ.ಫಾ. ಸ್ಟೇನಿಸ್ಲಾಸ್ ಎಂಬ ಪಾದ್ರಿಯ ವಿರುದ್ಧ ಮತಾಂತರ ನಡೆಸಿದ್ದಕ್ಕಾಗಿ ಒಂದು ಕ್ರಿಮಿನಲ್ ಕೇಸು ದಾಖಲಾಯಿತು. ಪಾದ್ರಿಯು ಇದನ್ನು ಪ್ರಶ್ನಿಸಿ ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಿದರು. 'ಮತಾಂತರ ಮಾಡುವುದು ಕ್ರೈಸ್ತ ಧರ್ಮದ ಅವಿಭಾಜ್ಯ ಅಂಗವಾಗಿದ್ದು ಅದು ತನ್ನ ಮೂಲಭೂತ ಹಕ್ಕು. ಮತಾಂತರ ನಿಷೇದ ಕಾನೂನು ಜಾರಿಗೆ ತರಲು ರಾಜ್ಯ ಸರಕಾರಕ್ಕೆ ಹಕ್ಕಿಲ್ಲ' ಎಂದು ವಾದ ಮಂಡಿಸಿದರು. ಸರ್ವೋಚ್ಚ ನ್ಯಾಯಾಲಯದ ಪಂಚಪೀಠದ ಮುಂದೆ ವಾದ-ವಿವಾದ ನಡೆದು 1977ರಲ್ಲಿ ತೀರ್ಪು ಬಂತು. ಮತಾಂತರ ಮಾಡುವುದು ಜನ್ಮಸಿದ್ಧ ಹಕ್ಕಲ್ಲ. ಎಲ್ಲಕ್ಕಿಂತ ದೊಡ್ಡ ಧರ್ಮ ಸಂವಿಧಾನ. ಸಂವಿಧಾನದಲ್ಲಿ ಮತಾಂತರ ಮಾಡುವ ಹಕ್ಕು ನೀಡಿಲ್ಲ. ಮತಾಂತರ ನಿಷೇಧ ಕಾನೂನು ಸಂವಿಧಾನ ಬದ್ಧ. ಇಂತಹ ಕಾಯಿದೆ ಮಾಡುವ ಸಂಪೂರ್ಣ ಹಕ್ಕು ರಾಜ್ಯ ಸರಕಾರಕ್ಕಿದೆ ಎಂದು ಸುಪ್ರೀಂಕೋರ್ಟ್ ಚಾರಿತ್ರಿಕ ತೀರ್ಪು ನೀಡಿತು.

ನಿಜವಾಗಿ ಈ ಕಾನೂನು ಮತಾಂತರವನ್ನು ನಿಷೇಧಿಸುವುದಿಲ್ಲ, ನಿಯಂತ್ರಿಸುತ್ತದೆ ಮಾತ್ರ. ಬಲಾತ್ಕಾರದ ಮತ್ತು ಆಮಿಷದ ಮತಾಂತರಕ್ಕೆ ನಿಷೇಧ ಹೇರುತ್ತದೆ. ಮತಾಂತರ ನಿಯಂತ್ರಣದಿಂದ ಮಾತ್ರ ಸಂವಿಧಾನದಲ್ಲಿ ನೀಡಲಾಗಿರುವ ಧಾರ್ಮಿಕ ಸ್ವಾತಂತ್ರ್ಯದ ಹಕ್ಕಿಗೆ ಅರ್ಥ ಬರುತ್ತದೆ. ಧಾರ್ಮಿಕ ನಂಬಿಕೆಗಳನ್ನು ಸ್ವತಂತ್ರವಾಗಿ ಆಚರಿಸಬೇಕಾದರೆ ಹಕ್ಕಿನ ಆಚರಣೆಯಲ್ಲಿ ಯಾವನೇ ವ್ಯಕ್ತಿ ಯಾವುದೇ ರೀತಿಯ ಆಚರಣೆ, ಪ್ರಲೋಭನೆ ಮಾಡಬಾರದು. ಇಲ್ಲವಾದರೆ ಮೂಲಭೂತ ಹಕ್ಕಿಗೆ ಅರ್ಥವಿಲ್ಲ ಎಂದು ಮುಖ್ಯ ನ್ಯಾಯಮೂರ್ತಿ ಎ.ಎನ್. ರೇ ಘೋಷಿಸಿದರು.

ಕರ್ನಾಟಕದಲ್ಲಿ ಮತಾಂತರ ನಿಷೇಧ ಕಾನೂನು ತಂದರೆ ಮಾತ್ರ ಈ ಪಿಡುಗು ನಿಂತು ನಿಜವಾದ ಮೂಲಭೂತ ಹಕ್ಕು ಪಾಲನೆ ಸಾಧ್ಯ. ಆದರೆ ನಾವು ಇಲ್ಲಿ ಇನ್ನೂ ಬೆಳೆ ತೆಗೆಯಲು ಬಾಕಿ ಇದೆ. ಹೀಗಾಗಿ ಇಷ್ಟು ಬೇಗ ಮತಾಂತರ ನಿಷೇಧ ಮಾಡಬೇಡಿ ಎಂದು ಪರೋಕ್ಷವಾಗಿ ಗುಲ್ಲೆಬ್ಬಿಸುವ ಕಾರ್ಯ ಈಗ ನಡೆಯುತ್ತಿದೆ.

ಸರಕಾರಗಳು ಜನರನ್ನು ವೋಟ್‌ಬ್ಯಾಂಕ್ ಎಂದು ಪರಿಗಣಿಸಿದಾಗ ಸರಿಯಾದ ಕಾನೂನು ನೂಡುವ ವಿವೇಚನೆ ಇರುವುದಿಲ್ಲ. ಕಾನೂನು ಮಾಡದಿದ್ದಾಗ ಜನರೇ ಕಾನೂನು ಕೈಗೆ ತೆಗೆದುಕೊಳ್ಳುತ್ತಾರೆ ಎಂಬುದೂ ಕೂಡ ಅಷ್ಟೇ ಸತ್ಯ. ಪಕ್ಷಾಂತರ ನಿಷೇಧ ಕಾಯ್ದೆಯನ್ನೇ ನೋಡಿ, ಈ ಕಾಯಿದೆ ಬಂದ ಬಳಿಕ ಸಾಮಾಜಿಕ ಬದಲಾವಣೆ ಆಗಿದೆ. ಹಣಕ್ಕಾಗಿ ಎರ್ರಾಬಿರ್ರಿ ಪಕ್ಷ ತೊರೆಯುವುದು ನಿಂತಿದೆ.

ಒಟ್ಟಾರೆ ಮತಾಂತರ ನಿಷೇಧ ಬಗ್ಗೆ ಅಖಂಡ ಭಾರತದಲ್ಲಿ ಸಮಗ್ರ ಕಾನೂನು ಇಲ್ಲ. ಮೀನಾಕ್ಷಿಪುರಂನಲ್ಲಿ ಸಾಮೂಹಿಕ ಮತಾಂತರವಾದಾಗ ಫೆಬ್ರವರಿ 1981ರಲ್ಲಿ ಕೇಂದ್ರ ಸರಕಾರದ ಗೃಹ ಖಾತೆಯು ಎಲ್ಲ ರಾಜ್ಯ ಸರಕಾರಗಳಿಗೆ ಪತ್ರ ಬರೆದು ಮಧ್ಯ ಪ್ರದೇಶ, ಒರಿಸ್ಸಾ, ಅರುಣಾಚಲ ಪ್ರದೇಶದಂತೆ ಮತಾಂತರ ನಿಷೇಧ ಕಾನೂನು ರಚಿಸಲು ತಿಳಿಸಿತು. ನೆನಪಿರಲಿ, ಆಗ ಕೇಂದ್ರದಲ್ಲಿ ಇದ್ದದ್ದು ಬಿಜೆಪಿ ಸರಕಾರ ಅಲ್ಲ, ಕಾಂಗ್ರೆಸ್ ಸರಕಾರ!



# ಸನಾತನ ಧರ್ಮದ ಅಧ್ಯಾತ್ಮ ದೀಪ್ತಿಯೇ ಮತಾಂತರಕ್ಕೆ ಮದ್ದು

*ಶತಾವಧಾನಿ ಡಾ. ಆರ್ ಗಣೇಶ್*

---

ಮತಾಂತರವನ್ನು ಕುರಿತು ಆರಂಭಿಸಿದ ವಿಸ್ತೃತ ಚರ್ಚೆಯಲ್ಲಿ ಭೈರಪ್ಪನವರು ತಮ್ಮ ವಿಚಾರದ ಕೇಂದ್ರದಲ್ಲಿರಿಸಿ ಪರಿಶೀಲಿಸಿದ ಅಂಶವೆಂದರೆ ಯಾವುದೇ ಮತವು ತನ್ನ ತಾತ್ವಿಕ ಮತ್ತು ನೈತಿಕ ಸ್ತರಗಳಲ್ಲಿ ಯಾವ ಮಟ್ಟದ ವೈಜ್ಞಾನಿಕತೆ ಮತ್ತು ನಿರ್ವಿಶೇಷತೆಗಳನ್ನು ತಳೆದಿರಬೇಕೆಂಬುದೇ ಆಗಿತ್ತು. ಈ ನಿಟ್ಟಿನಿಂದ ನೋಡಲು ಮುಖ್ಯ ಕಾರಣ ಅವರ ದರ್ಶನ ಶಾಸ್ತ್ರೀಯ ಹಿನ್ನೆಲೆ ಮಾತ್ರವೇ ಅಲ್ಲ; ಪ್ರಕೃತ ಸಂದರ್ಭದ ಮೂಲ ಸಮಸ್ಯೆಯೂ ಅದೇ. ಏಕೆಂದರೆ ಯಾವುದೇ ವಾದವಾಗಲಿ ಆತ್ಯಂತಿಕವಾಗಿ ದರ್ಶನಶಾಸ್ತ್ರೀಯ ಸಮಸ್ಯೆಯೇ ಆಗಿ ಬೆಳೆಯುತ್ತದೆ. ಈ ನೆಲೆಯನ್ನು ಮುಟ್ಟಿ ನೋಡಿದಲ್ಲದೆ ಎಂಥ ಸಮಸ್ಯೆಗೂ ಪರಿಹಾರವಿರಲಿ, ಅರ್ಥಸ್ಪಷ್ಟತೆ ಕೂಡ ಸಿಗದು. ಇದಕ್ಕೆ ಪೂರಕವಾಗಿ ಯಾವೆಲ್ಲ ಸಮಾಜಶಾಸ್ತ್ರೀಯ, ರಾಜಕೀಯ, ಸಾಂಸ್ಕೃತಿಕ, ಅರ್ಥಶಾಸ್ತ್ರೀಯ ಮುಖಗಳುಂಟೋ ಅವುಗಳನ್ನೆಲ್ಲ ಮೂಲ ಸಮಸ್ಯೆಯ ಚಿತ್ರವು ಮಸುಕಾಗದಂತೆ ಸಾಧಾರವಾಗಿ ಯಥೋಚಿತವಾಗಿ ಪ್ರಸ್ತಾಪಿಸಿದ್ದಾರೆ. ಇಲ್ಲಿ ವ್ಯಕ್ತಿಗಳು ಗೌಣ. ವಿಚಾರಗಳಷ್ಟೇ ಮುಖ್ಯ. ಕನ್ನಡದ ಮಟ್ಟಿಗಂತೂ ಈ ವ್ಯಾಪ್ತಿಯ ಸಾರ್ವಜನಿಕ ಸ್ತರದ ಚರ್ಚಾರಂಭ ಇದೇ ಮೊದಲು.

ಆದರೆ ಈ ಚರ್ಚೆ ಬಲುಬೇಗದಲ್ಲಿಯೇ ವಿಷಯಾಂತರಕ್ಕೆ ತುತ್ತಾಗುತ್ತಿರುವುದೊಂದು ವಿಪರ್ಯಾಸ. ಭೈರಪ್ಪನವರ ನಿಲುವನ್ನು ವಿರೋಧಿಸಿ ಬಂದಿರುವ ಈವರೆಗಿನ ವಾದಗಳ ಮುಖ್ಯಾಂಶ ಹೀಗಿದೆ:

1. ಕ್ರೈಸ್ತ (ಹಾಗೂ ಇಸ್ಲಾಂ) ಮತಾಂತರೀಕರಣಕ್ಕೆ ಆ ಮತಗಳು ಒಡ್ಡುತ್ತಿರುವ ಪ್ರಲೋಭನೆ, ಬಲಾತ್ಕಾರಗಳಿಗಿಂತ ಮಿಗಿಲಾಗಿ ಸನಾತನ ಧರ್ಮದಲ್ಲಿರುವ ಅಸ್ಪೃಶ್ಯತೆಯೇ ಮುಖ್ಯ ಕಾರಣ.
2. ವಸ್ತುತಃ ಹಿಂದೂ ಮೂಲಭೂತವಾದಕ್ಕಿಂತ ಮತ್ತಾವ ಮತೀಯ ದೌರ್ಜನ್ಯಗಳೂ ಮಿಗಿಲಲ್ಲ, ಭಯಾನಕವಲ್ಲ.

3. ದಲಿತರು ಶತಶತಮಾನಗಳಿಂದ ಬೌದ್ಧಾದಿ ಮತಗಳಿಗೆ ಸೇರುತ್ತಿರುವುದಕ್ಕೆ ಮೂಲ ಕಾರಣ ಸನಾತನ ಧರ್ಮದ ವೈದಿಕಶಾಹಿ ಹಾಗೂ ಅದು ಪ್ರತಿಪಾದಿಸಿರುವ ಕಲುಷಿತ ಸಮಾಜ ರಚನೆ.
4. ದಲಿತರೂ ಶೂದ್ರಾದಿಗಳೂ ಸನಾತನ ಧರ್ಮದ ವಲಯದೊಳಗೆ ಬರಲೇ ಇಲ್ಲ. ಏಕೆಂದರೆ ಅವರನ್ನೆಂದೂ ವೈದಿಕ ವಲಯದೊಳಗೆ ಸೇರಿಸಿಕೊಂಡಿರಲೇ ಇಲ್ಲ. ಇಂತಿರಲು ಅವರೆಲ್ಲ ಇಂದು, ಹಿಂದೂಗಳೇ ಅಲ್ಲ. ಹೀಗಿರುವಾಗ ಆ ಅಸಂಖ್ಯ ಜನರು ತಮ್ಮಿಷ್ಟದಂತೆ ಕ್ರೈಸ್ತ (ಅಥವಾ ಇಸ್ಲಾಂ) ಮತಗಳಿಗೆ ಪರಿವರ್ತಿತರಾದರೆ ಆಕ್ರೋಶ ಬೇಕಿಲ್ಲ.

ದಿಟವೇ. ಈ ಎಲ್ಲ ವಾದಗಳ ಪ್ರಾಮುಖ್ಯ ಅಲ್ಲಗಳೆಯುವಂಥದ್ದಲ್ಲ. ಮಾತ್ರವಲ್ಲ, ಇಲ್ಲಿಯ ಕೆಲವೊಂದು ಅಂಶಗಳು ವಾಸ್ತವವೂ ಆಗಿವೆ. ಮುಖ್ಯವಾಗಿ ಅಸ್ಪರ್ಶತೆಯೆಂಬುದು ಮಹಾಪಾಪ, ಹಿಂದೂಧರ್ಮಕ್ಕಂಟಿದ ಶಾಪ. ಇದನ್ನೆಷ್ಟು ಬಗೆಯಲ್ಲಿ ಖಂಡಿಸಿದರೂ ಸಾಲದು. ಇದರ ನಿರ್ಮೂಲನಕ್ಕಾಗಿ ಪ್ರತಿಯೊಬ್ಬ ಹಿಂದೂವು ಅದೆಷ್ಟು ಶ್ರಮಿಸಿದರೂ ಕಡಮೆಯೇ. ಬಡತನ, ಅವಮಾನ, ಅಸಹಾಯಕತೆ, ಅಜ್ಞಾನಾದಿಗಳೆಲ್ಲ ಮತಾಂತರದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವುವೆಂಬ ಮಾತೂ ಸತ್ಯ. ವಸ್ತುತಃ ಈ ಚರ್ಚೆಯು ಎಲ್ಲರನ್ನೂ ಆ ದಿಶೆಯಲ್ಲಿ ಗುಣಾತ್ಮಕವಾಗಿ ಪ್ರೇರೇಪಿಸಬೇಕು. ಅದು ಎಲ್ಲರ ಉದ್ದೇಶ ಆಗಬೇಕು.

ಆದರೆ ಆಧ್ಯಾತ್ಮಿಕ ಸಮಸ್ಯೆಯೊಂದನ್ನು ಸಾಮಾಜಿಕ ಸ್ತರದಲ್ಲಿಯೇ ನಿರ್ಬಂಧಿಸಿ ನೋಡುವುದು ಉಚಿತವಾಗದು. ವಸ್ತುತಃ ತತ್ತ್ವಶಾಸ್ತ್ರ-ಮತಶಾಸ್ತ್ರ ಕೇಂದ್ರಿತವಾದ ಈ ಸಮಸ್ಯೆಯನ್ನು ಬರಿಯ ಸಮಾಜಶಾಸ್ತ್ರ ಕೋನವೊಂದರಿಂದಲೇ ಕಾಣಲೆಳಸುವುದು ಅಯುಕ್ತ. ಇದಕ್ಕೆ ಕಾರಣವಾದರೂ ಗುಟ್ಟೇನಲ್ಲ. ನಮ್ಮ ಹೆಚ್ಚಿನ 'ವಿಚಾರವಾದಿ'ಗಳು, 'ಚಿಂತಕ'ರು, ಮಾರ್ಕ್ಸಿಸಂ, ಕಮ್ಯೂನಿಸಂ ಮುಂತಾದ ವಾಮಪಂಥಗಳ ಸೈದ್ಧಾಂತಿಕ ಧೋರಣೆಗಳಲ್ಲಿಯೇ ನೆಲೆನಿಂತ ಕಾರಣ; ಆ ವರ್ಗವು ಅಧ್ಯಾತ್ಮವನ್ನೇ ನಿರಾಕರಿಸುವ ಕಾರಣ, ಇಡಿಯ ವಿಶ್ವದ ಎಲ್ಲ ಕಾಲದ ಸಂಘರ್ಷಗಳನ್ನೂ ಕೇವಲ ವರ್ಗಕಲಹವೆಂಬ ಅರ್ಥಶಾಸ್ತ್ರ, ಸಮಾಜ ಶಾಸ್ತ್ರಗಳ ಮೇಲುಮೇಲಣ ವಾದಗಳೊಳಗೇ ಅಡಗಿಸಿ ನೋಡಬೇಕೆಂಬ ಆಗ್ರಹವಿರುವ ಕಾರಣ ಸದ್ಯದ ಸಮಸ್ಯೆಯನ್ನೂ ಬರಿಯ ಭಾರತವೊಂದರ ಜಾತಿ ಜಗಳಗಳ ಚೌಕಟ್ಟಿನೊಳಗೇ ಕಾಣಬೇಕಾಗಿರುವ ತಂತ್ರ ಅವರಿಗೆ ಅನಿವಾರ್ಯವಾಗಿದೆ. ಜೊತೆಗೆ ಎಲ್ಲ ಪ್ರವಾದಿ ಕೇಂದ್ರಿತ ಮತಗಳಲ್ಲಿಯೂ ಎದ್ದು ಕಾಣುವಂತೆ ಸೊರಗಿರುವ (ಅಥವಾ ಲುಪ್ತವೇ ಆಗಿರುವ) ಅಧ್ಯಾತ್ಮ ಸಂವೇದನೆಯು ಅವರಿಗೆ ಆಯಾ ಪ್ರವಾದಿ ಮತಗಳಲ್ಲಿ ತಮ್ಮ ತಮ್ಮ ಹತ್ತಿರದ 'ಸೈದ್ಧಾಂತಿಕ ಬಂಧು'ಗಳನ್ನು ಕಾಣುವ ಅವಕಾಶವನ್ನೂ ಕಲ್ಪಿಸಿದೆ. ಬಹುಶಃ ಈ ಕಾರಣದಿಂದಲೇ Communism is Christianity without Christ ಎಂಬ ನಾಣ್ಣುಡಿ ಬಂದಿದೆ. ಎಲ್ಲ 'ಪುಸ್ತಕ ಮತ-ಜನ'ಗಳೂ (People of the Book, Religion of

the Book) ದಾಸ್ ಕ್ಯಾಪಿಟಲ್‌ನಂಥ ಪುಸ್ತಕ ಕೇಂದ್ರಿತ ವಾಸ್ತವವಾದಗಳಿಗೆ, ವೈಚಾರಿಕ ವರ್ಗಕ್ಕೆ ಆಪ್ಯಾಯಮಾನವಾಗುವುದರಲ್ಲಿ ಆಶ್ಚರ್ಯವೇನಿಲ್ಲ. ಹೀಗಾಗಿಯೇ ಭೈರಪ್ಪನ ವರೂ ಸೇರಿದಂತೆ ಚಿದಾನಂದಮೂರ್ತಿ, ರಾಮಚಂದ್ರ ಶೆಣೈ, ಶ್ರೀನಿವಾಸಮೂರ್ತಿ, ಅಜಕ್ಕಳ ಗಿರೀಶ ಭಟ್, ಪಿ.ಪಿ. ಹೆಗ್ಡೆ ಮುಂತಾದವರು ಈ ವೇದಿಕೆಯ ಮೂಲಕವೂ ಕೊಯ್ನ್‌ರಾಡ್ ಎಲ್ಸ್ಟ್, ಡೇವಿಡ್ ಫ್ರಾಲಿ, ಫ್ರಾಂಕ್ವಾ ಗೋತಿಯೇ, ಮಿಷೆಲ್ ಡ್ಯಾನಿನೋ, ಸೀತಾರಾಮ್ ಗೋಯಲ್, ರಾಮ್ ಸ್ವರೂಪ್, ಗುರುಮೂರ್ತಿ, ಅರುಣ್ ಶೌರಿ, ನವರತ್ನ ರಾಜಾರಾಮ್ ಮುಂತಾದ ಇನ್ನೂ ಅನೇಕ ಮಂದಿ ನಾನಾ ಗ್ರಂಥ-ಪತ್ರಿಕೆ ಲೇಖನಗಳ ಮೂಲಕವೂ ಅದೆಷ್ಟು ಗಟ್ಟಿಯಾದ ಮಾಹಿತಿ-ಆಧಾರ-ತರ್ಕ, ಅನುಭವಗಳನ್ನು ಮುಂದಿಟ್ಟು ಹೇಳಿದರೂ ಆ ಎಲ್ಲವನ್ನೂ ವ್ಯಕ್ತಿನಿಂದೆ, ಉಡಾಫೆ ಮಾತು, ತರ್ಕಾಭಾಸ ಹಾಗೂ ವಿಕೃತ ಮಾಹಿತಿಗಳ ಮೂಲಕ ತಿರಸ್ಕರಿಸುತ್ತಿದ್ದಾರೆ. ಇಲ್ಲವಾದರೆ ಜಿ.ಕೆ. ಗೋವಿಂದರಾಯರು ಮಾಹಿತಿಗಿಂತ ಸತ್ಯ ದೊಡ್ಡದು ಎಂದು ಹೇಳುತ್ತಿರಲಿಲ್ಲ. ಏಕೆಂದರೆ ಮಾಹಿತಿಯ ತಥ್ಯವೂ ಒಂದು ಮೌಲ್ಯವೆಂಬುದನ್ನು ಮರೆಯಬಾರದು. ಅಲ್ಲದೆ 'ಸತ್ಯ'ವು ಲೋಕದಲ್ಲಿ ಸಾಬೀತಾಗುವುದಾದರೂ ತಥ್ಯಗಳಿಂದ ತಾನೆ! ಒಂದು 'ಗೃಹೀತಸತ್ಯ'ವನ್ನೂ ಪರೀಕ್ಷಿಸಲು ಇವರು ತಮ್ಮ 'ಸತ್ಯ'ವು ಸ್ವಯಂಸಿದ್ಧವೆಂದು ಹೇಳಿದರೆ ಇವರಿಗೂ 'ಪ್ರವಾದಿ ಪಂಥ'ದ ಉದ್ಘೋಷಣೆಗಳಿಗೂ ಏನಿದೆ ವ್ಯತ್ಯಾಸ? ವೇದವಾಗಲಿ, ಕುರಾನ್ ಆಗಲಿ, ಬೈಬಲ್ ಆಗಲಿ ಸ್ವತಃ ಪ್ರಮಾಣವೆಂದು ಹಠ ಹಿಡಿದು, ಇನ್ನಿತರ ತಥ್ಯಗಳನ್ನೂ ಮತ್ತಿತರ ಮೌಲ್ಯಗಳನ್ನೂ ತಿರಸ್ಕರಿಸಿ ದ್ವೇಷಿಸಿದರೆ ಅದು ಹೇಗೆ ಪ್ರಶ್ನಾರ್ಹವಾಗುವುದೋ ಹಾಗೆಯೇ ಇತಿಹಾಸದ ತಥ್ಯಗಳನ್ನು ಉಪೇಕ್ಷಿಸಿ ಕೇವಲ ತಮ್ಮ ಸೈದ್ಧಾಂತಿಕ ಬದ್ಧತೆಗಳನ್ನೇ ಸತ್ಯವೆಂದು ಸಾರಿದಲ್ಲಿ ಆಕ್ಷೇಪಾರ್ಹವೆನಿಸುತ್ತದೆ. ಈ ನಿಟ್ಟಿನಿಂದ ಕಂಡಾಗ 'ಸತ್ಯ'ದ ಹಂಬಲದಿಂದ ಮಾಹಿತಿಯನ್ನು ಉಪೇಕ್ಷಿಸುವ ಗೋವಿಂದರಾಯರು ತಮ್ಮದೇ ಆದ ಅಭಿಪ್ರಾಯ ವೊಂದಕ್ಕೆ ಪರಮಾರ್ಥ ಸತ್ಯದ ಪಟ್ಟವನ್ನು ಕಟ್ಟಲು ಹೊರಟಿದ್ದು ಸ್ಪಷ್ಟ.

ಹಿಂದೆ 'ಟಿಪ್ಪು-ಕಾರ್ನಾಡ್' ವಿವಾದ ಸಂದರ್ಭದಲ್ಲಿ ವಿಜಯ ಕರ್ನಾಟಕದ ಮೂಲಕ ನಾನು ಇತಿಹಾಸ-ವಾಸ್ತವ-ಸತ್ಯ-ತಥ್ಯ- ಮಾಹಿತಿ-ವಾದ-ಅಭಿಪ್ರಾಯ-ಕಲ್ಪನೆ-ನಂಬಿಕೆ ಮುಂತಾದ ಹಲಕೆಲವು ಸಂಗತಿಗಳಿಗಿರುವ ನೆಲೆ-ಬೆಲೆಗಳನ್ನು ಸ್ಪಷ್ಟಗೊಳಿಸಿ ಬರೆದಿದ್ದಲ್ಲದೆ ವಾಸ್ತವಗಳನ್ನು ವಾಸ್ತವಗಳಿಂದಲೇ ಎದುರಿಸಬೇಕಲ್ಲದೆ ಬೇರೊಂದು ಚೌಕಟ್ಟಿಗೆ ಜಾರಿ ಕೊಳ್ಳುವುದು ತರ್ಕಶಾಸ್ತ್ರವಿರುದ್ಧವೆಂದೂ ಇಂಥ Change of grounds (ಪ್ರತಿಜ್ಞಾಂತರ) ತಪ್ಪೆಂದೂ ತೋರಿಸಿದ್ದೆ. ಚರ್ಚೆಯೊಂದರಲ್ಲಿ ಹಲವು ಚೌಕಟ್ಟುಗಳ ಸ್ತರದ ಸಂವಾದ ಅನಿವಾರ್ಯವಾದಾಗಲೂ ಆಯಾ ಮರ್ಯಾದೆಯನ್ನು ಗಮನಿಸಬೇಕೆಂದೂ ನಿವೇದಿಸಿದ್ದೆ. ಆದರೆ ಇಂಥ ವಿಷಯಗಳಲ್ಲಿ ವಿತಂಡವಾದವೇ ಮೆರೆಯುವುದು ಖೇದಾಸ್ಪದ.

ಮೊದಲಿಗೆ ಮತಾಂತರಕ್ಕೆ ಅಸ್ಪೃಶ್ಯತೆಯೇ ಕಾರಣವೆಂಬ ಮಾತಿನ ಸಾರಾಸಾರವನ್ನು ನೋಡೋಣ:

ಕ್ರೈಸ್ತ (ಹಾಗೂ ಇಸ್ಲಾಂ) ಮತಾಂತರ ಪ್ರಕ್ರಿಯೆಯು ಕೇವಲ ಭಾರತಕ್ಕೆ ಸೀಮಿತವಾಗಿಲ್ಲ. ಇಡಿಯ ಜಗತ್ತಿಗೇ ಹಬ್ಬಿದೆ. ಯುರೋಪ್, ದಕ್ಷಿಣ ಅಮೆರಿಕ, ಉತ್ತರ ಅಮೆರಿಕ, ಆಫ್ರಿಕಾ, ಆಸ್ಟ್ರೇಲಿಯಾ ಮುಂತಾದ ಖಂಡಗಳಲ್ಲೆಲ್ಲ ಅಸ್ಪರ್ಶತೆ ಇದ್ದಿತೇ? ಗುಲಾಮೀ ಪದ್ಧತಿ, ಬಡವ-ಬಲ್ಲಿದ ಭೇದಗಳಿದ್ದ ಕಾರಣ 'ಸಮಾನತೆಯ ಹರಿಕಾರ'ರಾಗಿ ಈ ಮತಗಳು ಬಂದವೆನ್ನೋಣವೇ? ನಿಗ್ರೋಗಳೂ ಸೇರಿದಂತೆ ಅನೇಕ ಬುಡಕಟ್ಟುಗಳ ಜನರನ್ನು ಅಮಾನುಷವಾಗಿ ದಾಸ್ಯಕ್ಕೊಳಪಡಿಸಿದ ಬಿಳಿಯರೆಲ್ಲ ಕ್ರೈಸ್ತಮತದವರೇ. ಒಬ್ಬೊಬ್ಬ ನವಾಬ, ಸುಬಹ್‌ದಾರಾದಿಗಳೂ ಸಾವಿರ ಸಾವಿರ ಹೆಣ್ಣು-ಗಂಡುಗಳನ್ನು ಗುಲಾಮರನ್ನಾಗಿಸಿ, ಹಿಜಡಾಗಳನ್ನಾಗಿಸಿ ಇಟ್ಟುಕೊಂಡಿದ್ದ ಇಸ್ಲಾಂ ಮತಿಯರೇ. ಅಷ್ಟೇಕೆ, ಯಾವುದೇ ಜಾತಿ ಭೇದ-ಸ್ಪರ್ಶಾಸ್ಪರ್ಶ ತಾರತಮ್ಯಗಳಿಲ್ಲದ ಬೌದ್ಧಮತದ ನೆಲೆಯಾದ ಶ್ರೀಲಂಕಾ, ದಕ್ಷಿಣ ಕೊರಿಯಾ, ಜಪಾನ್, ಇಂಡೋನೇಷ್ಯಾ, ಥೈಲ್ಯಾಂಡ್, ಬರ್ಮಾ ಮುಂತಾದ ದೇಶಗಳಲ್ಲಿಯೂ ಈ ಮತಗಳ ಕಬಂಧಬಾಹುಗಳೇಕೆ ಚಾಚಿಕೊಂಡಿವೆ? ಸಾಕ್ಷಾತ್ ವ್ಯಾಟಿಕನ್ನಿನ ವರದಿಯ ಪ್ರಕಾರವೆ ಪ್ರಜಾಪ್ರಭುತ್ವವಿರುವ ಜಪಾನ್ ಕ್ರೈಸ್ತ ಮಿಷನರಿಗಳಿಗೆ ಅದೇಕೆ ತೀವ್ರ ವಿರೋಧ ಮಾಡಿದೆ? ದಿಟವಾಗಿ ನೋಡಿದರೆ ತತ್ವ ದೃಷ್ಟಿಯಿಂದಲೂ ಆಚರಣೆಯ ದೃಷ್ಟಿಯಿಂದಲೂ ಕ್ರೈಸ್ತ-ಇಸ್ಲಾಂಗಳಿಗಿಂತ ತುಂಬ ಉದಾರವೂ ವೈಜ್ಞಾನಿಕವೂ ಆದ ಬೌದ್ಧ ಮತದ ಮೇಲೆ ಮತಾಂತರದ ಪಿಡುಗೆರಗಿರುವುದಕ್ಕೆ ನಮ್ಮಲ್ಲಿಯ 'ಬೌದ್ಧರೂ', 'ವಿಚಾರವಾದಿ'ಗಳೂ ಪ್ರತಿಭಟಿಸಬೇಕಿತ್ತು. ಆದರೆ ಇಲ್ಲಿ ಆಗಿರುವುದೇನು?

ಒಂದು ಉದಾಹರಣೆಯನ್ನು ನೋಡುವುದಾದರೆ, ಇತ್ತೀಚೆಗೆ ದಕ್ಷಿಣ ಕೊರಿಯಾದಲ್ಲಿ ಬೌದ್ಧರ ಜನಸಂಖ್ಯೆ ತೀವ್ರವಾಗಿ ಇಳಿದಿದ್ದು (10.7 ಮಿಲಿಯನ್) ಕ್ರೈಸ್ತರ ಜನಸಂಖ್ಯೆಯು ಸತತ ಮತಾಂತರದ ಮೂಲಕ ಏರಿದ್ದು (13.7 ಮಿಲಿಯನ್) ಎಲ್ಲೆಡೆ ತಲ್ಲಣ ಹುಟ್ಟಿಸಿದೆ. ಅಲ್ಲಿಯ ಚರ್ಚ್‌ಗಳು ಬೌದ್ಧಸ್ತೂಪಗಳ ಧ್ವಂಸಕ್ಕೆ, ಬೌದ್ಧತತ್ವ ದಮನಕ್ಕೆ ಕರೆ ನೀಡಿ ಪ್ರಚುರಿಸಿದ ಕರಪತ್ರ, ವಿಡಿಯೋ ಸಾಮಗ್ರಿಗಳೆಲ್ಲ ಲಭ್ಯವಿವೆ. ಅಲ್ಲದೆ ಅಲ್ಲಿಯ ರಾಜಕೀಯ ಪರಿಸ್ಥಿತಿಯೂ ಐರೋಪ್ಯ ಚರ್ಚ್‌ವಶಕ್ಕೆ ಬರುವಂತಿದೆ. ಕೊರಿಯದ ಸರ್ಕಾರವು 1600 ವರ್ಷಗಳಿಂದಲೂ ಕೊರಿಯದಲ್ಲಿ ನೆಲೆಕಂಡಿದ್ದ ಬೌದ್ಧರತ್ತ ತೋರುತ್ತಿರುವ ಮಲತಾಯಿ ಧೋರಣೆಯನ್ನು ಖಂಡಿಸಿ ಸಾವಿರಾರು ಭಿಕ್ಷುಗಳು ಆಂದೋಲನ ನಡೆಸಿದ್ದಾರೆ. ವಿಶೇಷತಃ ಅಮೆರಿಕನ್ ಮಿಷನರಿಗಳ ತಂತ್ರದ ಕಾರಣ ಈ ಒಂದು ಶತಮಾನದೊಳಗೇ ಕೊರಿಯದಲ್ಲಿ ಬೌದ್ಧರು ಅಲ್ಪಸಂಖ್ಯಾತರಾಗಿದ್ದಾರೆಂದು ಅಲ್ಲಿಯ ಪ್ರಾಜ್ಞರು ಕಳವಳಗೊಂಡಿದ್ದಾರೆ. (ಇಂಟರ್‌ನ್ಯಾಷನಲ್ ಹೆರಾಲ್ಡ್ ಟ್ರಿಬ್ಯೂನ್, 14-10-2008). ಆದರೆ ನಮ್ಮಲ್ಲಿ ಬೌದ್ಧರೆನಿಸಿಕೊಂಡವರು ತಮ್ಮ ತತ್ವಕ್ಕೆ ಮೂಲವಾದ ಸನಾತನ ಧರ್ಮವನ್ನೇ ಹಳಿದಿದ್ದಾರೆ.

ಇನ್ನು ಕ್ರೈಸ್ತ-ಇಸ್ಲಾಂ ಮತಗಳು ವಿಜ್ಞಾನವನ್ನೂ ಆಧುನಿಕತೆ-ಶ್ರೀಮಂತಿಕೆಯನ್ನೂ ಬೆಳೆಸುತ್ತವಾದ ಕಾರಣ ಮತಾಂತರಗಳಾಗುತ್ತಿವೆಯೆಂಬುದೂ ಸುಳ್ಳು ಮಾತು. ವಸ್ತುಸ್ಥಿತಿಯು

ತದ್ವಿರುದ್ಧವೇ ಆಗಿದೆ. ಯೂರೋಪು ಚರ್ಚಿನ ಹಿಡಿತದಿಂದ ಹೊರಬಂದ ಬಳಿಕವಷ್ಟೇ ವಿಜ್ಞಾನ-ತಂತ್ರಜ್ಞಾನ-ವಿಚಾರವಾದ-ಅಭ್ಯುದಯಗಳನ್ನು ಕಂಡದ್ದು ಸರ್ವಸುವಿದಿತ. ಅಷ್ಟೇಕೆ, ಭೂಮಿ ಚಪ್ಪಟೆಯೆಂದೇ ನಂಬಿದ್ದ ಕ್ರೈಸ್ತ ಯುರೋಪ್ ಅದು ಗೋಳಾಕಾರವೆಂದು ತಿಳಿದು, ಮತದ ಮಿತಿಯನ್ನು ದಾಟಿದ ಬಳಿಕವೇ ವಸಾಹತುಗಳು ಬೆಳೆದದ್ದು. ಮಿಕ್ಕ ಜಗತ್ತು ಯುರೋಪಿಯನ್ನರಿಗೆ ತಿಳಿದದ್ದು. ಇಷ್ಟಾಗಿ ಕ್ರೈಸ್ತಮತಕ್ಕೆ ಬಲವಂತವಾಗಿ ನೂಕಲ್ಪಟ್ಟ ನೂರಾರು ವಸಾಹತುಗಳು-ಇಂದಿನ ಚಿಲಿ, ಅರ್ಜಂಟೈನಾ, ಬ್ರೆಜಿಲ್, ಮೆಕ್ಸಿಕೋ, ಪೆರು, ದಕ್ಷಿಣ ಆಫ್ರಿಕಾ, ಜಿಂಬಾಬ್ವೆ ಮುಂತಾದ ಅಸಂಖ್ಯ ದೇಶಗಳು-ಬಡತನ, ರೋಗರುಜಿನ, ಜನಸಂಖ್ಯಾ ಸ್ಫೋಟ, ಪರಿಸರ ಮಾಲಿನ್ಯಗಳಂಥ ಸಾವಿರ ಸಮಸ್ಯೆಗಳಿಗೆ ತುತ್ತಾಗಿವೆ. ಹೆಚ್ಚೇನು, ಸ್ವಯಂ ಪೋಪರ ಮೂಗಿನ ಕೆಳಗಿರುವ ಇಟಲಿಯೇ ಇಡಿಯ ಯೂರೋಪಿನಲ್ಲಿ ಅತ್ಯಂತ ಹಿಂದುಳಿದಿದೆ. ಇಸ್ಲಾಮಿನದಾದರೂ ಇದೇ ಸ್ಥಿತಿ. ಪೆಟ್ರೋಲಿಯಂ ಸಂಪನ್ಮೂಲದಿಂದಷ್ಟೇ ಅದು ಈ ಕಾಲದಲ್ಲಿ ಸಿರಿಯನ್ನು ಕಂಡಿದೆ. ಆದರೆ ವೈಜ್ಞಾನಿಕ ಪ್ರಗತಿಗೆ ಅದರ ಕೊಡುಗೆ ಏನು? ವಿಚಾರವಾದ-ಸ್ವಾತಂತ್ರ್ಯಗಳಿಗೆ ಅದರ ಯೋಗದಾನ ಎಂಥದ್ದು? ಮಧ್ಯಯುಗದ ಪಾಶವೀಶಕ್ತಿ ಹಾಗೂ ಇಸ್ಲಾಂ ಪೂರ್ವದ ಅರಬರ ಮತ್ತು ಪರ್ಷಿಯನ್ ಈಜಿಪ್ಶಿಯನ್ ಜನಗಳ ಮೇಧಾಶಕ್ತಿ ಮಾತ್ರ ಅದನ್ನು ಹಿಂದೆ ಬಲಿಷ್ಠವನ್ನಾಗಿಸಿತ್ತು. ಇಂದಾದರೋ ಅದರ ಮತಾಂಧರು ಭಯೋತ್ಪಾದನೆಯನ್ನೇ ಉದ್ಯಮವನ್ನಾಗಿಸಿಕೊಂಡಿದ್ದಾರೆ. ಕ್ರೈಸ್ತ ವಸಾಹತುಗಳಲ್ಲಾದ ಮತೀಯ ದೌರ್ಜನ್ಯ, ಜನಾಂಗೀಯ ದ್ವೇಷ, ಸಂಪನ್ಮೂಲ ಶೋಷಣೆಗಳಿಗೆ ಸಾವಿರ ಸಾವಿರ ನಿದರ್ಶನಗಳಿದ್ದು ಅದನ್ನು ಕ್ರೈಸ್ತ ಪ್ರಚಾರಕರೇ ಹೆಮ್ಮೆಯಿಂದ ದಾಖಲಿಸಿದ್ದಾರೆ. ಕೇವಲ ಈಚೆಗಷ್ಟೇ ಚರ್ಚಿನ ಬಿಗಿಮುಷ್ಟಿಯಿಂದ ಹೊರಬಂದ ಹಲವರು ಈ ಬಗೆಗೆ ವಸ್ತುನಿಷ್ಠ ಮಾಹಿತಿ ನೀಡಿದ್ದಾರೆ.

ಕೊಲಂಬಸ್, ಫ್ರಾನ್ಸಿಸ್ ಡ್ರೇಕ್, ಅಮೆರಿಗೋ ವೆಸ್‌ಪುಸಿ, ಪಿಲಿಗ್ರೀಮ್ ಫಾದರ್ಸ್ ಮುಂತಾದ ಅಸಂಖ್ಯ ಕ್ರೈಸ್ತ ಅನ್ವೇಷಕರೂ ಅವರನ್ನು ಬೆಂಬಲಿಸಿದ ಸ್ಪೇನ್, ಪೋರ್ಚುಗಲ್, ಇಂಗ್ಲೆಂಡ್, ಬೆಲ್ಜಿಯಂ ಮುಂತಾದ ಕ್ರೈಸ್ತ ರಾಷ್ಟ್ರಗಳೂ ನಡೆಸಿದ ದಾಂಧಲೆಗಳಿಗೆ ಪೋಪರೇ ಬೆಂಬಲವಾಗಿದ್ದುದು ರಹಸ್ಯವಾಗಿ ಉಳಿದಿಲ್ಲ. ಕ್ರಿ.ಶ. 1455ರಲ್ಲಿ ಪೋಪ್ 5ನೆಯ ನಿಕೋಲಸ್ ಹೊರಡಿಸಿದ papal bull (ಇದು ಇಸ್ಲಾಮಿನ 'ಫತ್ವಾ'ಗೆ ಸಮನಾಗ ಬಲ್ಲ ಆದೇಶ. ಇವುಗಳಿಗೆ ಕ್ರೈಸ್ತ ಮತವಿರುವವರೆಗೆ ಚಾಲತಿ ಇರುತ್ತದೆ) ರೊಮಾನಸ್ ಪಾಂಟಿಫೆಕ್ಸ್ ಸ್ಪೇನ್ ದೇಶಕ್ಕೆ ಆಫ್ರಿಕಾದ ಪಶ್ಚಿಮ ಕರಾವಳಿಯನ್ನೆಲ್ಲ ಮತಾಂತರಿಸಬೇಕೆಂದು ಆಣತಿ ನೀಡಿತು. ಕ್ರಿ.ಶ. 1452ರಲ್ಲಿ ಇದೇ ಪೋಪ್ ಐದನೆಯ ನಿಕೊಲಾಸ್ ಪೋರ್ಚುಗಲ್ಲಿನ ರಾಜ ಐದನೆಯ ಅಲ್ಫಾಂಸೋನಿಗೆ ಮುಸ್ಲಿಮರೂ ಸೇರಿದಂತೆ ಎಲ್ಲ ಕ್ರೈಸ್ತೇತರರನ್ನೂ ಶಾಶ್ವತ ದಾಸ್ಯಕ್ಕೂ ಮತಾಂತರಕ್ಕೂ ದೂಡಿ ಆಫ್ರಿಕಾವನ್ನು ಆಕ್ರಮಿಸ ಬೇಕೆಂದು ಕಟ್ಟುನಿಟ್ಟಾದ (Dum diversas) ಶಾಸನ ಮಾಡಿದರು. ಕ್ರಿ.ಶ. 1493ರಲ್ಲಿ

ಪೋಪ್ ಆರನೆಯ ಅಲೆಗ್ಸಾಂಡರ್ ತಮ್ಮ ಇಂಟರ್ ಸೆಟೇರಾ ಎಂಬ papal bullನ ಮೂಲಕ ಸ್ಪೇನಿಗೆ ಅದರ ವಸಾಹತುಗಳ ಎಲ್ಲ ಜನರನ್ನೂ ಮತಾಂತರಿಸಿ, ನಿಜವಾದ 'ಮನುಷ್ಯ'ರನ್ನಾಗಿಸಬೇಕೆಂದು ಆದೇಶಿಸಿದುದು ಮುಂದೆ ಸ್ತ್ರೀಯರ ಶೀಲಭಂಗ, ಅಪಹರಣ, ದರೋಡೆ, ದಾಸ್ಯ, ಹತ್ಯಾಕಾಂಡ ಮುಂತಾದ ಕ್ರೌರ್ಯಗಳಿಗೆ ಲಕ್ಷಾಂತರ ಜನ ತುತ್ತಾಗುವಂತಾಯ್ತೆಂದು ಡಾ. ಡೇವಿಡ್ ಎ. ಲೌ ಬರೆದಿದ್ದಾರೆ. ಇದೇ ಪೋಪ್ ಮುಂದೆ ತಮ್ಮ ಎರಡನೆಯ ಇಂಟರ್ ಸೆಟೇರಾದಲ್ಲಿ ಉತ್ತರ-ದಕ್ಷಿಣ ಧ್ರುವಗಳುದ್ದಕ್ಕೂ ಇರುವ ವಸಾಹತುಗಳನ್ನೆಲ್ಲ ಪೋರ್ಚುಗಲ್ ಹಾಗೂ ಸ್ಪೇನ್ ದೇಶಗಳಿಗೆ ಹಂಚಿ, ಕ್ರೈಸ್ತ ಸಾಮ್ರಾಜ್ಯ ವಿಸ್ತಾರಕ್ಕಾಗಿ ಕ್ರೈಸ್ತಮತೋನ್ನತಿಗಾಗಿ ಇವುಗಳನ್ನು ಮೀಸಲಿಡಬೇಕೆಂದು ಆದೇಶಿಸಿದ್ದಾರೆ. ಕೊಲಂಬಸ್ ದಕ್ಷಿಣ ಅಮೆರಿಕೆಗೆ ಕಾಲಿರಿಸಿದ ಒಂದೇ ಶತಾಬ್ದಿಯೊಳಗೆ ಅಲ್ಲಿಯ ಜನರ ಪೈಕಿ ಶೇ. 70 (ಸುಮಾರು 10 ಕೋಟಿ) ಕ್ರೈಸ್ತ ದೌರ್ಜನ್ಯಕ್ಕೀಡಾಗಿ ಸತ್ತಿದ್ದರು. ವಸಾಹತುಶಾಹಿಗಳ ದುರಾಸೆಗೆ ಬಲಿಯಾಗಿ ಚಿನ್ನದ ಗಣಿಗಳಲ್ಲಿ, ಸಮುದ್ರದಾಳದಲ್ಲಿ (ಮುತ್ತುಗಳನ್ನು ಆಯಲು) ದುಡಿದು ಸತ್ತವರೆಷ್ಟೋ. ಕ್ರೈಸ್ತರ ಎಲ್ಲ ವಸಾಹತುಗಳಲ್ಲಿ ಬಲವಂತವಾಗಿ ದುಡಿಯಲು ದೂಡಲ್ಪಟ್ಟ ಕ್ರೈಸ್ತೇತರರು ತಮ್ಮ ತಮ್ಮ ಮತಶ್ರದ್ಧಾನುಸಾರ ಬದುಕಿದ್ದಾಗಲೇ ತಮಗೆ ಅಂತ್ಯಕ್ರಿಯೆ ಮಾಡಿಕೊಂಡು ಬರುತ್ತಿದ್ದರು. ಈ ಕ್ರೌರ್ಯಗಳಿಂದ ಪಾರಾಗಲು ಅಗತೋಆಸ್ ಮತ್ತು ಕೊಕಮೇಸ್ ಬುಡಕಟ್ಟಿನ ಎಲ್ಲ ಜನರೂ ಆತ್ಮಹತ್ಯೆ ಮಾಡಿಕೊಂಡರು. ಟಿಮಬೋಸ್ ಇಂಡಿಯನ್ನರು ಸಾಮೂಹಿಕವಾಗಿ 1200 ಅಡಿ ಎತ್ತರದ ಕೋಡುಗಲ್ಲಿನಿಂದ ನದಿಗೆ ಹಾರಿ ಸತ್ತರು. ಇನ್ನು ಬಲವಂತದಿಂದ ಮತಾಂತರಗೊಂಡವರೂ ನೆಮ್ಮದಿಯಾಗಿ ಬಾಳಲಾಗಲಿಲ್ಲ. ಇವರ ಮತಾಂತರ, ಹುಟ್ಟು-ಸಾವು-ಮದುವೆಗಳಂಥ ಎಲ್ಲಕ್ಕೂ ಪಾದ್ರಿಗಳು ಹೆಣ್ಣು-ಹೊನ್ನುಗಳನ್ನು ಸುಲಿದು ತಿಂದರು. ಇಂಕಾನಾಡಿನ (ಈಗಿನ ಪೆರು) ಸೌಶೀಲ್ಯವುಳ್ಳ ಜನನಾಯಕನನ್ನು ಅವನ ಮಗನೆದುರೇ ಕುದುರೆಗಳಿಗೆ ಕಟ್ಟಿಸಿ ಹರಿದು ಕೊಂದರು. ಅವನು ಸಜೀವವಾಗಿರುವಾಗಲೇ ನಾಲಿಗೆ ಸೀಳಿದರು.

ಎಲ್ಲಕ್ಕಿಂತ ಮಿಗಿಲಾಗಿ ವಸಾಹತು ಶಾಹಿಗಳು ಯುರೋಪಿನಿಂದ ಕೊಂಡೊಯ್ದು ಸಿಡುಬು, ದಡಾರ, ಸಿಫಿಲಿಸ್, ಗನೋರಿಯಾ ಮುಂತಾದ ಭೀಕರ ರೋಗಗಳನ್ನು ಅಲ್ಲಿಯ ಸ್ಥಳೀಯರಿಗೆ ಅಂಟಿಸಿದರು. ಇದಂತೂ ಆಸ್ಟ್ರೇಲಿಯಾದಿಂದ ಮೊದಲ್ಗೊಂಡು ಅಮೆರಿಕದ ವರೆಗೆ ಎಲ್ಲ ವಸಾಹತುಗಳಲ್ಲಿಯೂ ನಿರ್ದಯವಾಗಿ ಸಾಗಿತು. ಸಿಡುಬಿನ ಸೋಂಕಿದ್ದ ಕಂಬಳಿಗಳಲ್ಲಿ ಸ್ಥಳೀಯರನ್ನು ಬಲವಂತವಾಗಿ ಸುತ್ತಿ ಬಡಿಯುತ್ತಿದ್ದರು. ಇಂಥ ಹೊಸ ರೋಗಗಳಿಗೆ ನಿರೋಧಶಕ್ತಿಯಿಲ್ಲದ ಅನೇಕ ಬುಡಕಟ್ಟು ಜನರು ಅಳಿದೇ ಹೋದರು. ಹೀಗೆ ಆಸ್ಟ್ರೇಲಿಯಾದಲ್ಲಿ ಶೇ. 90ರಷ್ಟು ಜನರು ಸತ್ತರೆ ಉಳಿದವರಲ್ಲಿ ಶೇ. 50ರಷ್ಟು ಜನರು ದಾರುಣವಾಗಿ ಕೊಲ್ಲಲ್ಪಟ್ಟರು. 1900ರ ವೇಳೆಗೆ ಆಸ್ಟ್ರೇಲಿಯಾದ ಬುಡಕಟ್ಟು ಜನರ ಸಂಖ್ಯೆ ಕೇವಲ 93 ಸಾವಿರಕ್ಕಿಳಿದಿತ್ತು. ಕೆನೇಡಿಯನ್ ಸೌಥ್ ಆರ್ಟಿಕ್ ಪ್ರಾಂತದಲ್ಲಿ ಒಂದು ಕೋಟಿ ಜನರು ಕೊಲ್ಲಲ್ಪಟ್ಟಿದ್ದರು. ದಕ್ಷಿಣ ಅಮೆರಿಕದಲ್ಲಂತೂ ಹೇಳಲೇ ಬೇಕಿಲ್ಲ;

ಹೆಚ್ಚು ಕಡಿಮೆ ಇಡಿಯ ಬ್ರೆಜಿಲ್ ಖಾಲಿಯಾಗಿತ್ತು. (ನೋಡಿ: Genocide in the New World: the Darkside of Columbus Legacy-Henbay Ramsager). ಉತ್ತರ ಅಮೆರಿಕದಲ್ಲೂ ಇದೇ ಪಾಡು. ಇಂಗ್ಲೆಂಡಿನಿಂದ ಬಂದ ಕ್ರೈಸ್ತ ವಲಸಿಗರು ಅಮೆರಿಕೆಯ ನೆಲದ ಮೇಲೆ ಕಾಲಿಟ್ಟ ಕೂಡಲೇ ಮೊದಲು ತಮ್ಮ ದೇವರಿಗೆ ಅಡ್ಡ ಬಿದ್ದರು. ಆ ಬಳಿಕ ಸ್ಥಳೀಯರಾದ ರೆಡ್ ಇಂಡಿಯನ್ನರ ಮೇಲೆ ಬಿದ್ದರೆಂಬುದು (The pilligrim fathers first fell on their knees and then upon the aborigines) ಬರಿಯ ಹಾಸ್ಯವಲ್ಲ. ರೆಡ್ ಇಂಡಿಯನ್ನರ ನೆಲವನ್ನು ನುಂಗಿ, ಅವರ ನೆಲದಲ್ಲೇ ಅವರಿಗೆ ನೆಲೆಯಿಲ್ಲದಂತೆ ಮಾಡಿ ಅವರ ಸಂಖ್ಯೆಯನ್ನು ಕೆಲವೇ ಸಾವಿರಗಳಿಗಿಳಿಸಿದ ಕಥೆ-ವ್ಯಥೆಯನ್ನು ಸ್ವಯಂ ಇಂದಿನ ಅಮೆರಿಕದ ಜನರೇ ದಾಖಲಿಸಿರುವುದು ಸುಪ್ರಸಿದ್ಧ. ಇದು ಬರಿಯ ಜನಾಂಗೀಯ ದ್ವೇಷವೊ, ಆರ್ಥಿಕ ಶೋಷಣೆಯೋ ಅಲ್ಲ. ಜೀವನಪದ್ಧತಿಗಳ ಹಾಗೂ ಶ್ರದ್ಧಾಸ್ವರೂಪಗಳ ವೈಷಮ್ಯದಿಂದ ಕೂಡ ಬಂದದ್ದರೆಂಬುದಕ್ಕೆ ರೆಡ್ ಇಂಡಿಯನ್ ನಾಯಕ ಸಿಯಾತಲ್ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ಫ್ರಾಂಕ್ಲಿನ್ ಪಿಯರ್ಸಿಗೆ ಬರೆದಿರುವ ಜಗತ್‌ಪ್ರಸಿದ್ಧ ಪತ್ರವೇ ಸಾಕ್ಷಿ. ಇವೆಲ್ಲ The Plains Indians Museumನಲ್ಲಿ ಇಂದೂ ಲಭ್ಯವಿವೆಯಷ್ಟೇ. ಆಫ್ರಿಕದಲ್ಲಾದರೂ ಕಥೆ ಬೇರೆಯಾಗಿಲ್ಲ. ಮೊದಲು ಆಫ್ರಿಕನ್ನರು ಭೂಮಿಯನ್ನು ತಮ್ಮ ಕೈಯಲ್ಲಿರಿಸಿಕೊಂಡಿದ್ದರು. ಅಲ್ಲಿಗೆ ಬಂದ ಪಾದ್ರಿಗಳ ಕೈಯಲ್ಲಿ ಬೈಬಲ್ ಇದ್ದಿತು. ಆ ಬಳಿಕ ಸ್ಥಳೀಯರು ಎಚ್ಚೆತ್ತು ನೋಡಿದಾಗ ಭೂಮಿ ಪಾದ್ರಿಗಳ ಕೈಯಲ್ಲೂ ಬೈಬಲ್ ತಮ್ಮ ಕೈಯಲ್ಲೂ ಇರುವುದು ಅರಿವಾಯಿತೆಂಬ ಒಂದು ಪ್ರಸಿದ್ಧ ನಾಣುನುಡಿ (Epigram) ಸಾಕು, ಎಲ್ಲ ಸಂಗತಿಯನ್ನೂ ಮಾರ್ಮಿಕವಾಗಿ ತಿಳಿಸುತ್ತದೆ. ಕಾಂಗೋ ದೇಶದಲ್ಲಿ ಬೆಲ್ಜಿಯಂ ನಡೆಸಿದ ದಾಂಧಲೆಯೂ ಇದೇ ತೆರನಾದದ್ದು. ಆಸ್ಟ್ರೇಲಿಯಾದಲ್ಲಿಯೂ ಸ್ಥಳೀಯ ಬುಡಕಟ್ಟು ಜನರಿಗೆ 1967ರವರೆಗೆ ಮತದಾನಕ್ಕೆ (Voting) ಅಧಿಕಾರವಿರಲಿಲ್ಲವೆಂಬ ಬಳಿಕ ಕ್ರೈಸ್ತ ಮತವು ಬಂದೇ ಭಾರತದ ದಲಿತರೂ ಶೂದ್ರರೂ ಬೆಳಕು ಕಂಡರೆಂಬ ಮಾತಿಗೆ ನೆಲೆ-ಬೆಲೆಗಳೆಷ್ಟು ಮಾತ್ರದ್ದೆಂದು ಪರಾಮರ್ಶಿಸದಿದ್ದಲ್ಲಿ ಸಾಧುವಾದೀತೇ?

ಈ ಎಲ್ಲ ಅತ್ಯಾಚಾರಗಳೂ ಶತಮಾನಗಳಷ್ಟು ಹಿಂದಿನವು. ಈಗ ಇವುಗಳನ್ನು ಎಲ್ಲರೂ ಧಿಕ್ಕರಿಸುತ್ತಾರೆಂದು ಭಾವಿಸಿದಲ್ಲಿ ತಪ್ಪಾದೀತು. ತೀರ ಈಚೆಗೂ (2007ರಲ್ಲಿ) ಈಗಿನ ಪೋಪ್ ಹದಿನಾರನೆಯ ಬೆನೆಡಿಕ್ಟ್ ಅವರು ಲ್ಯಾಟಿನ್ ಅಮೆರಿಕದಲ್ಲಿ ನಡೆದ ದೌರ್ಜನ್ಯಗಳಿಗಾಗಿ ಪಶ್ಚಾತ್ತಾಪ ವ್ಯಕ್ತಪಡಿಸುವುದಕ್ಕೆ ಬದಲಾಗಿ ಕ್ರೈಸ್ತಮತಕ್ಕಾಗಿ ಅಲ್ಲಿಯ ಜನರು ಹಾತೊರೆದಿದ್ದರು ಮತ್ತು ಈ ಮತದ ಮೂಲಕ ಅವರೆಲ್ಲ ಪಾವನಗೊಂಡರು ಎಂದದ್ದಲ್ಲದೆ ಅವರು ಮುನ್ನ ಅವಲಂಬಿಸಿದ್ದ (ಕ್ರೈಸ್ತೇತರ) ಮತಗಳೆಲ್ಲ ಪ್ರತಿಗಾಮಿ-ತಿರೋಗಾಮಿ ಧೋರಣೆಯವರೆಂದೂ ಹೇಳಿದರು. ಇದಕ್ಕಾಗಿ ವೆನಿಝುಲಾ ರಾಷ್ಟ್ರಾಧ್ಯಕ್ಷರೂ ಸೇರಿದಂತೆ ಅನೇಕರು ಪ್ರತಿಭಟಿಸಿ ಪೋಪರಿಂದ ಕ್ಷಮೆಯನ್ನು ನಿರೀಕ್ಷಿಸಿ ಆಗ್ರಹಿಸಿದರು.

(ಡಾಲ್ಲಸ್ ನ್ಯೂಸ್, 22-5-2007) ಪೋಪರು ಕ್ರೈಸ್ತೇತರ ಮತಗಳಿಗೆ ಮರಳುವುದೆಂದರೆ ಅದು ಪತನವೇ ಹೌದೆಂದು ಹೇಳಿದ್ದಲ್ಲದೆ ವರ್ಜೀನಿಯಾ (ಉತ್ತರ ಅಮೆರಿಕ) ಪ್ರಾಂತದಲ್ಲಿ ಕ್ರೈಸ್ತರಿಂದ ನಡೆದ ದೌರ್ಜನ್ಯವನ್ನು ಅವರು ಸಮರ್ಥಿಸಿಕೊಂಡುದಕ್ಕಾಗಿ ಸ್ವಯಂ ಜಾರ್ಜ್ ಬುಷ್ ಅಸಮ್ಮತಿಯನ್ನು ತೋರಿದ್ದಲ್ಲದೆ ವಿಷಾದಿಸಿದುದೂ ಪ್ರಸಿದ್ಧವಿದೆ. ಇದೀಗ ಬ್ರೆಜಿಲ್ಲಿನ ಬುಡಕಟ್ಟು ಜನರೂ ಅನೇಕ ಪೆರುವಿಗರೂ ಪೋಪರ ಧೋರಣೆಗಳಿಗೆ ವಿರೋಧ ಮಾಡಿದ್ದಾರೆ. ಹೀಗೆ ಜಾಗತಿಕ ಸ್ತರದಲ್ಲಿ ಕ್ರೈಸ್ತ ಮತಾಂಧತೆಯಿನ್ನೂ ಮೆರೆದಿದೆ. ಅದಕ್ಕೆ ಅಲ್ಲಲ್ಲಿ ಸಮರ್ಥ ಪ್ರತಿರೋಧವೂ ನಡೆಯುತ್ತಿದೆ. ಹೀಗಿರಲು ಮಿಷನರಿಗಳಿಂದ ಸಾಕಷ್ಟು ಹಾನಿಯಾದ ಭಾರತದಲ್ಲಿ ಆ ಬಗೆಗೆ ಪುನಶ್ಚಿಂತನೆ ಇದೀಗ ಆರಂಭಗೊಂಡಿದ್ದೇ ತಪ್ಪೆಂದು ಆಗ್ರಹಿಸುವುದು ಅಯುಕ್ತ.

'ಅಲ್ಪಸಂಖ್ಯಾತ'ರೆಂಬ ಒಂದೇ ಕಾರಣದಿಂದ ಸಲ್ಲದ ಸವಲತ್ತುಗಳನ್ನೆಲ್ಲ ಗಳಿಸಿ 'ಬಹುಸಂಖ್ಯಾತ'ರಿಗೇ ಅಭದ್ರತೆಯನ್ನೂ ನಷ್ಟ-ನೋವುಗಳನ್ನೂ ತರುವಂಥ ಕುಸಂಪ್ರದಾಯವು ನಮ್ಮೀ ದೇಶದಲ್ಲಿ ಸ್ವಾತಂತ್ರ್ಯದ ಬಳಿಕ ಭಯಾನಕವಾಗಿ ಬೆಳೆದಿದೆ. ವಸ್ತುತಃ ಸನಾತನಧರ್ಮೀಯರೇ ಅಲ್ಪಸಂಖ್ಯಾತರೆಂಬ ತಥ್ಯವನ್ನು ಅಜಕ್ಕಳ ಗಿರೀಶ್ ಭಟ್ ಸಮರ್ಥವಾಗಿ ನಿರೂಪಿಸಿದ್ದಾರೆ. ತಥಾಕಥಿತ ಬುದ್ಧಿಜೀವಿಗಳು ಒಂದು ಕಡೆ ಲಿಂಗಾಯತರು ಹಿಂದುಗಳಲ್ಲ, ಶೂದ್ರರು ಹಿಂದುಗಳಲ್ಲ, ದಲಿತರು ಹಿಂದುಗಳಲ್ಲ ಎಂದು ಆರ್ಭಟಿಸುತ್ತ ಮತ್ತೊಂದೆಡೆ ಇವರೆಲ್ಲರನ್ನೂ ಒಟ್ಟಾಗಿ ಸೇರಿಸಿ ಹಿಂದುಗಳೇ ಶೇ. 80ರಷ್ಟು ಇರುವ ಈ ದೇಶದಲ್ಲಿ ಕ್ರೈಸ್ತ-ಮುಸ್ಲಿಂ ಜನತೆಯಿಂದ ಭಯವೇನೆಂದು ದಬಾಯಿಸುತ್ತಾರೆ. ವಸ್ತುತಃ ಓಟ್‌ಬ್ಯಾಂಕ್ ರಾಜಕೀಯಕ್ಕೆ ಹಿಂದುಗಳಲ್ಲದವರೇ ಹಿರಿಯ ಅವಲಂಬನ. ಈ ಎಲ್ಲ ತಥಾಕಥಿತ ವಿಚಾರವಾದಿಗಳ ಸದ್ಯದ ಸ್ವರ್ಗವೆನಿಸಿರುವ, ಮಾವೋಯಿಸ್ಟ್-ನಕ್ಸಲೈಟ್-ರೆಡ್ ಕಾರಿಡಾರ್ ತಂಡಗಳ ಗಂಗೋತ್ರಿಯೆನಿಸಿರುವ ಚೀನಾ ದೇಶದಲ್ಲಿ ಇಸ್ಲಾಂ-ಕ್ರೈಸ್ತ ಮತಗಳನ್ನು ಅಂಕೆಯಲ್ಲಿಟ್ಟಿರುವ ಪರಿ ಜಗಜ್ಜಾಹೀರಲ್ಲವೇ? ಅಲ್ಲಿ ಸರಕಾರಿ ಉದ್ಯೋಗದಲ್ಲಿರುವ ಮುಸ್ಲಿಮರಿಗೆ ನಮಾಜಿಗಾಗಲಿ, ರೋಜಾಕ್ಕಾಗಲಿ, ಹಜ್ ಯಾತ್ರೆಗಾಗಲಿ ಮುಕ್ತಾವಕಾಶವಿಲ್ಲ. ಮಸೀದಿಗಳಿಗೂ ನೂರೆಂಟು ನಿರ್ಬಂಧ. ಈ ಬಗೆಗೆ ಮಾತ್ರ ನಮ್ಮ ದೇಶದ 'ಬುದ್ಧಿಜೀವಿ'ಗಳು ಚಳವಳಿ ಹೂಡುವುದಿಲ್ಲ, ಮುಸ್ಲಿಮ್ ಸಂಘಟನೆಗಳೂ ಹಿರಿದಾಗಿ ಪ್ರತಿಭಟಿಸಿಲ್ಲ (ಇಂಟರ್‌ನ್ಯಾಷನಲ್ ಹೆರಾಲ್ಡ್ ಟ್ರಿಬ್ಯೂನ್, 19-10-2008).

ಆಸ್ಟ್ರೇಲಿಯಾದಂಥ ಪ್ರಜಾಪ್ರಭುತ್ವವಿರುವ ದೇಶ ಕೂಡ ಈಚೆಗೆ ಅಲ್ಲಿಯ ಅಲ್ಪಸಂಖ್ಯಾತರಿಗೆ (ವಿಶೇಷವಾಗಿ ಮುಸ್ಲಿಮರಿಗೆ) ಮೊದಲು ದೇಶಕ್ಕೆ ಬೆಲೆ ನೀಡಿ, ಆ ಮೇಲೆ ಮತ ಎಂದು ಸ್ಪಷ್ಟವಾದ ಎಚ್ಚರಿಕೆ ನೀಡಿರುವುದು ಸುವೇದ್ಯ. ಆ ದೇಶದ ಖಜಾಂಚಿ ಪೀಟರ್ ಕೋಸ್ಟೆಲ್ಲೋ ಹೇಳಿದ ಈ ಪರಿಯ ಎಚ್ಚರಿಕೆಯ ನುಡಿಗಳನ್ನು ಪ್ರಧಾನಿ ಹೊವಾರ್ಡ್ ಸಮರ್ಥಿಸಿರುವುದನ್ನೂ ಗಮನಿಸಬೇಕು. (ಸಿಡ್ನಿ ಮಾರ್ನಿಂಗ್ ಹೆರಾಲ್ಡ್ 25-2-2006). ನಿನ್ನೆ ಮೊನ್ನೆ ಹುಟ್ಟಿದ ವಸಾಹತುಶಾಹಿ ದೇಶವೇ ಇಂಥ ನಿಲುವನ್ನು

ಹೊಂದಿದಯೆಂದರೆ ಅನೇಕ ಶತಾಬ್ದಗಳಿಂದ ದಾಳಿಗೆ ತುತ್ತಾದ ಭಾರತದ ನಿಲುವು ಹೇಗಿರ ಬೇಕು?

ಈಚಿನ ವರ್ಷಗಳಲ್ಲಿ ಸನಾತನ ಧರ್ಮೀಯರಿಗೆ ಭಾರತದಲ್ಲಿಯೇ ಅಭದ್ರತೆಯ ಭಾವ ಬರುತ್ತಿದೆ. ಈ ಒಂದು ದೇಶವನ್ನುಳಿದು ಮತ್ತೆಲ್ಲಿಯೂ ಸನಾತನ ಧರ್ಮಕ್ಕೆ ನೆಲೆ-ಬೆಲೆಗಳಿಲ್ಲ. ಜತೆಗೆ ಇಲ್ಲಿಯ ಪ್ರತಿಯೊಂದು ನದಿ-ಬೆಟ್ಟ-ಮರ-ಮಣ್ಣು-ಕಲ್ಲುಗಳೊಟ್ಟಿಗೂ ಸನಾತನ ಧರ್ಮೀಯರು ಇತಿಹಾಸಪೂರ್ವದಿಂದಲೂ ಅಸ್ಮಿತಾಭಾವದ ತಾದಾತ್ಮ್ಯವನ್ನೂ ಪೂಜನೀಯತೆಯನ್ನೂ ಬೆಳೆಸಿಕೊಂಡು ಬಂದಿದ್ದಾರೆ. ಹೀಗಿರಲು ಜಗತೀಕೃತ (Globalised) ಮತಗಳಾದ ಇಸ್ಲಾಂ-ಕ್ರೈಸ್ತಗಳಾಗಲಿ ಈ ಮತಗಳಷ್ಟೇ ಅನ್ಯ ಧರ್ಮಾಸಹಿಷ್ಣುಗಳೂ ರಾಷ್ಟ್ರೈಕ್ಯಘಾತುಕರೂ ಆದ ವಾಮಪಂಥೀಯರಾಗಲಿ ಸತತವಾಗಿ ರಾಷ್ಟ್ರ-ಅಂತಾರಾಷ್ಟ್ರ ಸ್ತರದಲ್ಲಿ ನಡೆಸುತ್ತಿರುವ ಸಮರೋಪಾದಿಯ ವೈರ ಪ್ರಸಾರ ದಮನೋಪಾಯಗಳನ್ನು ಕಂಡಾಗ ಇಲ್ಲಿಯ ಜನ ಕಂಗಾಲಾಗುವುದು ಸಹಜ. ಅಮರನಾಥ ಯಾತ್ರಿಕರಿಗೆ ತುಂಡು ನೆಲ ಕೊಡಲು ಮಾಡಿದ ತಗಾದೆಯೊಂದು ಸಾಲದೇ?.

ಈಚೆಗಷ್ಟೇ ಗೋವಾದಲ್ಲಿ ದುಷ್ಕರ್ಮಿಗಳು ಬಸದಿ, ದೇವಾಲಯಗಳಿಗೆ ನುಗ್ಗಿ ಮಹಾವೀರಸ್ವಾಮಿ, ಗಣಪತಿ, ದೇವಿ ಮುಂತಾದ ಪೂಜಾಮೂರ್ತಿಗಳನ್ನು ಧ್ವಂಸಮಾಡಿದ ಹದಿಮೂರು ಮುಖ್ಯ ಘಟನೆಗಳಾದುವು. ಇವೆಲ್ಲ ಕಳೆದ ಎರಡು ವರ್ಷಗಳಲ್ಲಿ ಆದದ್ದು. ಇದೆಲ್ಲ ದೊಡ್ಡ ಸುದ್ದಿಯೇ ಆಗುವುದಿಲ್ಲ. ನಮ್ಮ ಕೋಮುಸೌಹಾರ್ದ ವೇದಿಕೆಗಳಿಗೆ ಲೆಕ್ಕಕ್ಕೂ ಬರುವುದಿಲ್ಲ. (The Pioneer, 21-10-2008). ಕಳೆದ ಲೋಕಸಭಾ ಚುನಾವಣೆಯಲ್ಲಿ ಉತ್ತರ ಪ್ರದೇಶದಿಂದ ಗೆದ್ದ 59 ಎಂಪಿಗಳ ಪೈಕಿ ಯಾರೊಬ್ಬರೂ ಶೇ. 20ಕ್ಕಿಂತ ಹೆಚ್ಚಿನ ಮತವನ್ನು ಗಳಿಸಿಲ್ಲ! ಇವರ ಗೆಲುವಿಗೆ ಮುಖ್ಯ ಕಾರಣ ಮತ-ಜಾತಿ ಕೇಂದ್ರಿತವಾದ ಓಟ್‌ಬ್ಯಾಂಕ್ ರಾಜಕೀಯ. ಇದೀಗ ಉತ್ತರ ಪ್ರದೇಶದಲ್ಲಿ ಮುಸ್ಲಿಮರು ಅಲ್ಪಸಂಖ್ಯಾತರಾಗಿಲ್ಲವೆಂಬುದು ಜಗದ್ವಿದಿತ. ವಿಶೇಷತಃ ಕ್ರೈಸ್ತ-ಇಸ್ಲಾಂ ಮತಗಳು ಬಲವಾದ ಓಟ್‌ಬ್ಯಾಂಕ್ ಆಗಿ ಪರಿವರ್ತಿತವಾಗಿರುವುದಂತೂ ಸರ್ವವೇದ್ಯ.

ಈ ಕಾರಣದಿಂದಲೇ ರಾಜಕಾರಣಿಗಳಲ್ಲಿ ಈ ಮತೀಯರ ಓಲೈಕೆಗೆ ಸ್ಪರ್ಧೆ ಏರ್ಪಟ್ಟಿದೆ. ಇದು ದೇಶದ ಮತಾತೀತ ದೃಷ್ಟಿಗೂ ಸುಭದ್ರತೆಗೂ ಅದೆಷ್ಟು ಅಪಾಯಕಾರಿ ಎಂಬುದನ್ನು ಹೇಳಬೇಕಿಲ್ಲ. (ಅರುಣ್ ಶೌರಿಯವರ The Parliamentary System ಗ್ರಂಥವನ್ನೇ ನೋಡಬಹುದು, ಪೃ. 34) ಹನೀಫ್ ಸಂದರ್ಭದಲ್ಲಿ ನಮ್ಮ ಮುಖ್ಯಮಂತ್ರಿ-ಪ್ರಧಾನಮಂತ್ರಿಗಳೇ ಮೊದಲಾದವರು ತೋರಿದ ಕಾಳಜಿಯ ತಿಲಾಂಶ ಕೂಡ ಲಕ್ಷ್ಮಣಾನಂದ ಸರಸ್ವತಿಗಳ ಬರ್ಬರ ಹತ್ಯಾ ಸಂದರ್ಭದಲ್ಲಿ ಮರುಕಳಿಸದಿದ್ದ ಪರಿಯಾಗಲಿ, ಈ ಪರಿಯ ಅಭದ್ರತೆಯನ್ನು ದ್ಯೋತಿಸುವ ಸಣ್ಣಪುಟ್ಟ ತುಣುಕುಗಳು. ಇವೆಲ್ಲಕ್ಕಿಂತ ಮಿಗಿಲಾದದ್ದು ಪಟ್ಟಭದ್ರ ಅಮೆರಿಕದ ಕ್ರೈಸ್ತ ಹಿತಾಸಕ್ತಿಗಳಿಂದ ಈ ಹದಿಮೂರು ವರ್ಷಗಳ ಮುನ್ನ ಆರಂಭವಾದ 'ಜೋಷುವಾ ಪ್ರಾಜೆಕ್ಟ್' ಇದು ಇಡಿಯ ಜಗತ್ತಿನ

ಅಂಗುಲಂಗುಲವನ್ನೂ ಶೋಧಿಸಿ ಪ್ರತಿಯೊಂದು ದೇಶದಲ್ಲಿರುವ ಎಲ್ಲ ಬಗೆಯ ಜನ-ಜನಾಂಗಗಳ, ಮತ-ವರ್ಗಗಳ ಎಲ್ಲ ವಿವರಗಳ ಗಣತಿಯನ್ನೂ ಮಾಡಿ ಎಲ್ಲಿಯ ವರೆಗೆ ಕ್ರೈಸ್ತಮತ ಪಸರಿಸಿದೆ, ಮತ್ತಿನ್ನೆಲ್ಲೆಲ್ಲಿ ಸಾಗಬೇಕಿದೆ, ಎಲ್ಲಿ ಎಷ್ಟರ ಮಟ್ಟಿಗೆ ಅನುಕೂಲ ಪ್ರತಿಕೂಲ-ಸನ್ನಿವೇಶಗಳಿವೆಯೆಂಬುದನ್ನೆಲ್ಲ ಅಸಾಧಾರಣ ದಕ್ಷತೆಯಿಂದ ವಿವರವಾಗಿ ಬಿಡಿಸಿಟ್ಟಿದೆ. ಇದು ಅಂತರ್ಜಾಲದಲ್ಲಿ ಎಲ್ಲರಿಗೂ ಸಿಗಬಲ್ಲ ಮಾಹಿತಿ (www.joshuaproject.net ಮತ್ತು www.uscwm.org).

ಈ ಜೋಷುವಾ ಪ್ರಾಜೆಕ್ಟ್ ಇಡಿಯ ಈಶಾನ್ಯ ಭಾರತ, ಗೋವಾ ಮತ್ತು ಕೇರಳವೆಲ್ಲ ಸಮಗ್ರವಾಗಿ ಕ್ರಿಸ್ತೀಕೃತವಾಗಿದೆಯೆಂದು ಹೇಳಿರುವುದಲ್ಲದೆ ಅನೇಕ ರಾಜ್ಯಗಳ ಭಾಗಗಳನ್ನೂ ಗುರುತಿಸಿದೆ. (ಒರಿಸ್ಸಾ, ಆಂಧ್ರ, ಬಂಗಾಳ ಇತ್ಯಾದಿ) ತಮಿಳುನಾಡನ್ನು ಸಂಪೂರ್ಣವಾಗಿ ಕ್ರೈಸ್ತಾನುಕೂಲಿಯೆಂದೂ ತೋರಿಸಿದೆ (ಅಲ್ಲಿ ಐವತ್ತು ವರ್ಷಗಳಿಂದ ಸನಾತನ ಧರ್ಮದ್ವೇಷವನ್ನೇ ತುಂಬಿಕೊಂಡು ದಬ್ಬಾಳಿಕೆ ಮಾಡುತ್ತಿರುವ ಡಿಕೆ, ಡಿಎಂಕೆ, ಎಡಿಎಂಕೆ ಮುಂತಾದ 'ಮತಾತೀತ' (ಸೆಕ್ಯುಲರ್ ಸರಕಾರಗಳ ಸೇವೆಯಿದು!) ನಮ್ಮಲ್ಲಿ ಅನೇಕರು ದಲಿತರು ಹಿಂದುಗಳಲ್ಲ, ಬುಡಕಟ್ಟು ವರ್ಗಗಳು ಹಿಂದುಗಳಲ್ಲ, ಅವರು ಮತಾಂತರಗೊಂಡರೆ ನಿಮಗೇಕೆ ಸಂಕಟ? ಎಂದು ಸನಾತನಧರ್ಮದ ಸೇವಕರನ್ನು ಹೀಗಳೆಯುತ್ತಾರೆ. ಆದರೆ ಜೋಷುವಾ ಪ್ರಾಜೆಕ್ಟ್ ಇವರೆಲ್ಲರನ್ನೂ ಹಿಂದುಗಳೆಂದೇ ಸ್ಪಷ್ಟವಾಗಿ ಗುರುತಿಸಿದೆ.

ಒಂದು ಕಡೆ ನಮ್ಮ ದೇಶವು ಬಹುಸಂಸ್ಕೃತಿಯ ತವರು, ಇದನ್ನು ಹೀಗೆಯೇ ಉಳಿಸಬೇಕು, ಹಿಂದೂಕರಣವೆಂಬ ಸುನಾಮಿ ಇದನ್ನೆಲ್ಲ ನಾಶ ಮಾಡುತ್ತದೆ ಎಂದು ಅಬ್ಬರಿಸುವ 'ಬುದ್ಧಿಜೀವಿ'ಗಳು ಎಲ್ಲ ಸಂಸ್ಕೃತಿ ವೈವಿಧ್ಯವನ್ನೂ ನುಂಗಿ ನೊಣೆಯುವ ಕ್ರೈಸ್ತ-ಇಸ್ಲಾಂ ಮತೋನ್ಮಾದವನ್ನು ಮಾತ್ರ ತಪ್ಪಿಯೂ ನೆನೆಯುವುದಿಲ್ಲ. ವಸ್ತುತಃ ಸನಾತನ ಧರ್ಮವೊಂದೇ ಇಂದು ಬಹುಸಂಸ್ಕೃತಿಗೆ ಆಲಯ, ಆಶ್ರಯ. ಇಲ್ಲಿಯ ಬಹುಸಂಸ್ಕೃತಿಯ ಬಗೆ ಇಡಿಯ ಜಗತ್ತಿಗೇ ಬೆರಗು ತಂದಿದೆ. ಮಾತೆತ್ತಿದರೆ ವರ್ಣ-ಜಾತಿ-ಆಶ್ರಮ ಎಂದೆಲ್ಲ ತಿವಿಯುವ 'ವಿಚಾರವಾದಿ'ಗಳು ಇವೆಲ್ಲವೂ ಬಹುಸಂಸ್ಕೃತಿಯ ಪೋಷಕ ದ್ರವ್ಯಗಳೆಂಬುದನ್ನು ಜಾಣ್ಮೆಯಿಂದ ಮರೆತಿದ್ದಾರೆ. ವ್ಯತ್ಯಾಸಗಳು ಲೋಕಸಿದ್ಧ. ಆದರೆ ವೈಷಮ್ಯಗಳು ದುಷ್ಟತೆಯಿಂದ ಪ್ರೇರಿತ. ಇಂಥ ಜಾತಿ-ವರ್ಣ ವೈಷಮ್ಯ ಕೂಡದೆನ್ನೋಣ. ಆದರೆ ಬಹು ಸಂಸ್ಕೃತಿಯನ್ನು ಬಯಸುತ್ತಲೇ ಅದನ್ನು ಸಮರಸವಾಗಿ ರೂಪಿಸಿ ಕಾಪಿಟ್ಟ ಸನಾತನ ಧರ್ಮವನ್ನು ವ್ಯಾಸಂಗ-ಗಾಂಭೀರ್ಯಗಳಿಲ್ಲದೆ ದೂಷಿಸುವುದು ಅಯುಕ್ತ. ವಸ್ತುತಃ ಎಂದಿನಿಂದಲೂ ಈ ಬಗೆಯ ಸನಾತನ ಧರ್ಮೀಯವೂ ಸಮರಸವೂ ಆದ ಬಹು ಸಂಸ್ಕೃತಿಯೇ ಕ್ರೈಸ್ತ ಮಿಷನರಿಗಳಿಗೆ ಮತಾಂತರಕ್ಕೆ ಪ್ರತಿಬಂಧಕವಾಗುತ್ತ ಬಂದಿದೆ. ಇದೀಗ ಜೋಷುವಾ ಪ್ರಾಜೆಕ್ಟಿನಲ್ಲಿಯೂ ಅದೇ ಚರ್ಚೆಗೆ ಬಂದಿದೆ. ನಮ್ಮ ಅಸಂಖ್ಯ ಭಾಷೆಗಳು, ದೇವತೆಗಳು, ಸಂತರು, ಶ್ರದ್ಧಾಸ್ಥಾನಗಳು, ಆರಾಧನಾ ವಿಧಾನಗಳೇ ನಮ್ಮನ್ನು ರಕ್ಷಿಸಿವೆ.

ಹೀಗಾಗಿಯೇ ಬಿಲಿಯನ್‌ಗಟ್ಟಲೆ ಡಾಲರುಗಳನ್ನು ಸುರಿದಿದ್ದರೂ ನಮ್ಮ ಸಮುದಾಯದ ಒಟ್ಟು 2695 ಪಂಗಡಗಳ ಪೈಕಿ 311 ಗುಂಪುಗಳನ್ನು ಮತಾಂತರಿಸಲಾಗಿದೆ. (ಸಾಮಾನ್ಯವಾಗಿ ಹಣಕಾಸಿನ ಪ್ರಲೋಭನೆ, ಜಾತಿ ವೈಷಮ್ಯ, ಬಡತನ-ಅಪಮಾನಗಳ ನೋವಿನಿಂದಲೇ ಬುಡಕಟ್ಟುಗಳ ಮತಾಂತರವಾಗುತ್ತಿದೆಯೆಂದು ಅನೇಕರ ಭಾವನೆ. ಆದರೆ ಆ ಮುಗ್ಧ ಜನರ ಶ್ರದ್ಧೆ ಮಿಗಿಲಾದದ್ದು. ಬಲಾತ್ಕಾರ, ಬೆದರಿಕೆ ಹಾಗೂ ಕೂಟತಂತ್ರಗಳೇ ಅವರನ್ನು ಮತಾಂತರಿಸುತ್ತಿವೆ. ಹೀಗಾಗಿ ಆ ಜನರನ್ನು ಭರವಸೆ, ಪ್ರೀತಿ, ನೆರವು, ಗೌರವಗಳಿಂದ ನಿರಂತರವಾಗಿ ಕಾಣಬೇಕಾದ ಬಾಧ್ಯತೆ ಎಲ್ಲ ಸನಾತನ ಧರ್ಮೀಯರದಾಗಿದೆ. ಮುಖ್ಯವಾಗಿ ಮಠಾಧಿಪತಿಗಳಿಲ್ಲಿ ಗಮನ ಹರಿಸಬೇಕು). ತಥಾಕಥಿತ ಬುದ್ಧಿಜೀವಿಗಳು ಒಂದೆಡೆ ಅಮೆರಿಕವನ್ನೂ ಅದರ ಎಂಎನ್‌ಸಿಗಳನ್ನೂ ಹಳಿಯುತ್ತಲೇ ಅಲ್ಲಿಂದ ಹರಿದು ಬರುತ್ತಿರುವ ಹಣದ ಹೊಳೆಯ ಮೂಲಕವೇ ಮತಾಂತರಕ್ಕೆ ಮುನ್ನುಗ್ಗಿರುವ ಕ್ರೈಸ್ತರನ್ನು ನಿರ್ವಿಶಂಕವಾಗಿ ಬೆಂಬಲಿಸುತ್ತಾರೆ!

ಇಲ್ಲಿಯ ಕ್ರೈಸ್ತರಿಗೆ ತೊಂದರೆಯಾಯಿತೆಂದರೆ ಫ್ರಾನ್ಸ್ ದೇಶದ ವಿದೇಶಾಂಗ ಸಚಿವರಿಗೇಕೆ ಸಂಕಟ? ಅಮೆರಿಕದ ಮಂದಿಗೇಕೆ ಆತಂಕ? ನಮ್ಮ ದೇಶದೊಳಗೆ ನಡೆದ ಘಟನೆಗಳ ಸಾಧಕ-ಬಾಧಕಗಳನ್ನೂ ನಾವು ನಾವೇ ಬಗೆಹರಿಸಿಕೊಳ್ಳಬೇಕಲ್ಲದೆ ಬೇರೆ ದಿಕ್ಕಿನತ್ತ ನೋಡುವುದೇಕೆ? ಇದು ಕ್ರೈಸ್ತ ಸಂಘಟನೆಗಳ ರಾಷ್ಟ್ರ ನಿಷ್ಠೆಯನ್ನೇ ಪ್ರಶ್ನಿಸುವುದಲ್ಲವೆ! ಪೋಪರು ರಾಜಕೀಯವಾಗಿಯೂ ಒಂದು ದೇಶದ ಅಧಿಪತಿ. ಇಲ್ಲಿಯ ಕ್ರೈಸ್ತರು ಆತನಿಗೇ ಮೊದಲ ನಿಷ್ಠೆ ತೋರುವುದೆಂದರೆ ಹಿಂದೆ ಖಿಲಾಫತ್ತಿನಲ್ಲಾದಂತೆ ಆಗದೆ? ಹಾಗಲ್ಲ, ಪೋಪರು ಕೇವಲ ಮತಾಚಾರ್ಯರಾದರೆ ಅವರು ಭಾರತಕ್ಕೆ ಬಂದಾಗ ಕೊಟ್ಟ ಅಧಿಕೃತ ಸರಕಾರೀ ಸ್ವಾಗತಕ್ಕೆ ಅವರೊಬ್ಬ ರಾಷ್ಟ್ರಾಧಿಪತಿ ಎಂದದ್ದಾದರೂ ಏಕೆ?

**ಮನುಸ್ಮೃತಿ ಎಂಬುದು ಪಳೆಯುಳಿಕೆ ಮಾತ್ರ**

ಮೂಲತಃ ಸ್ವಾತಂತ್ರ್ಯೋತ್ತರ ಭಾರತವು ನೆಹರೂ ಕಪಿಮುಷ್ಟಿಗೆ ಸಿಲುಕಿ ತನ್ಮೂಲಕ ಕಮ್ಯೂನಿಸ್ಟ್-ಇಸ್ಲಾಮಿಕ್-ಕ್ರಿಶ್ಚಿಯನ್ ತಂತ್ರಗಳ ಪಾಲಾದದ್ದು ಇತಿಹಾಸ. ಇದಕ್ಕೆ ಪುಟಕೊಟ್ಟಂತೆ ಮತಾಂಧ ಮೌಲಾನಾ ಅಬ್ದುಲ್ ಕಲಾಂ ಆಜಾದ್ ವಿದ್ಯಾಮಂತ್ರಿಯಾದದ್ದು ಭಾರತೀಯ ವಿವೇಕಕ್ಕೇ ಗರ ಬಡಿದಂತಾಯ್ತು. ಇಲ್ಲವಾದರೆ ಈಶಾನ್ಯ ಭಾರತದ ಬುಡಕಟ್ಟುಗಳನ್ನೆಲ್ಲ ಕ್ರೈಸ್ತ ಮಿಷನರಿಗಳಿಗೆ ಧಾರೆಯೆರೆಯಲಾಗುತ್ತಿತ್ತೇ? 1956ರಲ್ಲಿ ನಿಯೋಗಿ ಆಯೋಗವು ಮಧ್ಯ ಪ್ರದೇಶದಲ್ಲಿ ಮತಾಂತರ ನಿಷೇಧದ ಕಾನೂನನ್ನು ತರಬೇಕೆಂದಾಗ ನೆಹರೂ ಅದನ್ನು ತಿರಸ್ಕರಿಸಿದ್ದಾಗಲಿ, ಬಳಿಕ ಲೋಕಸಭೆಯಲ್ಲಿ ಕೂಡ ಈ ಪ್ರಸ್ತಾವವನ್ನು ಬರದಂತೆ ತಡೆದದ್ದಾಗಲಿ ಇದೀಗ ರಹಸ್ಯವಾಗಿಲ್ಲ. ಈಶಾನ್ಯ ಭಾರತದಲ್ಲಿ ಬ್ಯಾಪ್ಟಿಸ್ಟ್ ಚರ್ಚುಗಳು ಭಯೋತ್ಪಾದನೆಯನ್ನು ಬೆಂಬಲಿಸುತ್ತಿರುವುದಿಂದು ಲೋಕ ವಿಖ್ಯಾತ. ತ್ರಿಪುರಾದ ಮುಖ್ಯಮಂತ್ರಿಯೇ ಇದನ್ನು ಹೇಳಿದ್ದಾರೆ.

ಕ್ರೈಸ್ತರು ಹಿಂದುಗಳನ್ನು ನವರಾತ್ರಿಯ ದುರ್ಗಾಪೂಜೆಯನ್ನೇ ಮಾಡದಂತೆ ತಡೆದಿದ್ದರು. ಇಂತಾದರೂ ಧೀರರಾದ ಜಮಾತಿಯಾ ಬುಡಕಟ್ಟು ಜನರು ಬೆದರಿಕೆಯನ್ನು ಧಿಕ್ಕರಿಸಿ ಪೂಜಿಸಿದ ಸಂಗತಿ ಬಿಬಿಸಿಯಲ್ಲಿಯೇ ವರದಿಯಾಗಿದೆ. (18-4-2000, 2-10-2000). ಈ ಕ್ರೈಸ್ತ ಭಯೋತ್ಪಾದಕರು ಐಎಸ್‌ಐ ಸಂಪರ್ಕವನ್ನೂ ಹೊಂದಿ ಬಾಂಗ್ಲಾದೇಶದಿಂದ ಮಾರಕಾಸ್ತ್ರಗಳನ್ನು ತರಿಸಿಕೊಂಡಿದ್ದರೆಂದೂ ವರದಿ ಬಂದಿವೆ. ಅಷ್ಟೇಕೆ? ಮೊನ್ನೆ ನಡೆದ ಲಕ್ಷ್ಮಣಾನಂದ ಸರಸ್ವತಿಗಳ ಕಗ್ಗೊಲೆಯನ್ನೇ ಹೋಲುವಂತೆ 2000ರ ಅಗಸ್ಟ್‌ನಲ್ಲಿ ಸ್ವಾಮಿ ಶಾಂತಿಕಲಿ ಮಹಾರಾಜರನ್ನೂ ಜಮಾತಿಯಾ ಬುಡಕಟ್ಟಿನ ಯಾಜಕ ಲವಕುಮಾರರನ್ನೂ ಬರ್ಬರವಾಗಿ ಕೊಂದ ಸಂಗತಿಯನ್ನು ನಮ್ಮ 'ಬುದ್ಧಿಜೀವಿ' ಪತ್ರಿಕೆಗಳು ಸುದ್ದಿಯಾಗಿಸದಿದ್ದರೂ ಬಿಬಿಸಿ ತಿಳಿಸಿದೆ (28-8-2000, 27-12-2000). ಈಶಾನ್ಯ ಭಾರತದ ಹಿಂದೂ-ಬೌದ್ಧ ದೇವಾಲಯಗಳೂ ದಾಳಿಗೆ ತುತ್ತಾಗಿವೆ. ತ್ರಿಪುರ ಒಂದರಲ್ಲಿಯೇ 2001ರಲ್ಲಿ ಭಯೋತ್ಪಾದನ ದಾಳಿಗಳಾಗಿವೆ, 405 ಜನರು ಸತ್ತಿದ್ದಾರೆ. ನಾಗಾಲ್ಯಾಂಡಿನ NSCN ಎಂಬ ಪ್ರತ್ಯೇಕತಾವಾದಿ ಒಕ್ಕೂಟವೂ ಕ್ರೈಸ್ತರ ನಾಯಕತ್ವದಲ್ಲಿದೆ. ಇದು UNOಗೆ ತಾವೊಂದು ಸ್ವತಂತ್ರ ದೇಶವೆಂದು ಗಣಿಸಲ್ಪಡಬೇಕೆಂದು ಎರಡು ಬಾರಿ ಬೇಡಿಕೆ ಸಲ್ಲಿಸಿತ್ತು. ಇದರ ಕಾರಣದಿಂದಲೇ ನಾಗಾಲ್ಯಾಂಡಿನ ಹೆಚ್ಚಿನ ಬ್ಯಾಂಕುಗಳು ದಿವಾಳಿ ಎದ್ದಿವೆ. ಈ ಸಂಘಟನೆಯು ಹಿಂದೂ ಪತ್ರಿಕೆಗೆ ನೀಡಿದ ಸಂದರ್ಶನದಲ್ಲಿ ತಾನು ಕಾಶ್ಮೀರ ದಲ್ಲಿಯ ಸೈನಿಕರಿಗೆ ಆತಂಕವಾಗುವಂತೆ ಈಶಾನ್ಯದಲ್ಲಿ ಭಯೋತ್ಪಾದನೆ ಮಾಡುತ್ತಿರುವುದಾಗಿ ಹೇಳಿಕೊಂಡಿದೆ. ಇನ್ನು ಮೇಘಾಲಯದ ಕಥೆಯೂ ಇಷ್ಟೇ. ಸೆಂಗ್ ಖಾಸೀ ಬುಡಕಟ್ಟಿನ ಜನರನ್ನು ಚರ್ಚ್ ಮತಾಂತರಗೊಳಿಸಲು ಬೆದರಿಕೆ ಹಾಕುತ್ತಿದೆ. ಇದಕ್ಕೆಲ್ಲ ಕಿರೀಟವಿಟ್ಟಂತೆ ನಮ್ಮ ಸರಕಾರಗಳು ಪೊಲೀಸ್, ಸೈನ್ಯ ಮುಂತಾದ ಭದ್ರತಾ ವ್ಯವಸ್ಥೆಗಳ ಸ್ಥೈರ್ಯವನ್ನೇ ಕುಗ್ಗಿಸುವಂತೆ 'ಅಲ್ಪಸಂಖ್ಯಾತ'ರ ತುಷ್ಟೀಕರಣ ಮಾಡುತ್ತಿವೆ. ಮಹಾದಂಡ ನಾಯಕ ಮಾಣಿಕ್ ಷಾ ಅವರ ಅಂತ್ಯಕ್ರಿಯೆಗೆ ಅಧಿಕೃತವಾಗಿ ಯಾವ ಕೇಂದ್ರ ಮಂತ್ರಿಯೂ ಹೋಗಲಿಲ್ಲ. ಆದರೆ ಕೇರಳ ನನ್ ಒಬ್ಬರನ್ನು ವ್ಯಾಟಿಕನ್ ಸಂತ ಎಂದು ಗೌರವಿಸಿದಾಗ ಆಸ್ಕರ್ ಫರ್ನಾಂಡಿಸ್ ತೆರಳಿದ್ದರಲ್ಲದೆ ನಮ್ಮ ಪತ್ರಿಕೆಗಳು 'ಭಾರತದ ಪ್ರಥಮ ಸಂತೆ' ಎಂದು ಅಬ್ಬರದ ಪ್ರಚಾರ ನೀಡಿದುವು. ಈ ಬಗೆಗೆ ಫ್ರಾಂಕ್ವಾ ಗೋತಿಯೇ ವಿವರವಾಗಿ ಬರೆದಿದ್ದಾರೆ. ಕರ್ನಲ್ ವಿ. ವಸಂತ್ ವೀರಮರಣವನ್ನು ಅಪ್ಪಿದಾಗ ಅವರ ಅಂತ್ಯಕ್ರಿಯೆಗೆ ಹೋಗದಿದ್ದ ಅಂದಿನ ಮುಖ್ಯಮಂತ್ರಿ ಕುಮಾರಸ್ವಾಮಿ ಡಾ. ಹನೀಫರನ್ನು ಸಂತೈಸುವದರಲ್ಲಿ ಎಲ್ಲಿಲ್ಲದ ಕಾತರ ತೋರಿದ್ದರು. ಇಂಥ ಘಟನೆಗಳು ನೂರಾರು.

ಮತಾಂತರಗೊಂಡರೆ ದಲಿತರ, ಬುಡಕಟ್ಟು ವರ್ಗಗಳ ಮಾನೋನ್ನತಿ, ವಿದ್ಯೋನ್ನತಿ, ಆರ್ಥೋನ್ನತಿ ಮತ್ತು ಪರಮಾರ್ಥೋನ್ನತಿಗಳೂ ಆಗುತ್ತವೆಂದು ಕ್ರೈಸ್ತ ಮಿಷನರಿಗಳ ಹಾಗೂ ಅವರನ್ನು ಸಮರ್ಥಿಸುವ 'ಬುದ್ಧಿಜೀವಿ'ಗಳ ನಿಲುವು. ಇಂತಾದಲ್ಲಿ ಮತಾಂತರ

ಗೊಂಡ ಬಳಿಕವೂ ಅದೇಕೆ 'ದಲಿತತ್ವ' ಬೇಕು? ಅದೇಕೆ 'ಬುಡಕಟ್ಟುತನ' ಬೇಕು? ಹಾಗಲ್ಲ, ಅವರಿಗಿನ್ನೂ ಅಭ್ಯುದಯಕ್ಕೆ ಅವಕಾಶ ಬೇಕು, ಸರಕಾರದ ಸವಲತ್ತುಗಳು ಬೇಕೆಂದಾದಲ್ಲಿ ಭಗವಾನ್ ಕ್ರಿಸ್ತನಿಗೂ ಈ 'ಪಾಪಿ'ಗಳನ್ನು ಸರ್ವೋನ್ನತರನ್ನಾಗಿಸಲು ಚೈತನ್ಯವಿಲ್ಲವೆಂದಾಯಿತಷ್ಟೆ! ಇಂಥ ದುರ್ಬಲವೂ ಪರಾವಲಂಬಿಯೂ ಆದ ಮತಕ್ಕೆ ಸ್ವರ್ಗವನ್ನು ಎಲ್ಲ ಕ್ರೈಸ್ತರಿಗೂ ಕೊಡಿಸುವ ಸಾಧ್ಯತೆಯಾದರೂ ಹೇಗೆ? ಬೆಟ್ಟಕ್ಕೇ ಹಾರದವರು ಅಟ್ಟಕ್ಕೆ ಹಾರಿಯಾರೇ? ಹೀಗೆಂದೊಡನೆಯೇ ಇದು ಹಿಂದೂ ಮತಾಂಧತೆ, ಪುರೋಹಿತಶಾಹಿ, ಕಟುಕಿ ಎಂದು ಬ್ರ್ಯಾಂಡ್ ಆಗುತ್ತದೆ. ಆದರೆ ಕಂದಮಾಲಿನಲ್ಲಿ ಆಗಿರುವುದಾದರೂ ಇದೇ ತೆರನಾದ ಸಮಸ್ಯೆ ತಾನೆ! ಅಲ್ಲಿಯ ಹಿಂದೂ ಬುಡಕಟ್ಟುಗಳಾದ ಕಂದರಿಗೂ ಮತಾಂತರಗೊಂಡ 'ದಲಿತ'ರಾಗಿಯೇ ಇರುವ ಪಣಾಗಳಿಗೂ ಸುಮಾರು 25 ವರ್ಷಗಳಿಂದ ಸೆಣಸಾಟ ಸಾಗಿದೆ. ಅಲ್ಲಿ ಕ್ರೈಸ್ತ ಪಟ್ಟಭದ್ರಶಾಹಿ ಜಿದ್ದುಕಟ್ಟಿ ಕುಯ್ ಜನಾಂಗಕ್ಕೆ ಮತಾಂತರಗೊಂಡ ಮೇಲೂ ಪರಿಶಿಷ್ಟ ಬುಡಕಟ್ಟುಗಳ ಸ್ಥಾನವನ್ನು ದಕ್ಕಿಸಿತು. ಆದರೆ ಇದೀಗ ಪಣಾ ಗುಂಪಿಗಿನ್ನೂ ಆ ಭಾಗ್ಯ ಒದಗಿಲ್ಲ. ಈ ಬಗೆಗೆ ಅನುಜಾ ಪ್ರಶಾರ್ ವಿಶೇಷವಾಗಿ ಬರೆದಿದ್ದಾರೆ. (The Indian Star) ಒಟ್ಟಿನಲ್ಲಿ 'ದಲಿತತ್ವ'ವು ಹೋಗದಿದ್ದ ಬಳಿಕ ಸನಾತನ ಧರ್ಮದ 'ದಲಿತ'ನಿಗೂ, ಕ್ರೈಸ್ತಮತದ ದಲಿತ'ನಿಗೂ ಏನು ವ್ಯತ್ಯಾಸ? ವಸ್ತುತಃ ಇಡಿಯ ದೇಶದಲ್ಲಿ ದಲಿತರ ವಿರುದ್ಧ ಅಸ್ಪರ್ಶತೆಯ ದೌರ್ಜನ್ಯವನ್ನು ಮಾಡುವುದು ಜಾಮೀನುರಹಿತ ಅಪರಾಧ. ಇದು ಹಿಂದುಗಳು ಮಾಡಿದಾಗ ಮಾತ್ರ ಅನ್ವಿತ. ಇಂಥ ಕಾನೂನಿನಿಂದ ವಿಶೇಷವಾದ ಪರಿಣಾಮವೇನೂ ಆಗಿಲ್ಲ. ಇದೊಂದು ತೋರಿಕೆಯ ತಂತ್ರವೆಂದೇ ಆಪಾದಿಸುವುದಾದರೆ, ಇದೇ ರೀತಿಯ 'ದುರ್ಬಲ' ಕಾನೂನನ್ನು ರಾಷ್ಟ್ರಾದ್ಯಂತ ಮತಾಂತರದ ವಿರುದ್ಧವೂ ಮಾಡಲು ಏನಡ್ಡಿ?

ನಮ್ಮ 'ವಿಚಾರವಾದಿ'ಗಳು ಮತ್ತೆ ಮತ್ತೆ ಮನುಸ್ಮೃತಿಯನ್ನೇ ಸನಾತನ ಧರ್ಮದ ಸಾರ್ವಕಾಲೀನ ಕಟ್ಟಳೆಯೆಂದು ಬಿಂಬಿಸುತ್ತಿದ್ದಾರೆ. ಆದರೆ ಯಾವುದೇ ಸ್ಮೃತಿಯು ರಾಜನಿಂದ ವಿಧಾಯಕವಾಗಿ ಬರದೆ ವ್ಯವಹಾರದಲ್ಲಿ ಉಳಿಯದು. ಇದನ್ನು ಧರ್ಮಶಾಸ್ತ್ರಜ್ಞರೆಲ್ಲ ಬಲ್ಲರು. ಇಂದು 'ಮತನಿರಪೇಕ್ಷ' ಎನಿಸಿದ ಭಾರತ ದೇಶದಲ್ಲಿ ಸಂವಿಧಾನವೇ ಸರ್ವೋಚ್ಚ. ಇಂದು ನಮ್ಮೆಲ್ಲರ ವರ್ತಮಾನ ಜೀವನದ ಸ್ಮೃತಿ. ಇದನ್ನು ಎಲ್ಲ ಹಿಂದೂಗಳೂ ಒಪ್ಪಿದ್ದಾರೆ. ಹೀಗಾಗಿ ಮನುಸ್ಮೃತಿಯೊಂದು ಪಳೆಯುಳಿಕೆ ಮಾತ್ರ. ಅದೇನಿದ್ದರೂ ಸಂಶೋಧಕರ ಅಧ್ಯಯನ ಸಾಮಗ್ರಿ. ದಿಟವೇ, ಅಲ್ಲಿ ಅನೇಕ ಮೌಲಿಕ ಹಾಗೂ ಸಾರ್ವತ್ರಿಕ ಪ್ರಯೋಜನದ ವಿಚಾರಗಳಿವೆ. ಅಂಥವನ್ನೆಲ್ಲ ಪಿ.ವಿ. ಕಾಣೆ, ರಾಮ್ ಗೋಪಾಲ್, ಎಂ. ರಾಮಾಜೋಯಿಸರಂಥವರು ಸಂಗ್ರಹಿಸಿಕೊಟ್ಟಿದ್ದಾರೆ. ಹೀಗಾಗಿ ಯಾತನಾಮಯವಾದೊಂದು ಗ್ರಂಥವನ್ನೇ ಹಿಡಿದು ಜಗ್ಗಾಡುವುದು ಯುಕ್ತವಲ್ಲ. ಇಲ್ಲ, ಅದರ ದುಷ್ಪರಿಣಾಮಗಳು ಇಂದೂ ಇವೆಯೆಂದು ಹೇಳುವುದಾದರೆ ಇಸ್ಲಾಮಿನಲ್ಲಿ-ವಿಶೇಷತಃ ಭಾರತದಲ್ಲಿ-

ಇಂದೂ ಚಾಲ್ತಿಯಲ್ಲಿರುವ ಹದೀಸ್ ಮತ್ತು ಷರಿಯತ್‌ಗಳ ಓರೆ-ಕೋರೆಗಳ ಬಗ್ಗೇಕೆ ಮೌನ? ಕ್ರೈಸ್ತರಂತೂ ತುಂಬ ಜಾಣ್ಮೆಯಿಂದ ಸನಾತನ ಧರ್ಮವನ್ನು ಗೇಲಿಗೆರೆಯುತ್ತಲೇ ಬಂದಿದ್ದಾರೆ. (ಉದಾ: ಬೈಬಲ್ ಅನ್ನು 'ಸತ್ಯವೇದ' ಎಂದು ಪ್ರಚುರಿಸಿದ್ದಾರೆ. ಹಾಗೆಂದರೆ ನಮ್ಮ ವೇದಗಳು 'ಅಸತ್ಯ' ಎಂದಲ್ಲವೇ ಧ್ವನಿ! ಹಾಗಲ್ಲ, ಅದು ಭಾರತೀಕರಣ (Indianising) ರೀತಿ ಎಂದಲ್ಲಿ 'ಕ್ರೈಸ್ತವೇದ' ಎಂದಲ್ಲವೇ ಹೇಳಬೇಕು! ನಮ್ಮಲ್ಲಿ ನಾಟ್ಯವೇದ, ಆಯುರ್ವೇದ, ರಾಮಕೃಷ್ಣ ವಚನವೇದ ಹೀಗೆಲ್ಲ ಇವೆಯಲ್ಲದೆ ಸಮಗ್ರ ಸತ್ಯವನ್ನೇ ಗುತ್ತಿಗೆಗೆ ತೆಗೆದುಕೊಂಡಿಲ್ಲ). ಮೊನ್ನೆ ಮೊನ್ನೆಯ 'ಸತ್ಯದರ್ಶಿನಿ'ಯೂ ಅದರ ಒಂದು ಶನಿಸಂತಾನ ತಾನೆ! ಸೀತಾರಾಮ ಗೋಯಲ್ ಅವರ History of Hindu Christian Encounters ಗ್ರಂಥವು ಈ ಎಲ್ಲ ಅಂಶಗಳನ್ನೂ ವಿಶದವಾಗಿ (ಕ್ರಿ.ಶ. 4ನೆಯ ಶತಾಬ್ದದಿಂದ 1996ನೆಯ ಇಸವಿಯವರೆಗೆ ನಡೆದದ್ದನ್ನೆಲ್ಲ) ನಿರೂಪಿಸಿದೆ. ದಿಟವೇ, ಸನಾತನ ಧರ್ಮದಲ್ಲಿಯೂ ದ್ವೈತಾದ್ವೈತಾದಿ ಮತಕೋಲಾಹಲಗಳಿವೆ, ಶೈವ-ವೈಷ್ಣವ, ವೈದಿಕ-ಅವೈದಿಕ ಸಂಘರ್ಷಗಳಿವೆ. ಆದರೆ ಇವಾವುವೂ ಮೂಲಭೂತವೆನಿಸಿದ ದರ್ಶನಶಾಸ್ತ್ರೀಯ ಘನತೆಯಿಂದ ದೂರ ಸರಿದಿಲ್ಲ. ಹಾಗೆ ಜಾರಿದ ಹಲಕೆಲವು ಯತ್ನಗಳನ್ನು ಯಾವುದೇ ಶಾಖೆಯ ವಿದ್ವತ್ಪರಂಪರೆ ಎತ್ತಿಹಿಡಿದಿಲ್ಲ. ನಮ್ಮಲ್ಲಿ ನ್ಯಾಯಶಾಸ್ತ್ರವು ಇಂಥ ಎಲ್ಲ ದುರ್ವಾದಗಳನ್ನೂ ಚಪಲಚಿತ್ತರ ಚೀಟೆಗಳೆಂದು ಧಿಕ್ಕರಿಸಿ ನಿಗ್ರಹಸ್ಥಾನದಲ್ಲಿ (ಸೋಲಿನ ಲಕ್ಷಣವಾಗಿ) ನಿರೂಪಿಸಿವೆ.

ಸನಾತನ ಧರ್ಮವು ಮುಖ್ಯವಾಗಿ ಎಲ್ಲ 'ಮಿತಿ'ಗಳನ್ನೂ ಎಲ್ಲ ಬದ್ಧತೆ (Conditioning) ಗಳನ್ನೂ ಮೀರಬೇಕೆಂದೂ ಕೇವಲ ಚೈತನ್ಯವೊಂದಲ್ಲದೆ ಮತ್ತೆಲ್ಲ ನಾಮ-ರೂಪಗಳೂ ದೇಶ-ಕಾಲ ಸಮುತ್ಪನ್ನವಾದ ಕಾರ್ಯ-ಕಾರಣಭಾವಗಳೂ ಸಾಪೇಕ್ಷ ಹಾಗೂ ತೋರಿಕೆ ಎಂದೂ ಸಾರಿದೆ. ಇಲ್ಲಿರುವ ಆಧ್ಯಾತ್ಮಿಕ ಸ್ವಾತಂತ್ರ್ಯ ಮತ್ತೆಲ್ಲಿಯೂ ಇಲ್ಲ. ಇದೊಂದು ತೆರನಾಗಿ ವಿಶ್ವದ ಆಧ್ಯಾತ್ಮ ಸಂಸ್ಕೃತಿಯ backbone. ಸನಾತನ ಧರ್ಮೀಯರು ಸ್ವರಾಜ್ಯಕ್ಕಿಂತ ಸ್ವರಾಜ್ಯವನ್ನು (ನಿರ್ವಿಶೇಷವೂ ಭೇದಾತೀತವೂ ಆದ ಕೇವಲಾನಂದವನ್ನು) ಮಿಗಿಲಾಗಿ ಭಾವಿಸಿದವರು. ಏಕೆಂದರೆ ಆತ್ಮೌಪಮ್ಯವಿದ್ದಲ್ಲಿ ಎಲ್ಲ ತೆರನಾದ ಸ್ವಾತಂತ್ರ್ಯ-ಮೌಲ್ಯಗಳಿಗೂ ಅರ್ಥವಿರುತ್ತದೆ. ಈ ಉನ್ನತೋನ್ನತ ದರ್ಶನವೇ ಜೈನ, ಬೌದ್ಧ, ಶೈವ, ಶಾಕ್ತ, ವೈಷ್ಣವಾದಿ ಸಕಲ ಮತಗಳಿಗೂ ಹರಿದು ಬಂದಿತು. ಇದನ್ನು ಸರಿಯಾಗಿ ಪರಿಭಾವಿಸದಿದ್ದಲ್ಲಿ ಅನ್ಯಾಯವಾದೀತು. ಹೀಗೆಂದೊಡನೆಯೇ ನಮ್ಮ ನಾಡಿನ 'ವಿಚಾರವಾದಿ'ಗಳು ಸನಾತನ ಧರ್ಮದ ಅನುಷ್ಠಾನದಲ್ಲಿರುವ ಅಸಂಖ್ಯ ಲೋಪ ದೋಷಗಳನ್ನು ಎತ್ತೆತ್ತಿ ತಿವಿಯುತ್ತಾರೆ. ಇತರ ಮತಗಳ ತತ್ತ್ವಗಳೊಡನೆ ಹೋಲಿಸಿ ಅವನ್ನು ಮುಗಿಲೆತ್ತರಕ್ಕೆ ಎತ್ತುತ್ತಾರೆ. ಈ ಬಗೆಗೆ ಪಿ.ವಿ. ಕಾಣೆಯವರು ತಮ್ಮ ಮೇರು ಕೃತಿ 'History of Dharmashastra'ದಲ್ಲೇದೋ ಉತ್ತರ ನೀಡಿದ್ದಾರೆ. ಹೋಲಿಕೆ ಎಂಬುದು ಸಮಾನ ಸ್ತರದಲ್ಲಿ ಸಾಗಬೇಕು. ಸನಾತನ ಧರ್ಮದ ತತ್ತ್ವಗಳನ್ನು ಉಳಿದೆಲ್ಲ

ಮತಗಳ ತತ್ವಗಳೊಡನೆಯೂ ಇದರ ಆಚರಣೆಯನ್ನು ಉಳಿದೆಲ್ಲವುಗಳ ಆಚರಣೆಯೊಡನೆಯೂ ಹೋಲಿಸಬೇಕು. ಆಗ ದಿಟವೇನೆಂದು ತಿಳಿಯುತ್ತದೆ. ಆದರೆ ಇಂಥ ವೈಜ್ಞಾನಿಕ ಸಂತುಲನ ಸಾಗಿಲ್ಲ. ಹೀಗೆ ಕಂಡಾಗ ನಿಸ್ಸಂದೇಹವಾಗಿ ಉಳಿದೆಲ್ಲ ಮತಗಳ ಮೌಲ್ಯಗಳಿಗಿಂತ ಸನಾತನ ಧರ್ಮದ ತತ್ವಗಳು ಉದಾರ, ಸಾರ್ವಕಾಲಿಕ ಮತ್ತು ಅಧ್ಯಾತ್ಮ ಸಮೃದ್ಧ ಎಂದು ತಿಳಿಯುತ್ತದೆ. ಈ ಕಾರಣದಿಂದಲೇ ಗಾಂಧೀಜಿ ಮತಾಂತರವನ್ನು ಸ್ಪಷ್ಟವಾಗಿ ವಿರೋಧಿಸಿದರು, ತಾವು ಸನಾತನಿ ಎಂದು ಹೇಳಿಕೊಳ್ಳುವಲ್ಲಿ ಹೆಮ್ಮೆ ತೋರಿದರು.

'I call myself a *Sanatani Hindu* because I believe in the *Vedas* and *Upanishads*, the *Puranas* and all that goes by the name of Hindu scriptures and therefore in *avataras* and rebirth; I believe in the *Varnashrama Dharma* in a sense. In my opinion strictly *Vedic* but not in its presently popular and distorted crude sense; I believe in the protection of cow. I do not disbelieve in *Murthipuja' (Young India, 10-6-1921)* 'I would also dispute your claim that Christianity is the only true religion' *(Harijan, 3-6-1937)*

'I hold that proselytisation under the clock of humanitarian work is unhealthy to say the least' *(Young India, 23-4-1931)*

'I see many Christian Indians are almost ashamed of their birth, certainly of their ancestral religion.... it is a violence done to their Country' *(Young India, 8-8-1925)*

'Conversion nowadays has become a matter of business.... to those who would convert India (Hindus), might it not be said 'Physician, heal yourself' *(Young India, 23-8-1931)*

'If I had power and could legislate, I should stop all proselytizing. In Hindu house holds the advent of a missionary has meant the disruption of the family' *(Harijan, 5-11-1935)*

'I regard Jesus as a great teacher of humanity, but I do not regard him as the only begotten son of God.... Metaphysically we are all sons of God.... God cannot be the exclusive Father and I cannot ascribe exclusive divinity to Jesus'. *(Harijan, 3-6-1937).*

ಇದಕ್ಕಿಂತ ಸಮರ್ಥವೂ, ಪರಿಪೂರ್ಣವೂ ತೀಕ್ಷ್ಣವೂ ಆದ ರೀತಿಯಲ್ಲಿ ಮತ್ತಾವ ಸನಾತನ ಧರ್ಮೀಯನೂ ಮತಾಂತರದ ಬಗೆಗೆ ಹೇಳಲಾರ, ಹೇಳಬೇಕಿಲ್ಲ ಕೂಡ. ಮೂವತ್ತು ಮೂರು ಕೋಟಿ ದೇವತೆಗಳನ್ನೂ ಮತ್ತೂ ಹೆಚ್ಚಿನ ಸಾಧು-ಸಂತ, ಬಾಬಾಗಳನ್ನೂ ಒಪ್ಪಿ ಆರಾಧಿಸುವ ನಮಗೆ ಸೆಮೆಟಿಕ್ ಮೂಲದ ಕ್ರಿಸ್ತನಾಗಲಿ, ಒಬ್ಬ ಅಲ್ಲಾ ಆಗಲಿ ಭಾರವೇ? ಬಾಹ್ಯವೇ? ಆದರೆ ಸೆಮೆಟಿಕ್ ಮೂಲದ ಪ್ರತ್ಯೇಕತಾವಾದಿ-ಸಾಮ್ರಾಜ್ಯಶಾಹಿ ಮತ ಭ್ರಾಂತರಿಗಿದು ಸಾಕೇ? ಇಡಿಯ ವಿಶ್ವವನ್ನೇ ನುಂಗಿ ನೊಣೆಯದೆ ತೃಪ್ತಿಯಿಲ್ಲ. ಒಮ್ಮೆ ಸುಮ್ಮನೆ ಜೋಷುವಾ ಪ್ರಾಜೆಕ್ಟ್‌ನ ಮುಖಪುಟವನ್ನೋ ಆಯಾ ಮತ ಗ್ರಂಥಗಳಿಗೆ ಅವರು ಸ್ವಗೋಷ್ಠಿಗಳಲ್ಲಿ ಮಾಡಿಕೊಳ್ಳುವ ವ್ಯಾಖ್ಯಾನವನ್ನೋ ಎಲ್ಲಕ್ಕಿಂತ ಮಿಗಿಲಾಗಿ ಆಚರಣೆಯನ್ನೇ ಪರಿಶೀಲಿಸಿದರೆ ಸಾಕು, ತಿಳಿಯುತ್ತದೆ.

ಮುಖ್ಯವಾಗಿ ಸನಾತನ ಧರ್ಮವು ಯಾವುದೇ ವೈಯಕ್ತಿಕ ಸಾಕ್ಷಾತ್ಕಾರಗಳಿಗೂ ಪ್ರವಾದಿಕ ಗ್ರಂಥಗಳಿಗೂ ಕಟ್ಟು ಬಿದ್ದಿಲ್ಲ. ಇಸ್ಲಾಂ-ಕ್ರೈಸ್ತಾದಿ ಮತಗಳು ಹಾಗಲ್ಲ. ಅಲ್ಲಿಯ ಜನರು People of the book (ಈ ಮಾತು ಬೈಬಲ್-ಕುರಾನ್‌ಗಳಲ್ಲಿಯೇ ಬರುತ್ತದೆ). ನಮ್ಮ ವೇದಕ್ಕೆ ಎಷ್ಟೇ ಮಹತ್ವವಿರಲಿ, ಅದನ್ನೂ ಮೀರಬೇಕೆಂಬುದೇ ತತ್ವ. ಸ್ವಯಂ ವೇದವೇ ಹೇಳುತ್ತದೆ. 'ಯಾರಿಗೆ ಒಳಗಿನ 'ವೇದ' ತಿಳಿದಿದೆಯೋ ಅವರಿಗೆ ಹೊರಗಿನ ವೇದ ತಾನಾಗಿ ಒಲಿದು ಬರುತ್ತದೆ. ಯಾರಿಗೆ ನಮ್ಮೊಳಗಿನ ವೇದದ (ಅರಿವು) ಪ್ರಜ್ಞೆಯಿಲ್ಲವೋ ಅವರು ಬರಿಯ ಹೊರಗಿನ ವೇದದಿಂದ ಏನನ್ನು ತಾನೆ ಮಾಡುತ್ತಾರೆ?' *(ಋಕ್ ಸಂ-16439)* (ಜ್ಞಾನದ ಬಳಿಕ) ವೇದಗಳು ವೇದಗಳಾಗಿ ಉಳಿದಿರುವುದಿಲ್ಲ. (ಆತ್ಮಾನುಭವ ಕಾಲದಲ್ಲಿ) ವೇದವೇ ಇಲ್ಲವಾಗುತ್ತದೆ' *(ಬೃಹದಾರಣ್ಯ ಕೋಪನಿಷತ್ತು IV-322)* ಭಗವದ್ಗೀತೆಯಾದರೂ ಇದನ್ನೇ ಹೇಳಿದೆ *(II 41, 42, 43, 44, 45, 46)* ಇದು ಕೇವಲ ವೇದಕಾಲೀನ ನಿಲುವಲ್ಲ, ಉತ್ತರೋತ್ತರವಾಗಿಯೂ ಇದೆಯೆಂಬುದಕ್ಕೆ ಸನಾತನ ಧರ್ಮದ ಪ್ರಧಾನ ಪ್ರತಿನಿಧಿಗಳಲ್ಲೊಬ್ಬರಾದ ಆದಿಶಂಕರರ ಭಾಷ್ಯಗಳನ್ನೇ ನೋಡಬಹುದು. ಅಲ್ಲಿ ಅವರು ಪ್ರತ್ಯಕ್ಷಾನುಭವಕ್ಕೆ ಶ್ರುತಿಯು ವಿರೋಧವಿದ್ದಲ್ಲಿ ಆ ವೇದವನ್ನು ದೂರಕ್ಕೆ ತಳ್ಳಿಂದೇ ಹಲವು ಕಡೆ ಹೇಳಿದ್ದಾರೆ *(ಗೀತಾ ಭಾಷ್ಯ XVIII 66, ಬೃಹದಾರಣ್ಯಕ ಭಾಷ್ಯ III-31)* ಅನುಭವವೇ ವೇದಕ್ಕೆ ಒರೆಗಲ್ಲೆಂದಿದ್ದಾರೆ *(ಶಾರೀರ ಭಾಷ್ಯ III-221, II-114, III-27)* ವೇದವೂ ಸೇರಿದಂತೆ ಎಲ್ಲ ಶಾಸ್ತ್ರಗಳೂ ಅವಿದ್ಯೆ-ಯೆಂದಿದ್ದಾರೆ (ಅಧ್ಯಾಸ ಭಾಷ್ಯ) ಇನ್ನು ದೇವರ ಬಗೆಗೆ ಹೇಳುವಾಗಲೂ ಅಷ್ಟೇ. ಸ್ವಯಂ ಋಗ್ವೇದವೇ. ಸೃಷ್ಟಿ ರಹಸ್ಯವು ಆ ದೇವರಿಗೂ ಗೊತ್ತೋ ಇಲ್ಲವೋ' ಎಂದು ಸಂದೇಹಿಸುವಷ್ಟು ವೈಜ್ಞಾನಿಕತೆಯನ್ನು ಮೆರೆದಿದೆ *(ನಾಸದೀಯ X-1297)*. ಇಂಥ ನೂರಾರು, ಅಲ್ಲಲ್ಲ, ಸಾವಿರಾರು ಪ್ರಮಾಣಗಳನ್ನು ವಿವಿಧ ಶಾಸ್ತ್ರಗಳಿಂದ ತಂದೊಡ್ಡಬಹುದಾದರೂ ವಿಸ್ತರದ ಭೀತಿಯಿಂದ ನಿಲ್ಲಿಸಬೇಕಿದೆ. ಇನ್ನು ಅನ್ಯಮತೀಯರಲ್ಲಿ ಭೇದ ಮಾಡುವಂಥದ್ದು ವೈದಿಕ ದರ್ಶನಕ್ಕೆ ದೂರ. ಶಂಕರರು ಗೌಡಪಾದಕಾರಿಕಾ ಭಾಷ್ಯದಲ್ಲಿ ಹೇಳುತ್ತಾರೆ:

'ಆತ್ಮೈಕ ದರ್ಶನವನ್ನೇ ಮಾಡುವವನಿಗೆ ಯಾರು ತಾನೇ ಅನ್ಯರು? ವೇದಧರ್ಮಕ್ಕೆ ಹೊರಗಿನವರೆಂಬುದಿಲ್ಲ. ತನ್ನ ಕೈ ಕಾಲುಗಳೊಡನೆ ತಾನೇ ತಗಾದೆ ಮಾಡಲು ಸಾಧ್ಯವೇ? ರಾಗ-ದ್ವೇಷಗಳಿಗೆ ಆಸ್ಪದವಿಲ್ಲದ ಕಾರಣ ಇದು ಸಮ್ಯಗ್ದರ್ಶನ' *(III-17).* ಅವರು ತಮ್ಮ ಶಾರೀರಿಕ ಭಾಷ್ಯದ ಕಡೆಗೆ ವೇದ ದರ್ಶನವನ್ನು ಒಪ್ಪದವನಿಗೂ ಮೋಕ್ಷವಿದೆ-ಯೆಂದು ಸಾರಿದ್ದಾರೆ *(IV-722).* ಸ್ಮೃತಿಗಳು ಹೇಳುವ ವೇದಾಧಿಕಾರದ ಪ್ರಶ್ನೆಗೂ ಉತ್ತರಿಸುತ್ತ ಸ್ತ್ರೀ-ಶೂದ್ರರಿಗೆ ವೇದಾಧಿಕಾರವಿಲ್ಲವೆಂದು ಶಾಸ್ತ್ರಗಳು ಹೇಳಿದ್ದರೂ ಅಡ್ಡಿಯಿಲ್ಲ, ವೇದವಿಲ್ಲದೆಯೇ ಅವರಿಗೆ ಮೋಕ್ಷ ಸಿಗಲು ಸಾಧ್ಯ, ಜ್ಞಾನಕ್ಕೆ ಎಲ್ಲರೂ ಅರ್ಹರು ಎಂದು ಸ್ಪಷ್ಟೀಕರಿಸುತ್ತಾರೆ. *(ಶಾರೀರಿಕ ಭಾಷ್ಯ 1338, ತೈತ್ತಿರೀಯ ಭಾಷ್ಯ, ಶಿಕ್ಷಾವಲ್ಲಿ 11).* ಆತ್ಮಜ್ಞಾನವಿಲ್ಲದೆ ಕೇವಲ ಹುಟ್ಟಿನಿಂದಷ್ಟೇ ಬ್ರಾಹ್ಮಣ ಎನ್ನುವುದು ಅಗ್ಗದ ಮಾತು, ಜ್ಞಾನವೇ ಬ್ರಾಹ್ಮಣ್ಯದ ಮುಖ್ಯ ಲಕ್ಷಣ *(ಬೃಹದಾರಣ್ಯಕ ಭಾಷ್ಯ 423).*

ಮೀಮಾಂಸಕರಂಥ ಕಟ್ಟಾ ವೇದ ಪ್ರತಿಪಾದಕರೂ ಕರ್ಮನಿಷ್ಠೆಯೇ ವೇದದ ಪರಮಾರ್ಥ, ಸ್ವರ್ಗ-ನರಕಾದಿಗಳೆಲ್ಲ ಅಲ್ಪದೃಷ್ಟಿಯವು ಹಾಗೂ ಬರಿದೇ ಆಸಕ್ತಿ ಕೆರಳಿಸಲು ಮಾತ್ರ ಎನ್ನುತ್ತಾರೆ. ಶಂಕರರಂತೂ ಬ್ರಹ್ಮ ಪ್ರತಿಪಾದಕವಾದ ಅನುಭವ ವಾಕ್ಯಗಳನ್ನುಳಿದು ವೇದರಾಶಿಯೆಲ್ಲ ಅರ್ಥವಾದವಷ್ಟೇ *(ಸಾಂಕೇತಿಕವಲ್ಲದೆ ವಾಸ್ತವಿಕವಲ್ಲ)* ಎನ್ನುತ್ತಾರೆ. ಇನ್ನು ಸ್ಮೃತಿಗಳಂಥ ಆಚಾರ-ವ್ಯವಹಾರದ ಸಂಗತಿಗಳಾದರೂ ಕಾಲಾಧೀನವೇ. 'ಕಾಲೇ ಕಾಲೇ ನವಾಚಾರೋ ನವಾ ವಾಣೀ ಮುಖೇ ಮುಖೇ' ಎಂಬುದು ತತ್ತ್ವ. ಮನುಸ್ಮೃತಿಯು ಕೃತಯುಗಕ್ಕೆ, ತ್ರೇತೆಗೆ ಯಾಜ್ಞವಲ್ಕ್ಯ ಸ್ಮೃತಿ, ದ್ವಾಪರಕ್ಕೆ ಶಂಖಲಿಖಿತ ಸ್ಮೃತಿ, ಕಲಿಯುಗಕ್ಕೆ ಪರಾಶರಸ್ಮೃತಿ ಎಂಬ ಮಾತಿದೆ. ಈ ಸ್ಮೃತಿಗಳನ್ನೂ ಕಾಲಕಾಲಕ್ಕೆ ವಿಭಿನ್ನ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಸಾಮಾನ್ಯ ಧರ್ಮಗಳು (ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ) ಎಲ್ಲರಿಗೂ ಮುಖ್ಯ.

ಇದೇ ವಿಶೇಷ ಧರ್ಮಗಳಾದ ವರ್ಣ-ಆಶ್ರಮಾದಿಗಳಿಗಿಂತ ಪ್ರಮುಖ ಎಂದು ಸ್ವಯಂ ಮನ್ವಾದಿ ಸಕಲ ಸ್ಮೃತಿಗಳೂ ಸಾರಿವೆ. ಗೌತಮ ಧರ್ಮ ಸೂತ್ರವಂತೂ ನಲವತ್ತು ಸಂಸ್ಕಾರಗಳಿದ್ದೂ ಎಂಟು ಆತ್ಮಗುಣಗಳಿಲ್ಲದಿದ್ದರೆ ಅಂಥ ವ್ಯಕ್ತಿಯು ಬ್ರಹ್ಮಸಾಯುಜ್ಯ ವನ್ನು ಹೊಂದುವುದಿಲ್ಲ. ಆದರೆ ಎಂಟು ಆತ್ಮಗುಣಗಳಿದ್ದು (ಎಲ್ಲ ಜೀವರಾಶಿಗಳಲ್ಲಿ ದಯೆ, ಕ್ಷಮೆ, ಅನಸೂಯತ್ವ, ಉದಾರತೆ, ಶೌಚ, ಅನಾಯಾಸ, ಅಸ್ಪೃಹೆ, ಮಂಗಳ) ನಲವತ್ತು ಸಂಸ್ಕಾರಗಳಲ್ಲಿ ಏನೊಂದಿಲ್ಲದಿದ್ದರೂ ಆ ಮಾನವರು ಬ್ರಹ್ಮದಲ್ಲಿ ಒಂದಾಗು ತ್ತಾನೆಂದು ಘೋಷಿಸಿದೆ. *(I-825, 26).* ಇವಿಂತಿರಲಿ, ಇವನ್ನೂ ಸಹ ಮೀರಿ ಸನಾತನ ಧರ್ಮವು ನಿಲ್ಲಬಲ್ಲದು. ಏಕೆಂದರೆ ಸತ್ಯವಿರುವುದು ನಮ್ಮೊಳಗಲ್ಲದೆ ಮತ್ತಾವುದೇ ಪ್ರವಾದಿಯ ಮಾತಿನಲ್ಲಲ್ಲ, ಪುಸ್ತಕಗಳಲ್ಲಿ ಅಲ್ಲ. ಜಾತಿ-ವರ್ಣ-ದೇಶ-ಜನಾಂಗಾದಿ ಮಾನವ ಸಮಾಜದ ಭೇದಗಳಿರಲಿ, ಜಡ-ಚೇತನ, ಪ್ರಾಣಿ-ಸಸ್ಯ ಮುಂತಾದ ಭೇದಗಳೂ

ಔಪಾಧಿಕ. ಗಾಢ ನಿದ್ರೆಯಲ್ಲಿ, ಉತ್ಕಟಾನುಭವ ಕಾಲದಲ್ಲಿ ತೋರದ, ಕಾಡದ ಭೇದಗಳು, ವೈಷಮ್ಯಗಳು ಎಚ್ಚರ-ಕನಸುಗಳಲ್ಲಿ ಕಾಡಲು ನಮ್ಮೊಳಗಿನ ಅವಿದ್ಯೆಯೇ ಕಾರಣ. ಈ ನಾಮ-ರೂಪಗಳ ಉಪಾಧಿಯನ್ನು ಮೀರುವುದೇ ಆಧ್ಯಾತ್ಮ ಸಾಧನೆಯೆಂದು ಸಾರಿದ ಅವಸ್ಥಾತ್ರಯ ಪ್ರಕ್ರಿಯೆ ಸನಾತನ ಧರ್ಮದ ಹೃದಯ. ಇದನ್ನೇ ರಮಣ ಮಹರ್ಷಿಗಳು ಬೋಧಿಸಿದ್ದು, ಶಂಕರರು ಸಾಧಿಸಿದ್ದು. ಹೀಗಾಗಿ ಸನಾತನ ಧರ್ಮವು ತನ್ನ ತತ್ತ್ವ ದೃಷ್ಟಿಯನ್ನು ಸದಾ ಮುಕ್ತವಾಗಿರಿಸಿದೆ, ಈ ಸಾಧ್ಯತೆಯು ಸೆಮೆಟಿಕ್ ಮೂಲಕದ ಮತಗಳಲ್ಲಿಲ್ಲ. ಆದರೆ ಒಬ್ಬ ಸನಾತನ ಧರ್ಮೀಯು ಅವುಗಳನ್ನೂ ಈ ವಿಶಾಲ ದರ್ಶನದ ಹಿನ್ನೆಲೆಯಲ್ಲಿ ಆತ್ಮ ತತ್ತ್ವ ಪ್ರದೀಪ್ತವಾಗಿಯೇ ಉದಾರ, ಗಂಭೀರ ರೀತಿಯಲ್ಲಿ ವ್ಯಾಖ್ಯಾನಿಸಿಲ್ಲ. ಸ್ವಾಮಿ ವಿವೇಕಾನಂದ, ಸ್ವಾಮಿ ರಾಮತೀರ್ಥ, ಗಾಂಧೀಜಿ ಮುಂತಾದವರೆಲ್ಲ ಇದನ್ನೇ ಮಾಡಿದ್ದಾರೆ. ಇದು ನನ್ನ ನಿಲುವೂ ಆಗಿದೆ.

ಇದೇ ಸಂದರ್ಭದಲ್ಲಿ ಹಲವಾರು ಆರ್ಯ-ದ್ರಾವಿಡವಾದ, ಆರ್ಯರ ಆಕ್ರಮಣ ಮುಂತಾದ ಸಂಗತಿಗಳನ್ನೂ ಮುಂದಿಟ್ಟಿದ್ದಾರೆ. ಆದರೆ ಇದೆಲ್ಲ ಕ್ರೈಸ್ತ ಮಿಷನರಿಗಳ, ಬ್ರಿಟಿಷ್ ಸಾಮ್ರಾಜ್ಯಶಾಹಿಯ ಒಡೆದು ಆಳುವ ತಂತ್ರವೆಂದು ಇದೀಗ ಸಾಧಿತವಾಗಿದೆ. ಈ ವಾದಗಳಿಗೆಲ್ಲ ಗಟ್ಟಿಯಾದ ಆಧಾರಗಳುಳ್ಳ ಪ್ರತ್ಯುತ್ತರ ಲಭಿಸಿದ್ದು ಆರ್ಯರು ಭಾರತದ ಮೂಲವಾಸಿಗಳು, ಆರ್ಯ-ದ್ರಾವಿಡ ವಿಭಾಗಗಳು ಜನಾಂಗೀಯವಲ್ಲ ಎಂದು ಜಾಗತಿಕ ಮಟ್ಟದ ವಿದ್ವದ್ವಲಯದಲ್ಲಿಯೇ ತೀರ್ಮಾನವಾಗಿದೆ. ವಿಷಯಾಂತರವಾಗಬಾರದೆಂದು ವಿವರಗಳಿಗಿಲ್ಲಿ ಹೋಗುತ್ತಿಲ್ಲ. (The Politics of History, Vedic Aryans and the Origins of Civilization in search of Cradle of Civilization, Gods, Sages and Kings, The Rigveda and the History of India) ಮುಂತಾದ ಅಸಂಖ್ಯ ಗ್ರಂಥಗಳಲ್ಲಿ ಉಲ್ಲೇಖನೀಯ. ಹೀಗಾಗಿ ಈ ವಾದಾಭಾಸಗಳನ್ನು ಮುಂದಿಟ್ಟು ತಗಾದೆ ತೆಗೆಯುವುದು ಅಧ್ಯಯನದ ಕೊರತೆಯಷ್ಟೇ. 'ದ್ರಾವಿಡ' ಎನ್ನಲಾದ ಶಿವನು ಬಿಳಿಯ ಬಣ್ಣದವನು, 'ಆರ್ಯ' ಎನ್ನಲಾದ ವಿಷ್ಣುವು ಕಪ್ಪು ಎಂಬ ವೇದ-ಪುರಾಣಗಳ ತಥ್ಯವನ್ನರಿತವರಿಗೆ ಶಾಳಿಯ 'ದ್ರಾವಿಡತ್ವ' ಹಾಗೂ ಆರ್ಯರನ್ನವಳು ದಮನ ಮಾಡಿದ ಸ್ತ್ರೀಶಕ್ತಿ ಎಂಬೆಲ್ಲ ವಾದಗಳ ಪೊಳ್ಳುತನ ತಿಳಿಯದಿರದು.

ಹೀಗೆಯೇ ಶಂಕರರು ನಾಗಾರ್ಜುನಕೊಂಡದ ಬೌದ್ಧಸ್ತೂಪಗಳನ್ನು ಕೆಡವಿದರೆಂದೂ ಬೌದ್ಧರನ್ನು ಬಲ ಪ್ರಯೋಗದಿಂದ ನಾಶ ಮಾಡಿದರೆಂದೂ ಆರೋಪಿಸುವುದೆಲ್ಲ ಸುಳ್ಳು. ಇಸ್ಲಾಂ ದಾಳಿಯೇ ಬೌದ್ಧ ಮತದ ನಾಶಕ್ಕೆ ಕಾರಣವೆಂದು ಮಹಾ ವಿದ್ವಾಂಸರೂ ಸ್ವಯಂ ಬೌದ್ಧ ಭಿಕ್ಷುವೂ ಕಮ್ಯೂನಿಸ್ಟರೂ ಆಗಿದ್ದ ರಾಹುಲ ಸಾಂಕೃತ್ಯಾಯನರೇ ಸಾಬೀತು ಮಾಡಿದ್ದಾರೆ. ಮಾತ್ರವಲ್ಲ, ಬೌದ್ಧಮತ ನಾಶಕ್ಕೆ ಶಂಕರರು ಕಾರಣವೆನ್ನುವುದು ಬರಿಯ ಕಲ್ಪನೆಯ ಮಾತು. ಹನ್ನೊಂದು-ಹನ್ನೆರಡನೆಯ ಶತಾಬ್ದಿಯವರೆಗೂ ಬೌದ್ಧ ಮತವು ನಮ್ಮ ದೇಶದಲ್ಲೆಲ್ಲ ಮೆರೆದಿದ್ದು, ಮಹಮ್ಮದ್ ಬಿನ್ ಬಕ್ತಿಯಾರ್ ಮುಂತಾದ ಇಸ್ಲಾಂ

ದಾಳಿಕಾರರು ಮಾಡಿದ ಅಸಂಖ್ಯ ಬೌದ್ಧಭಿಕ್ಷುಗಳ ಹತ್ಯೆ, ಅನೇಕ ವಿಹಾರಗಳ ನಾಶ ಹಾಗೂ ಅನಂತ ಗ್ರಂಥರಾಶಿಗಳ ದಹನದಿಂದ ಹಾಳಾಯಿತೆಂದು ವಿಸ್ತರಿಸಿ ಹೇಳಿದ್ದಾರೆ. ಜತೆಗೆ ಬೌದ್ಧಮತದಲ್ಲಿ ನುಸುಳಿದ ದುರಾಚಾರಗಳೂ ಅದರ ಪತನಕ್ಕೆ ಕಾರಣವಾಯಿತೆಂದಿದ್ದಾರೆ. ( ಈ ಅಂಶವನ್ನೇ ಭೈರಪ್ಪನವರ 'ಸಾರ್ಥ'ದಲ್ಲಿ ಕಾಣಬಹುದಲ್ಲದೆ ಅಲ್ಲಿ ಭಗವಾನ್ ಬುದ್ಧನ ನಿಂದೆ ವಿವಕ್ಷಿತವಲ್ಲ). ಜತೆಗೆ ರಾಹುಲರು ಹಿಂದೂ ಮತ್ತು ಬೌದ್ಧರು ಪ್ರತ್ಯೇಕ ಜಾತಿಗಳಲ್ಲವೆಂದೂ ಒಂದೇ ಕುಟುಂಬದಲ್ಲಿ ಇದ್ದವರಾಗಿಯೂ ಬಾಳುತ್ತಿದ್ದರೆಂದೂ ತಿಳಿಸಿದ್ದಾರೆ. ಮಾತ್ರವಲ್ಲ, ಬಲಾತ್ಕಾರದ ಮತಾಂತರದಿಂದ ಹೆಚ್ಚಿನ ಬೌದ್ಧರು ಮುಸ್ಲಿಮರಾಗಿಯೂ, ಉಳಿದ ಕೆಲವರು ಹಿಂದೂ ಧರ್ಮಕ್ಕೆ ಮರಳಿಯೂ ಪ್ರಾಣವುಳಿಸಿಕೊಂಡರೆಂದೂ ವಿವರಿಸಿದ್ದಾರೆ. *(ಬುದ್ಧಚರ್ಯಾ (ತೆಲುಗು ಅನುವಾದ), ಪು. 23-38)*. ಭಾರತರತ್ನ ಪಿ.ವಿ. ಕಾಣೆ (History of Dharmashastra, Vol V), ಎಚ್.ಎಂ. ಇಲಿಯಟ್ (History of India, Vol. II), ಕೆ.ಡಬ್ಲ್ಯು. ಮಾರ್ಗನ್ (The Path of the Buddha), ಆರ್.ಸಿ. ಮಿತ್ರ (Decline of Buddhism in India), ಬಾರ್ಥ್ (Religion of India) ಮುಂತಾದ ಅನೇಕ ವಿದ್ವಾಂಸರೂ ಇದನ್ನು ಅನುಮೋದಿಸಿದ್ದಾರೆ.

ಅಷ್ಟೇಕೆ, ಅಂಬೇಡ್ಕರರೂ ಇಸ್ಲಾಂ ನಡೆಸಿದ ಬೌದ್ಧನಾಶವನ್ನು ವಿವರವಾಗಿ ಬಣ್ಣಿಸಿದ್ದಾರೆ. ಪುಷ್ಯಮಿತ್ರ ಶುಂಗನು, ಬೌದ್ಧರನ್ನು ಹಿಂಸಿಸಿದುದಕ್ಕೆ ಯಾವುದೇ ಶಾಸನಗಳ ಆಧಾರವಿಲ್ಲ; 'ದಿವ್ಯಾವಧಾನ'ದ ಮಾತು ಅತ್ಯುಕ್ತಿಯೆಂದು ಎನ್.ಎನ್. ಘೋಷ್ ವಿವರವಾಗಿ ಸಂಶೋಧಿಸಿ ನಿರೂಪಿಸಿದ್ದಾರೆ. ಈ ಬಗೆಗೆ ರೈಸ್ ಡೇವಿಡ್ಸ್ (Buddhist India) ದೇವಮಿತ್ರ ಧರ್ಮಪಾಲ (Life and Teachings of Buddha) ಮುಂತಾದವರೂ ಸಹಮತದಿಂದಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ History and Culture of Indian People ಎಂಬ ಮಹಾಗ್ರಂಥ ಶ್ರೇಣಿಯ The Age of Imperial Unity ಸಂಪುಟದಲ್ಲಿ ಪುಷ್ಯಮಿತ್ರನು ಬೌದ್ಧದ್ವೇಷಿಯೆಂಬ ಆರೋಪವು ಅತ್ಯಂತ ನಿರಾಧಾರವೆಂದು ಸಾಬೀತು ಮಾಡಲಾಗಿದೆ. ಅಷ್ಟೇಕೆ, ಭಾರ್ಹುತ್‌ನಲ್ಲಿರುವ ಬೌದ್ಧ ಸ್ತೂಪವು ಶುಂಗರದೇ ಕೊಡುಗೆ.

ಬೌದ್ಧ ಮತವು ಸನಾತನ ಧರ್ಮಕ್ಕೆ ಸ್ವಲ್ಪವೂ ಋಣಿಯಾಗಿಲ್ಲ, ಬುದ್ಧ ಭಗವಂತನು ವೈದಿಕ ದರ್ಶನ ವಿರೋಧಿ ಎಂಬ ಮಾತುಗಳೂ ಸರಿಯಲ್ಲ. ಈ ಬಗೆಗೆ ನಾನು ವಿಸ್ತೃತವಾದ ಗ್ರಂಥವೊಂದನ್ನೇ ಬರೆಯುತ್ತಿದ್ದೇನೆ. ಬುದ್ಧದೇವನು ಸ್ವಯಂ ಧಮ್ಮಪದ (ಇಡಿಯ ಸುಖವಗ್ಗ, ಯಮಕವಗ್ಗ), ಸುತ್ತಪಿಟಕ (ಮೆತ್ತ ಸುತ್ತ-9), ಅಂಗುತ್ತರ ನಿಕಾಯ (ಸತ್ತಕನಿಪಾತ), ಸಂಯುಕ್ತ ನಿಕಾಯ (I 168), ಮಜ್ಝಿಮನಿಕಾಯ (I 217) ಉದಾನ (VIII-3), ದೀಘನಿಕಾಯ (II-63, 101), ಖುದ್ದಕನಿಕಾಯ (I 32) ಮುಂತಾದ ನೂರಾರು ಎಡೆಗಳಲ್ಲಿ ಹೇಳಿರುವುದನ್ನು ಪರಿಭಾವಿಸಿದಾಗ, ಆತನು ಉಪನಿಷತ್ತುಗಳ ಮಾರ್ಗದ ಮಹರ್ಷಿಯೆಂದು ಅರಿವಾಗದಿರದು. ಆತನು ಬ್ರಾಹ್ಮಣ್ಯವಿರೋಧಿಯೂ ಅಲ್ಲ

(ಬ್ರಾಹ್ಮಣ ಧಮ್ಮಿಕ ಸುತ್ತ, ಸುತ್ತನಿಪಾತ 1610, ಖುದ್ದಕನಿಕಾಯ- 292, 322, 454, 503, 864, 1056, 1060, ಸೇಲುಸುತ್ತ 21, 22; ಧಮ್ಮಪದದ ಬ್ರಾಹ್ಮಣ ವಗ್ಗ-6). ಈ ಬಗೆಗೆ ಪ್ರಥಮ ಶ್ರೇಣಿಯ ಅನೇಕ ವಿದ್ವಾಂಸರ ಸಂಶೋಧನೆಗಳೂ ಸಹಮತದಿಂದಿವೆ. (ಆನಂದಕುಮಾರಸ್ವಾಮಿ Hinduism and Buddhism, The Living Thoughts of Gowtama Buddha, Buddha and the Gospel of Buddism) ಆರ್ಥರ್ ಓಸ್ ಬೋರ್ನ್ (Buddhism and Christanity in the Light of Hinduism) ಚಂದ್ರಧರ ಶರ್ಮಾ (A Critical Survey of Indian Philosophy, The Advaita Tradition in Indian Philosophy) ಶ್ರೀಮತಿ ರೈಸ್ ಡೇವಿಡ್ಸ್ (Gradual Sayings) ಎಂ. ಹಿರಿಯಣ್ಣ (Outlines of Indian Philosophy), ರಾಧಾಕೃಷ್ಣನ್ (Indian Philosophy), ಜಿ.ಸಿ ಪಾಂಡೇಯ (ಬೌದ್ಧ ಧರ್ಮ ಕೀ ವಿಕಾಸ್ ಕಾ ಇತಿಹಾಸ್), ಬಲದೇವ ಉಪಾಧ್ಯಾಯ (ಬೌದ್ಧ ದರ್ಶನ್) ಇಂಥ ಗ್ರಂಥಗಳು ಮತ್ತೂ ನೂರಾರು.

ಕಾಶ್ಮೀರದಲ್ಲಿ ಇಸ್ಲಾಮಿಗೆ ಪ್ರತ್ಯಭಿಜ್ಞಾಶೈವ ದರ್ಶನವು ಸ್ವಾಗತ ನೀಡಿತೆಂಬಂತೆ ಒಬ್ಬ 'ವಿಚಾರವಾದಿ'ಗಳು ಹೇಳಿರುವುದಂತೂ ತೀರ ಸತ್ಯದೂರ. ಜೋನರಾಜನ ಐತಿಹಾಸಿಕ ಗ್ರಂಥ ರಾಜತರಂಗಿಣಿ (ಇದು ಕಲ್ಹಣನ ಇದೇ ಹೆಸರಿನ ಕೃತಿಯ ಮುಂದುವರಿದ ಭಾಗ) ಮುಸ್ಲಿಂ ದಾಳಿಕೋರರ ದೌರ್ಜನ್ಯಗಳನ್ನು ಹೃದಯವಿದ್ರಾವಕವಾಗಿ ತಿಳಿಸಿದೆ. ಈ ಬಗೆಗೆ ಭಾರತೀಯ ವಿದ್ಯಾ ಭವನದ ಇತಿಹಾಸ ಗ್ರಂಥ ಶ್ರೇಣಿಯ ಹನ್ನೊಂದನೆಯ ಭಾಗ (ದೆಹಲಿಯ ಸುಲ್ತಾನರ ಆಧಿಪತ್ಯ, ಪು. 553-573) ಮತ್ತಷ್ಟು ವಿವರಗಳನ್ನು ನೀಡಿದೆ.

ನಮ್ಮಲ್ಲಿ ಹಿಂದೆ ಜೈನ-ಬೌದ್ಧ-ಶೈವ-ವೈಷ್ಣವ ಮತಾಂತರಗಳಾಗುತ್ತಿದ್ದಾಗ ಅಲ್ಲಿದ್ದದ್ದು ಮುಖ್ಯವಾಗಿ ತತ್ತ್ವವಿಚಾರ ಸಂಬಂಧಿಯಾದ ವಾದದಲ್ಲಿ ಜಯ-ಪರಾಜಯ ಹಾಗೂ ಭಕ್ತಿ-ಶ್ರದ್ಧೆ. ದುಡ್ಡು-ಕಾಸುಗಳ ಪ್ರಲೋಭನೆಗೆ ಎಡೆಯಿರಲಿಲ್ಲ. ಇಂದಾದರೂ ಈ ರೀತಿಯಾದ ಗಂಭೀರ ವಾಕ್ಯಾರ್ಥಗಳನ್ನು ಮಾಡಿ, ಪರಾಜಿತರನ್ನಾಗಿಸಿ ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಮಿಷನರಿಗಳೇಕೆ ಮುಂದಾಗಬಾರದು? ಅವರಿಗೆ ಬಹುಶಃ 'ತಲೆಯ ಲೆಕ್ಕ' (head count) ಮುಖ್ಯವೇ ಹೊರತು ಹೃದಯ ಪರಿವರ್ತನೆ-ಪ್ರಜ್ಞಾಸ್ತರದ ದಾರ್ಶನಿಕ ಪ್ರತಿಪಾದನೆ ಅಲ್ಲ. ಮತ್ತೆ ಕೆಲವರು ಮತಾಂತರವಾಗಲು ಹಿಂದುಗಳ ಅಜಾಗರೂಕತೆಯೇ ಕಾರಣವೆಂದಿದ್ದಾರೆ. ದಿಟ, ಈ ಬಗೆಗೂ ಎಚ್ಚರ ವಹಿಸೋಣ. ಆದರೆ ಮನೆ ಹಾರು ಹೊಡೆದಿದೆಯೆಂದರೆ ನುಗ್ಗಿ ಕದಿಯುವುದು ಕಳ್ಳನ ರೀತಿಯೇ ಹೊರತು ಮುಕ್ತಿಯನ್ನೇ ತಂದೀಯಬಲ್ಲ ಮತದ ನೀತಿಯಲ್ಲ. ನಮಗೆ ಕ್ರಿಸ್ತೋಪಾಸನೆ ಪ್ರಾಯವೇ, ಪೂಜ್ಯವೇ. ಕ್ರೈಸ್ತರಾಗುವುದು ಮಾತ್ರ ಅಪ್ರಿಯ, ಅಸಾಧು.

ಕೆಲವರು ಬೈಬಲ್ ಮತ್ತು ಕುರಾನ್‌ಗಳಲ್ಲಿ ಹಿಂಸಾತ್ಮಕವೂ ಪ್ರತ್ಯೇಕತಾವಾದದ (Exclusivist) ಉಗ್ರತೆಯುಳ್ಳವೂ ಆದ ಮಾತುಗಳೇ ಇಲ್ಲವೆಂಬ ಸವಾಲನ್ನೂ

ಎಸೆದಿದ್ದಾರೆ. ಆದರೆ ವಸ್ತುಸ್ಥಿತಿ ಹಾಗಲ್ಲ. (I) ನಿಮ್ಮ ದೇವರಾದ ಯಹೋವನನ್ನು ನಿಮ್ಮಿಂದ ಪರಾಜಯ ಪಡಿಸುವ ಜನಾಂಗಗಳನ್ನೆಲ್ಲಾ ನೀವು ಕನಿಕರಿಸದೆ ನಾಶ ಮಾಡಬೇಕು. ಅವರ ದೇವರುಗಳನ್ನು ಪೂಜಿಸಲೇಬಾರದು, ಪೂಜಿಸಿದರೆ ಅವು ನಿಮಗೆ ಉರುಲಾಗುವವು *(ಧರ್ಮೋಪದೇಶಕಾಂಡ VII-16)*.

(II) ನೀವು ಸ್ವಾಧೀನ ಮಾಡಿಕೊಳ್ಳುವ ದೇಶದ ಜನಾಂಗಗಳು ದೊಡ್ಡ ಬೆಟ್ಟಗಳ ಮೇಲೆಯೂ ಹರಡಿಕೊಂಡ ಮರಗಳ ಕೆಳಗೆಯೂ ತಮ್ಮ ದೇವರುಗಳನ್ನು ಆರಾಧಿಸುತ್ತಾರಷ್ಟೆ; ಆ ಸ್ಥಳಗಳನ್ನೆಲ್ಲಾ ನೀವು ಅಗತ್ಯವಾಗಿ ನಾಶ ಮಾಡಬೇಕು... ಅವರ ದೇವತಾ ಪ್ರತಿಮೆಗಳನ್ನು ಕಡಿದುಬಿಟ್ಟು ಆ ದೇವರುಗಳ ಹೆಸರೇ ಉಳಿಯದಂತೆ ಮಾಡಬೇಕು *(ಅದೇ XII-2,3)*.

(III) ಒಡ ಹುಟ್ಟಿದ ಅಣ್ಣ-ತಮ್ಮಂದಿರಾಗಲಿ ಮಗನಾಗಲಿ ಮಗಳಾಗಲಿ ಪ್ರಾಣ ಪ್ರಿಯಳಾದ ಹೆಂಡತಿಯಾಗಲಿ ಆಪ್ತಮಿತ್ರನಾಗಲಿ ನಿಮಗಾದರೂ ನಿಮ್ಮ ಪಿತೃಗಳಿಗಾದರೂ ಗೊತ್ತಿಲ್ಲದ ಇತರ ದೇವರುಗಳನ್ನು ಸೂಚಿಸಿ ಆ ದೇವರುಗಳನ್ನು ಸೇವಿಸೋಣ ಬನ್ನಿ ಎಂದು ಅಂತರಂಗದಲ್ಲಿ ನಿಮಗೆ ಬೋಧಿಸಿದರೆ ಆ ದೇವರುಗಳು ಹತ್ತಿರದವರ ಜನಾಂಗಗಳ ದೇವರುಗಳಾದರೂ ದೂರವಾದ ದೇವರುಗಳಾದರೂ ಭೂಲೋಕದ ಯಾವ ಭಾಗದವರ ದೇವರುಗಳಾದರೂ ನೀವು ಸಮ್ಮತಿಸಲೂ ಬಾರದು, ಕಿವಿಗೊಡಲೂ ಬಾರದು. ಅವನನ್ನು ಕನಿಕರಿಸಕೂಡದು, ತಪ್ಪಿಸಕೂಡದು, ಬಚ್ಚಿಡಕೂಡದು, ಕೊಲ್ಲಿಸಲೇಬೇಕು. *(ಅದೇ XIII-6, 9)*.

(IV) ಅವರು ಬರದಿಂದ ಕ್ಷೀಣವಾಗುವರು, ತಾಪದಿಂದಲೂ ಅಂಟುರೋಗ ದಿಂದಲೂ ಸಾಯುವರು, ಅದಲ್ಲದೆ ನಾನು ದುಷ್ಟ ಮೃಗಗಳನ್ನೂ ವಿಷಸರ್ಪಗಳನ್ನೂ ಅವರ ಮೇಲೆ ಬರಮಾಡುವೆನು. ಮನೆಯ ಹೊರಗೆ ಕತ್ತಿಯೂ ಒಳಗೆ ಭಯವೂ ಇರುವವು. ಯೌವನಸ್ಥರು, ಕನ್ಯೆಯರು, ಮೊಲೆಗೂಸುಗಳು, ನರೆತಲೆಯವರು ಇವರೆಲ್ಲರೂ ಕತ್ತಿಯಿಂದ ಕೊಲ್ಲಲ್ಪಡುವರು! ಅವರನ್ನು ಸಂಪೂರ್ಣವಾಗಿ ನಾಶ ಮಾಡುತ್ತಿದ್ದೆನು. ಅವರು ಮನುಷ್ಯರ ಜ್ಞಾಪಕದಲ್ಲೂ ಇಲ್ಲದಂತೆ ಮಾಡುತ್ತಿದ್ದೆನು. *(ಅದೇ XXXII-24, 25)*.

(V) ಭೂಲೋಕದ ಮೇಲೆ ಸಮಾಧಾನ ಹುಟ್ಟಿಸುವುದಕ್ಕೆ ಬಂದನೆಂದು ನೆನಸಬೇಡಿರಿ. ಸ ಮಂಧಾನ ಹುಟ್ಟಿಸುವುದಕ್ಕೆ ನಾನು ಬಂದಿಲ್ಲ, ಖಡ್ಗವನ್ನು ಹಾಕುವುದಕ್ಕೆ ಬಂದೆನು. ಹೇಗೆಂದರೆ ಮಗನಿಗೂ ತಂದೆಗೂ ಮಗಳಿಗೂ ತಾಯಿಗೂ ಸೊಸೆಗೂ ಅತ್ತೆಗೂ ಭೇದ ಹುಟ್ಟಿಸುವುದಕ್ಕೆ ಬಂದೆನು. ತಂದೆಯ ಮೇಲಾಗಲಿ, ತಾಯಿಯ ಮೇಲಾಗಲಿ ನನ್ನ ಮೇಲೆ ಇಡುವುದಕ್ಕಿಂತ ಹೆಚ್ಚಾದ ಮಮತೆಯನ್ನಿಡುವವನು ನನಗೆ ಯೋಗ್ಯನಲ್ಲ. *(ಮತ್ತಾಯ X-34, 35, 36, 37)*.

(VI) ನನ್ನ ಪಕ್ಷ ಹಿಡಿಯದವನು ನನಗೆ ವಿರೋಧಿ *(ಅದೇ XII-30)*.

ಇದಿಷ್ಟೂ ಬೈಬಲ್ಲಿನ ಮಾತಾಯಿತು. ಇನ್ನು ಕುರಾನಿನತ್ತ ನೋಡೋಣ. ಅಲ್ಲಂತೂ ಇಂಥವು ಅಸಂಖ್ಯ.

(i) ಓ ಸತ್ಯ ವಿಶ್ವಾಸಿಗಳೇ, ಫಿತ್ನ (ಪೀಡನ) ಅಳಿದು ಹೋಗುವವರೆಗೂ ದೀನ್ (ಧರ್ಮ) ಸರ್ವ ಸಂಪೂರ್ಣವಾಗಿ ಅಲ್ಲಾಹನಿಗಾಗಿ ಆಗುವವರೆಗೂ ಈ ಸತ್ಯ ನಿಷೇಧಗಳೊಡನೆ ಹೋರಾಡಿರಿ (8-39). (ii) ನಿಷೇಧಿತಮಾಸದ ಬಳಿಕ ಮುಶ್ರಿಕರನ್ನು ಮೂರ್ತಿಪೂಜಕರನ್ನು, ಬಹುದೇವತಾ ಪೂಜಕರನ್ನು) ಸಿಕ್ಕಲ್ಲಿ ವಧಿಸಿರಿ, ಅವರನ್ನು ಸೆರೆ ಹಿಡಿಯಿರಿ, ಮುತ್ತಿಗೆ ಹಾಕಿರಿ (9-5, 6) (iii) ಅವರ ಗೋಣುಗಳ ಮೇಲೆ ಹೊಡೆಯಿರಿ ಮತ್ತು ಎಲ್ಲ ಸಂದು ಸಂದುಗಳಿಗೂ ಹೊಡೆಯಿರಿ (8-12) (iv) ಬಹುದೇವ ವಿಶ್ವಾಸಿನಿಯರು ಸತ್ಯವಿಶ್ವಾಸ (ಇಸ್ಲಾಂ) ಅನ್ನು ಸ್ವೀಕರಿಸುವವರೆಗೂ ನೀವು ಅವರನ್ನು ಮದುವೆಯಾಗಬಾರದು.... ಓರ್ವ ಸತ್ಯವಿಶ್ವಾಸಿ ಗುಲಾಮನು ಬಹುದೇವ ವಿಶ್ವಾಸಿ ಕುಲೀನ ಪುರುಷನಿಗಿಂತ ಉತ್ತಮ (2-221) (v) ಥೂ ನಿಮಗೆ ಮತ್ತು ಅಲ್ಲಾಹನನ್ನು ಬಿಟ್ಟು ನೀವು ಪೂಜಿಸುತ್ತಿರುವ ನಿಮ್ಮ ಆರಾಧ್ಯ ವಸ್ತುಗಳಿಗೆ (21-66, 6) (vi) ನೀವು ಮತ್ತು ಅಲ್ಲಾಹನನ್ನು ಬಿಟ್ಟು ನೀವು ಪೂಜಿಸುವ ಆರಾಧ್ಯ ವಸ್ತುಗಳು ನರಕಾಗ್ನಿಯ ಇಂಧನಗಳು (21-92-103).

ಇನ್ನು 'ಹದೀಸ್'ನಲ್ಲಿರುವ ಮಾತುಗಳ ಸಾರಾಂಶವೂ ಇದಕ್ಕಿಂತ ಭಿನ್ನವೇನಲ್ಲ. ಅಲ್ಲಾಹನ ಜೊತೆ ಮಿಕ್ಕ ದೇವರನ್ನು ಸೇರಿಸುವುದೇ ಪರಸ್ತ್ರೀ ಸಂಗ, ಶಿಶುಹತ್ಯೆಗಳಿಗಿಂತ ಮಿಗಿಲಾದ ಮಹಾಪಾತಕ (156), ಬಹುದೇವತಾರಾಧನೆಯೇ ಪಾತಕ (5376), ಕ್ರೈಸ್ತ ಯಹೂದ್ಯರಿಗೆ ವಂದನೆ ಸಲ್ಲದು, ಮುಸ್ಲಿಮನಿಗೆ ಮೊದಲು ನಮಸ್ಕಾರ ಮಾಡಬೇಕು. ಮುಸ್ಲಿಮೇತರರು ಹಾದಿಯಲ್ಲಿ ಬಂದರೆ ಅವರನ್ನು ದೂರ ತಳ್ಳಬೇಕು (6210, 5389) ಇತ್ಯಾದಿ ಅನೇಕ ವಿಧಿಗಳಿವೆ.

ದಿಟವೇ, ಈ ತೆರನಾದ ಎಷ್ಟೋ ಮಾತುಗಳನ್ನು ನಮ್ಮ ಶೈವ-ವೈಷ್ಣವ-ಶಾಕ್ತಾದಿ ಮತಗ್ರಂಥಗಳಲ್ಲಿಯೂ ಹಲಕೆಲವು ಧರ್ಮಶಾಸ್ತ್ರೀಯ ನಿಬಂಧಗಳಲ್ಲಿಯೂ ನೋಡಬಹುದು. ಅಷ್ಟೇಕೆ, ವೇದಗಳಲ್ಲಿಯೇ ಕೆಲವು ಹಿಂಸೋಕ್ತಿಗಳನ್ನು ತೋರಿಸಬಹುದು. ಅಲ್ಲದೆ ಹಿಂದು-ಕ್ರೈಸ್ತ-ಇಸ್ಲಾಂ ಮತಗ್ರಂಥಗಳೆಲ್ಲವುಗಳಲ್ಲಿ ಬರುವ ಹಿಂಸಾತ್ಮಕ ವಾಕ್ಯಗಳಿಗೋ ಮತ್ತಿತರ ಮುಜುಗರ ತರಿಸುವ ಮಾತುಗಳಿಗೋ 'ಒಳ್ಳೆಯ' ಅರ್ಥವನ್ನು ಮಾಡಬಹುದು. ಆದರೆ ಪ್ರಶ್ನೆಯಿರುವುದೇನೆಂದರೆ ಇಂಥ 'ಸುಧಾರಣೆ'ಗಳು ಆಯಾ ಮತಾನುಯಾಯಿಗಳ ಶ್ರದ್ಧಾ, ಅನ್ಯಮತೀಯರತ್ತ ಸನಾತನ ಧರ್ಮವು ಚಿರಕಾಲದಿಂದ ಉದಾರವಾಗಿ, ಪ್ರೀತಿಯಿಂದ ಕಂಡಿದೆಯೆಂಬುದು ಎದ್ದು ತೋರುವ ಸಂಗತಿ. ನಮ್ಮ 'ವಿಚಾರವಾದಿ'ಗಳಲ್ಲಿ ನಿವೇದನೆ ಇಷ್ಟೆ; 'ಇಸ್ಲಾಂ' ಶಾಂತಿ, ಪ್ರೀತಿ, ಶರಣಾಗತಿ ಎಂಬ ಸಾಧುನಿರ್ವಚನದಂತಾದಲ್ಲಿ 'ಆರ್ಯ' 'ದ್ರಾವಿಡ' 'ಬ್ರಾಹ್ಮಣ' 'ವರ್ಣ' 'ವೇದ' ಮುಂತಾದವುಗಳಿಗೂ ಆಯಾ ಸಂಪ್ರದಾಯದ ಸಾಧುನಿರ್ವಚನ ಇರುವದಷ್ಟೆ. ಆ ಬಗೆಗೆ ಅಸಹನೆಯೇಕೆ?

ವೇದಾಧಿಕಾರವನ್ನು ಶೂದ್ರ-ದಲಿತರಿಗೆಲ್ಲ ನೀಡಿ ದೊಡ್ಡ ಕ್ರಾಂತಿಯನ್ನೇ ಮಾಡಿ ಕೀರ್ತಿ ಗಳಿಸಿದ ಆರ್ಯಸಮಾಜವು ಮತಾಂತರವನ್ನು ತೀವ್ರವಾಗಿ ಪ್ರತಿಭಟಿಸುತ್ತಲೇ ಬಂದಿದೆ. ಶ್ರದ್ಧಾನಂದರು ಕೊಲೆಗೀಡಾದದ್ದೂ ಈ ಕಾರಣದಿಂದಲೇ. ದಯಾನಂದ ಸರಸ್ವತಿಯವರು ತಮ್ಮ ಸತ್ಯಾರ್ಥ ಪ್ರಕಾಶದಲ್ಲಿ ಕ್ರೈಸ್ತ-ಇಸ್ಲಾಂ ಮತಗಳನ್ನೂ ತೀವ್ರವಾಗಿ ಖಂಡಿಸಿರುವುದು ಸುಪ್ರಸಿದ್ಧ. ಇದನ್ನು 'ಬುದ್ಧಿಜೀವಿ'ಗಳು ಗಮನಿಸಬೇಕು. ಅಂತೆಯೇ ಎಲ್ಲ ಜಾತಿಗಳಿಗೂ ಎಲ್ಲ ಮತದವರಿಗೂ ಸಂನ್ಯಾಸದೀಕ್ಷೆ ನೀಡುವ ಶ್ರೀರಾಮಕೃಷ್ಣ ಮಠದ ಮೂಲಸ್ಫೂರ್ತಿ ಯಾದ ಪರಮಹಂಸರು, ಕ್ರೈಸ್ತರು ಹೇಳುವ ಎಲ್ಲರೂ ಪಾಪಿಗಳೆನ್ನುವ ಮಾತನ್ನು ತೀವ್ರವಾಗಿ ವಿರೋಧಿಸಿದ್ದಾರೆ. (ವಚನವೇದ, ಸಂ. I ಪು 142-3) ಇನ್ನು ಸ್ವಾಮಿ ವಿವೇಕಾನಂದರಂತೂ ತಮ್ಮ ಐತಿಹಾಸಿಕ ಷಿಕಾಗೋ ಉಪನ್ಯಾಸದಿಂದ ಹಿಡಿದು ನೂರಾರು ಸಂದರ್ಭಗಳಲ್ಲಿ ಕ್ರೈಸ್ತ ಮಿಷನರಿಗಳನ್ನು ಖಂಡಿಸಿದ್ದಾರೆ. (ಕೃತಿಶ್ರೇಣಿ, VII ಪು. 370-71) ಎಲ್ಲ ಪವಾಡಗಳನ್ನು ತುಚ್ಛೀಕರಿಸಿದ್ದಾರೆ. (IV ಪು 32-33), ಚರ್ಚ್ ವ್ಯವಸ್ಥೆಯಲ್ಲಿ ಕ್ರಿಸ್ತನೇ ಕಾಣೆಯಾಗಿದ್ದಾನೆ. (IV ಪು. 15-152), ಬೈಬಲ್ಲಿನಲ್ಲಿ ನಮ್ಮ ಪುರಾಣಗಳನ್ನು ನಾಚಿಸುವಷ್ಟು ಹೊಲಸಿದೆ (V ಪು 503), ಕ್ರೈಸ್ತಮತ ಎಂದೂ ಅಧ್ಯಾತ್ಮ-ವಿಜ್ಞಾನಗಳ ಮೂಲಕ ಸಂಸ್ಕೃತಿ ಪ್ರಸಾರ ಮಾಡಿಲ್ಲ (V ಪು. 532) ಕ್ರೈಸ್ತ ಮತವೊಂದು ಮೌಢ್ಯವಾದ ಕಾರಣ ಹಿಂದುಗಳೇನೂ ಅದರಿಂದ ಕಲಿಯಬೇಕಿಲ್ಲ. (VI ಪು. 132) ಎಂದೆಲ್ಲ ಒಕ್ಕಣಿಸಿ ದ್ದಾರೆ. ಅಲ್ಲದೆ ನಮ್ಮ ಜಾತಿ ಪದ್ಧತಿಯಲ್ಲಿರುವ ಗುಣಾಂಶಗಳನ್ನೂ ಮರೆತಿಲ್ಲ (V ಪು 214-215, VI ಪು. 120). ಅಮೆರಿಕೆಯ ಪತ್ರಿಕಾ ಸಂದರ್ಶನದಲ್ಲಿ 'We say to you-welcome to your religion, but allow me to have mine.... what Can you do better than Mohammedanism? You train and educate and pay men to do what? To come over to my country, to curse and abuse all my forefathers, my religion and everthing' ಎಂದು ಗುಡುಗಿದ್ದಾರೆ. (Detroit Free Press, 21-2-1894). ಷಿಕಾಗೋ ಉಪನ್ಯಾಸ ದಲ್ಲಿ 'Dont send Missionaries to India' (I ಪು. 20) ಎಂದೇ ಆದೇಶಿಸಿದ್ದಾರೆ.

ಶ್ರೀ ರಮಣ ಮಹರ್ಷಿಗಳೂ ಇಸ್ಲಾಂ ಕ್ರೈಸ್ತಮತಗಳು ಮೂರ್ತಿ ಪೂಜೆಯನ್ನು ಧಿಕ್ಕರಿಸುವುದರ ಬಗೆಗೆ ತಮ್ಮ ವಿರೋಧವನ್ನು ಹೇಳಿರುವುದಲ್ಲದೆ (Ramana Maharshi and the Path of Self Knowledge-Arthur Osbome, ಪು. 1423) All Visions are Illusions ಎಂದು ನುಡಿದು ಎಲ್ಲ ಪ್ರವಾದಿಕ ಸಾಕ್ಷಾತ್ಕಾರ ಗಳೂ (ಇಲ್ಲಿ ಸನಾತನ ಧರ್ಮದ ಯೋಗಿ ಪ್ರತ್ಯಕ್ಷ ಸಂಗತಿಗಳೂ ಎಲ್ಲ ತೆರನಾದ Exclusivist ತತ್ತ್ವಗಳೂ ಸೇರುತ್ತವೆ) ಭ್ರಮೆಯೆಂದು ಸಾರಿದ್ದಾರೆ.

ಜಾತಿ ಪದ್ಧತಿಯ ಪಾತಕ ನಶಿಸಬೇಕು, ಅಸ್ಪರ್ಶತೆ ತೊಲಗಲೇಬೇಕು. ಅಂತೆಯೇ ಎಲ್ಲ ಮಠಗಳೂ ಎಲ್ಲ ವರ್ಗದವರಿಗೆ ವೇದಾಧ್ಯಯನ, ವೈದಿಕ ಸಂಸ್ಕಾರ ಮತ್ತು ಪೀಠ

ಭಾಗಿತ್ವಗಳನ್ನು ನೀಡಬೇಕು. ಇತ್ತ ಗಮನ ಹರಿಸದಿದ್ದರೆ ಸನಾತನ ಧರ್ಮಕ್ಕೆ ತುಂಬ ಆಪತ್ತುಂಟು. ಆದರೆ ಈ ಕಾರಣಗಳಿಂದಲೇ ಮತಾಂತರಗೊಳ್ಳುವವರು ಒಂದಂಶವನ್ನು ಗಮನಿಸಬೇಕು.

ಇಂದು ವೇದಾಧ್ಯಯನಾದಿಗಳು ಸರ್ವಜನಕ್ಕೂ ಮುಕ್ತಾವಕಾಶವಾಗಿವೆ. ನಾನೇ ಭಾರತೀಯ ವಿದ್ಯಾಭವನದಲ್ಲಿದ್ದಾಗ ಎಲ್ಲರಿಗೂ ವೇದಾಧ್ಯಯನ ವ್ಯವಸ್ಥಾಪನ ಮಾಡಿದ್ದು ದಲ್ಲದೆ ಸ್ವಯಂ ವೇದಾರ್ಥ ಬೋಧೆಯನ್ನೂ ಮಾಡುತ್ತಿದ್ದೆ. ಇಂದೂ ಸಹ ಆಸಕ್ತರಿಗೆ ಅವೆಲ್ಲ ತೆರದೇ ಇವೆ. ಇಂತಿದ್ದೂ ಹಠ ಹಿಡಿಯುವುದು ತರವಲ್ಲ. ಅಲ್ಲದೆ ಪೋಪ್‌ಪದವಿ ಅದೆಷ್ಟು ಜನ ಐರೋಪ್ಯೇತರರಿಗೆ ದೊರೆತಿದೆ? ಯಾವ ಕರಿಯ ತಾನೆ ಆ ಪದವಿಗೇರಿದ್ದಾನೆ? ಅಲ್ಲಿಯೂ ಸಾವಿರ ತೆರನಾದ ತಾರತಮ್ಯಗಳಿರುವುದನ್ನು ವಿಸ್ಮರಿಸಬಾರದು.

ಕೆಲವರು ಸೂಫೀಸಂತರೆಲ್ಲ ಉದಾರಿಗಳೆಂದು ಬಿಂಬಿಸಿದ್ದಾರೆ. ಆದರೆ ಇದೂ ಭ್ರಮಾಸ್ಪದ. ಚಿಸ್ತೀ ಪಂಗಡದವರು ನಡೆಸಿದ ಉಗ್ರವಾದ ಪ್ರಸಿದ್ಧವಾಗಿದೆ. ಪ್ರೊ. ಅಜೀಜ್ ಅಹಮ್ಮದ್ ಅವರು ಈ ಬಗೆಗೆ ಹೇಳಿರುವುದು ಉಲ್ಲೇಖಾರ್ಹ. 'In Indian sufism anti Hindu Polemics started with Muinal-din Chisti. Early sufis of Punjab and early Chistis devoted themselves to the task of Conversion on a large scale. ಅಹ್ಮದ್ ಸಿರ್‌ಹಿಂದಿ ಆರಂಭಿಸಿದ ನಕ್ಷಾಬಂದಿ ವರ್ಗದ ಅನೇಕ ಸೂಫೀಗಳು ಅಕ್‌ಬರ್ ಜಹಾಂಗೀರ್ ಮುಂತಾದ ದೊರೆಗಳಿಗೆ ಬರೆದ ಮತೋನ್ಮತ್ತವಾದ ಪತ್ರಗಳೆಷ್ಟೋ ಬೆಳಕು ಕಂಡಿವೆ. ಹೀಗಾಗಿ ಅವಿಚಾರಿ ತರಮಣೀಯತೆ ಸಲ್ಲದು. ಈ ಬಗೆಗೆ ವಿಕೀಪೀಡಿಯಾದಲ್ಲಿ ಕೂಡ ಸಾಕಷ್ಟು ಮಾಹಿತಿಯುಂಟು. ಸೀತಾ ರಾಮ್ ಗೋಯಲ್ ಅವರ Hindu Temples: What Happened to Them ಗ್ರಂಥದಲ್ಲಿಯೂ ಬಹಳಷ್ಟು ಸಾಮಗ್ರಿಯಿದೆ.

ಒಟ್ಟಿನಲ್ಲಿ ತಾತ್ಪರ್ಯವಿಷ್ಟು: ತನ್ನ ಮತವೇ ಮಿಗಿಲು, ಅನ್ಯಮತಗಳೆಲ್ಲ ಭುಗಿಲು ಎಂಬ ಆಗ್ರಹದಿಂದಲೇ ಉಂಟಾಗುವ ಮತಾಂತರ ತಂತ್ರಕ್ಕೆ ಯಾವುದೇ ನೈತಿಕ-ವೈಜ್ಞಾನಿಕ-ಆಧ್ಯಾತ್ಮಿಕ ನೆಲೆಗಟ್ಟಿಲ್ಲ. ಅದೊಂದು ಸಾಮ್ರಾಜ್ಯಶಾಹಿ ಪದ್ಧತಿಯ ಹುನ್ನಾರವೂ ಹೌದು. ಇದು ಸಾಂಸ್ಕೃತಿಕ ಉಪಪ್ಲವವೂ ಹೌದು. ಈ ಬಗೆಗೆ ಮುಕ್ತಮನದ ಗಂಭೀರವೂ ಬಾಧ್ಯತಾಭರಿತವೂ ಆದ ಸಂವಾದ ಅವಶ್ಯ. ವಾದ-ವಿವಾದದ ಖಂಡನ-ಮಂಡನ ಕಾರ್ಯ ವೈಯಕ್ತಿಕವಾಗಿ ನನಗೆ ನೋವಿನ ಸಂಗತಿ. ಆದರೂ ಪ್ರಾಮಾಣಿಕ ಬುದ್ಧಿಯಿಂದ ಬರೆದಿದ್ದೇನೆ. ಸಹೃದಯರು ಸದರ್ಥದಲ್ಲಿ ಗ್ರಹಿಸಬೇಕು.

ನನಗೆ ಮತ ಗೌಣ. ಆಧ್ಯಾತ್ಮವೇ ಮುಖ್ಯ. ಅದರ ರಕ್ಷಣೆ ನಮ್ಮೆಲ್ಲರ ಬಾಧ್ಯತೆ, ಹೆಮ್ಮೆ. ಹೀಗಾಗಿ ಇಲ್ಲಿ ಬಂದಿರುವ ಯಾವುದೇ ಮಾತುಗಳೂ ಆಯಾ ಮತೀಯರ ಬಗೆಗಿನ ದ್ವೇಷಮೂಲದ್ದಲ್ಲ. ಕೇವಲ ಯಾವುದೇ ಮತದ ಆಗ್ರಹ-ಅಸಹನೆಗಳ ಬಗೆಗೂ ಒಡಮೂಡಿದ ಪ್ರತಿಕ್ರಿಯೆ ಅಷ್ಟೇ.

ಇತಿಹಾಸದ ಮತ-ಶ್ರದ್ಧೆಗಳ ಒಳಿತು-ಕೆಡಕುಗಳಿಗೆ ನಾವು ಉತ್ತರಾಧಿಕಾರಿಗಳಲ್ಲ, ಬಾಧ್ಯರೂ ಅಲ್ಲ. ಆದರೆ ಅಲ್ಲಿ ನಡೆದ ತಪ್ಪು ಮತ್ತೆ ಮರುಕಳಿಸದಂತೆ, ಆ ವಿಷಯಗಳ ಸುಗುಣಗಳು ಮತ್ತೆ ಮೈಗೂಡುವಂತೆ ಮಾಡುವಲ್ಲಿ ನಮ್ಮೆಲ್ಲರ ದುಡಿತ-ತುಡಿತ ಬೇಕೇ ಬೇಕು. ಇದು ಮತಾತೀತ, ಜಾತ್ಯತೀತ, ದೇಶ-ಕಾಲಾತೀತ.

*(ಈ ಲೇಖನವನ್ನು ಸಜ್ಜುಗೊಳಿಸುವಲ್ಲಿ ವಿಶೇಷವಾಗಿ ನೆರವಿತ್ತ ಮಿತ್ರ ಶ್ರೀ ಎಚ್.ಎ. ವಾಸುಕಿ ಅವರಿಗೆ ತುಂಬ ಧನ್ಯವಾದಗಳು.)*



# ಮತಾಂತರ ಒಂದು ಘೋರ ದೌರ್ಜನ್ಯ: ಏಕೆ ಗೊತ್ತೆ ?

*- ಸ್ವಾಮಿ ದಯಾನಂದ ಸರಸ್ವತಿ*

ಪ್ರಪಂಚದಲ್ಲಿ ಭಿನ್ನವಾದ ಎರಡು ಧಾರ್ಮಿಕ ಸಂಪ್ರದಾಯಗಳಿವೆ. ಅವುಗಳಲ್ಲಿ ಕೆಲವಕ್ಕೆ ಹೆಚ್ಚು ಅನುಯಾಯಿಗಳಿರಬಹುದು. ಉಳಿದವಕ್ಕೆ ಅಷ್ಟು ಅನುಯಾಯಿಗಳು ಇಲ್ಲದಿರಬಹುದು.

ಒಂದು ಬಗೆಯ ಸಂಪ್ರದಾಯಕ್ಕೆ ಮತಾಂತರದಲ್ಲಿ ನಂಬಿಕೆಯಿಲ್ಲ. ಒಬ್ಬ ಯೆಹೂದಿಯು (Jew), ಯೆಹೂದಿ ತಾಯಿಗೆ ಹುಟ್ಟಿರುತ್ತಾನೆ. ಒಬ್ಬ ಜರತುಷ್ಟ್ರನು (ಪಾರಸಿ) ಜರತುಷ್ಟ್ರ ತಾಯಿಗೇ ಹುಟ್ಟಿರುತ್ತಾನೆ. ಒಬ್ಬ ಹಿಂದುವು ಹಿಂದೂ ತಾಯಿಗೇ ಹುಟ್ಟಿರುತ್ತಾನೆ. ಅಂತೆಯೇ ಷಿಂಟೋಧರ್ಮ ಮತ್ತು ತಾವೋ ಧರ್ಮದ ಅನುಯಾಯಿಗಳು ಕೂಡ ತಮ್ಮ ತಮ್ಮ ಧರ್ಮದ ಅನುಯಾಯಿಗಳಾಗಿ ಜನಿಸಿರುತ್ತಾರೆ. ಅಂದರೆ ಪರ್ಯಾಯ ವಾಗಿ ಹೇಳುವುದಾದರೆ, ಬೇರೆ ಮತದವರನ್ನು ಮತಾಂತರಗೊಳಿಸಲು ಅವರಿಗೆ ಇಚ್ಛೆಯಿಲ್ಲ. ಇರಾನಿನಿಂದ ಹೊರದೂಡಲ್ಪಟ್ಟ ಪಾರ್ಸಿಗಳು ಮತ್ತು ಜರತುಷ್ಟ್ರ ನಿರಾಶ್ರಿತರಾಗಿ ಮುಂಬೈಗೆ ಬಂದಾಗ, ಭಾರತ ದೇಶ ಅವರಿಗೆ ಆಶ್ರಯಕೊಟ್ಟು ನೆಲೆಯೂರಲು ಅವಕಾಶ ಕೊಟ್ಟಿತು. ಅವರು ತಮ್ಮ ಧರ್ಮಕ್ಕೆ ಬದ್ಧರಾಗಿ ಅದನ್ನನುಸರಿಸಿಕೊಂಡು ಹೋಗುತ್ತಿದ್ದರು. ಬೇರೆ ಯಾರಿಗೂ ಅವರು ತೊಂದರೆ ಕೊಡಲಿಲ್ಲ. ಕ್ರಿಶ್ಚಿಯನ್ನರಿಗೆ, ಮುಸಲ್ಮಾನರಿಗೆ ಮತ್ತು ಇನ್ನೂ ಅನೇಕ ಬುಡಕಟ್ಟು ಜನಾಂಗಗಳಿಗೆ ಸ್ಥಳ ಕೊಟ್ಟಂತೆ ಹಿಂದೂಗಳು ಅವರಿಗೂ ಎಡೆಮಾಡಿಕೊಟ್ಟರು. ದೇವರ ಬಗ್ಗೆ ನಮಗಿರುವ ದರ್ಶನವು ಇದನ್ನು ಅಂಗೀಕರಿಸುತ್ತದೆ. ಸಾಮಾನ್ಯವಾಗಿ ನಾವು ಅನೇಕ ರೂಪಗಳಲ್ಲಿನ ಆರಾಧನೆಯನ್ನು ಒಪ್ಪಿಕೊಳ್ಳುತ್ತೇವೆ. ಅಂತೆಯೇ ಅನೇಕ ಪ್ರಾರ್ಥನೆಗಳನ್ನು ಕೂಡ. ಹೀಗಿರುವಾಗ ಮತ್ತೊಂದು ಬಂದು ಸೇರಿಕೊಳ್ಳುವುದು ನಮಗೆ ಭಾರವಾಗಲಾರದು. ವಸ್ತುಶಃ ನಮ್ಮ ಕೆಲವು ಹಿಂದೂ ಸ್ನೇಹಿತರ ದೇವರ ಮನೆಯಲ್ಲಿ ಜೀಸಸ್‌ನ ಫೋಟೊ ಇರುವುದನ್ನೂ ನೋಡಬಹುದು; ಅದು ಅವರಿಗೇನೂ ತಪ್ಪೆನಿಸುವುದಿಲ್ಲ ಅಥವಾ ನನಗೂ ಅದು ತಪ್ಪೆನಿಸುವುದಿಲ್ಲ. ಈ

ಕಾರಣಗಳಿಗಾಗಿ ನಾನು ಯೆಹೂದಿ, ಜರತುಷ್ಟ್ರ ಮತ್ತು ಹಿಂದೂ ಸಂಪ್ರದಾಯಗಳನ್ನು ಅನಾಕ್ರಮಣಕಾರರೆಂದು ಹೇಳಲು ಇಚ್ಛಿಸುತ್ತೇನೆ.

ಅನಾಕ್ರಮಣಕಾರಿ ಸಂಪ್ರದಾಯಗಳ ಮನೋಭಾವ: ಇದಕ್ಕೆ ವಿರುದ್ಧವಾಗಿ ಎರಡನೇ ವರ್ಗದ ಧರ್ಮಗಳು ತಮ್ಮ ಧರ್ಮಶಾಸ್ತ್ರದ ಆಧಾರದ ಮೇಲೆ ಮತಾಂತರಕ್ಕೆ ಬದ್ಧವಾಗಿರುತ್ತವೆ. ಈ ಸಿದ್ಧಾಂತಗಳು ಮತಾಂತರವನ್ನು ಮಂಜೂರು ಮಾಡಿರುವುದಷ್ಟೇ ಅಲ್ಲ, ಅದರ ಅನುಯಾಯಿಗಳು ಅವುಗಳನ್ನು ಅನುಷ್ಠಾನಕ್ಕೂ ತಂದಿರುತ್ತಾರೆ. ಅದು ಅವರ ಧರ್ಮಶಾಸ್ತ್ರ. ತಮ್ಮ ನಂಬಿಕೆಗಳ ಮೇಲೆ ಅವರಿಗೆ ಹಕ್ಕಿರಬಹುದು, ಆದರೆ ಅವನ್ನು ನಿಮ್ಮ ಮೇಲೆ ಹೊರಿಸಲು ಅವರಿಗೆ ಯಾವ ಅಧಿಕಾರವೂ ಇಲ್ಲ. ಅವರಿಗೆ ತಮ್ಮದೇ ಆದ, ಪ್ರಮಾಣೀಕರಿಸಲಾಗದಂತಹ ನಿತ್ಯ-ಪರೋಕ್ಷ ನಂಬಿಕೆಗಳ ಕ್ರಮವಿದ್ದು, ಅದರ ಮೇಲೆ ತಮ್ಮ ಸಿದ್ಧಾಂತವನ್ನು ಕೂರಿಸಿದ್ದಾರೆ.

'ನಿನ್ನನ್ನು ರಕ್ಷಿಸಲು ದೇವರು ನನ್ನನ್ನು ಕಳುಹಿಸಿದ್ದಾನೆ' ಎಂದು ಒಬ್ಬನು ಹೇಳುತ್ತಾನೆ. ನಾನೂ ಹಾಗೇ ಹೇಳಬಹುದು. ನಾನು ಮಾತನಾಡುವುದರಿಂದ ನನ್ನ ಸುತ್ತಲೂ ಹತ್ತಾರು ಜನರಿರುತ್ತಾರೆ. ಒಂದು ವೇಳೆ ನಾನು ಮಾತನಾಡದೆ 'ಮೌನಿ ಬಾಬಾ' ಆಗಿದ್ದರೆ ಆಗಲೂ ನನ್ನ ಸುತ್ತಲೂ ಜನರಿರುತ್ತಾರೆ. ಹತ್ತು ಜನರನ್ನು ಗಳಿಸುವುದು ಬಹಳ ಸುಲಭ, ಅದರಲ್ಲೂ ಭಾರತದಂಥ ದೇಶದಲ್ಲಿ! ಆಗ ನಾನು, 'ನಿಮ್ಮೆಲ್ಲರನ್ನೂ ರಕ್ಷಿಸಲು ದೇವರು ನನ್ನನ್ನು ಕಳುಹಿಸಿದ್ದಾನೆ' ಎಂದು ಹೇಳಬಹುದು.

ನಿಮಗೇ ತಿಳಿಯದಂತೆ ಇದೊಂದು ಪ್ರಮಾಣೀಕರಿಸಲಾಗದ ನಂಬಿಕೆ. ಇದರ ಜತೆಗೆ ನಿಜವಾಗಿ ಹೇಳಬೇಕೆಂದರೆ ಸ್ವರ್ಗದ ಬಗ್ಗೆ ಮಾತನಾಡುವ ಸುಮಾರು ಧರ್ಮಗಳು ಪ್ರವಾಸೋದ್ಯಮದ (ಸ್ವರ್ಗಕ್ಕೆ) ಪ್ರವರ್ತಕರೆನಿಸುತ್ತವೆ. ಆದರೆ ನಮಗದು ಬೇಕಾಗಿಲ್ಲ. ಈಗ, ಈ ಜನ್ಮದಲ್ಲಿ ನನಗೆ ಆಸಕ್ತಿಯಿದೆ. ನನ್ನ ಜೀವನ ಇನ್ನೂ ಉತ್ತಮವಾಗುವಂತಹ ಮಾತನ್ನು ಹೇಳುವುದಾದರೆ ಹೇಳಲಿ, ನಾನು ಕೇಳಲು ಸಿದ್ಧ.

ಸ್ವರ್ಗವೊಂದಿದೆಯೆನ್ನುವುದೊಂದು ರುಜುವಾತುಗೊಳಿಸಲಾಗದ ನಂಬಿಕೆ. ಒಬ್ಬ ವ್ಯಕ್ತಿಯನ್ನು ಅನುಸರಿಸುವುದರಿಂದ ನಾನು ಸ್ವರ್ಗಕ್ಕೇ ಹೋಗುತ್ತೇನೆಂಬುದು ರುಜುವಾತುಗೊಳಿಸಲಾಗದ ಮತ್ತೊಂದು ನಂಬಿಕೆ. ಸತ್ತ ನಂತರ ನಾನು ಉಳಿದಿರುತ್ತೇನೆನ್ನುವುದು ಇಂತಹದೇ ನಂಬಿಕೆ. ನಂಬಿಕೆಯಿಟ್ಟುಕೊಳ್ಳುವುದರಲ್ಲಿ ಯಾವ ತಪ್ಪೂ ಇಲ್ಲ. ಆದರೆ ಅದನ್ನು ರುಜುವಾತುಗೊಳಿಸಲು ಸಾಧ್ಯವಿಲ್ಲವೆಂಬುದನ್ನು ಅರ್ಥ ಮಾಡಿಕೊಳ್ಳಬೇಕು.

ಇಂತಹ ನಂಬಿಕೆಗಳಿರಲಿ. ಅವುಗಳನ್ನು ನಾನು ಶಿಫಾರಸು ಮಾಡದಿದ್ದರೂ ಅವರು ಈ ನಂಬಿಕೆಗಳನ್ನು ಇಟ್ಟುಕೊಳ್ಳಲಿ ಎನ್ನುತ್ತೇನೆ. ಅದು ಅವರ ಸ್ವಾತಂತ್ರ್ಯ. ಆ ಸ್ವಾತಂತ್ರ್ಯವನ್ನವರು ಅನುಭವಿಸಲಿ. ಆದರೆ, ನನ್ನ ಹತ್ತಿರ ಬಂದು ನನ್ನನ್ನು ಮತಾಂತರಗೊಳಿಸಲು ಅವರಿಗೇನು ಆಧಾರ? ಯಾವುದಾದರೂ ವಿಷಯದ ಬಗ್ಗೆ ನನಗೆ ಸಮಜಾಯಿಷಿ ಹೇಳುವುದಾದರೆ ಹೇಳಲಿ. ಆದರೆ ಮತಾಂತರಗೊಳಿಸಲು ಬರುವುದು ಬೇಡ. ಒಬ್ಬ

ಭೌತಶಾಸ್ತ್ರ ಪ್ರಾಧ್ಯಾಪಕರು ನಿಮ್ಮ ಮನೆಗೆ ಬಂದು ಅಣುಗಳ ಬಗ್ಗೆ ನಿಮ್ಮೊಡನೆ ಮಾತನಾಡಲು ಬಂದಿರುವನೆನ್ನುವುದನ್ನು ಕಂಡಿರುವಿರೇ? ಎಂದಿಗೂ ಇಲ್ಲ! ನಿಮಗೆ ಭೌತಶಾಸ್ತ್ರ ಕಲಿಯಲು ಇಚ್ಛೆಯಿದ್ದರೆ ನೀವೇ ಅವರ ಬಳಿಗೆ ಹೋಗಬೇಕು.

ಆದರಿಲ್ಲಿ ಪ್ರತಿದಿನವೂ ವ್ಯಕ್ತಿಗಳಿಗೆ ತೊಂದರೆ; ವಿಮಾನ ನಿಲ್ದಾಣದಲ್ಲಿ, ರಸ್ತೆಗಳ ಮೂಲೆಯಲ್ಲಿ ಮನೆಯಲ್ಲಿ ಎಲ್ಲೆಲ್ಲೂ ಪೀಡನೆ. ಇವರು ನನ್ನ ಆತ್ಮವನ್ನು ರಕ್ಷಿಸಬೇಕಂತೆ! ಇದು ಕೇವಲ ತಲೆ ಹಾಕುವುದಷ್ಟೇ ಅಲ್ಲ; ಇದು ಆಕ್ರಮಣವೆಂದು ನಾನು ಹೇಳುತ್ತೇನೆ. ನನ್ನ ಸ್ವಂತ ವಿಷಯಗಳಲ್ಲಿ ತಲೆಹಾಕಲು ಯಾರಿಗೂ ಅಧಿಕಾರವಿಲ್ಲ. ನನ್ನ ಆತ್ಮವನ್ನು ರಕ್ಷಿಸಿಕೊಳ್ಳಬೇಕೆಂದು ಬಂದು ಹೇಳುತ್ತಾರೆ. ಆದರೆ ಬೇರೊಬ್ಬರು ಬಂದು ನನ್ನ ಆತ್ಮವನ್ನು ರಕ್ಷಿಸಲು ನನ್ನನ್ನು ಖಂಡನೆ ಮಾಡಲಾಗಿದೆಯೆಂದು ಎಂದಿಗೂ ನಾನು ನೋಡುವುದಿಲ್ಲ. ನಿಮ್ಮನ್ನು ಖಂಡಿಸದ ಹೊರತು, ರಕ್ಷಿಸುವ ಅಗತ್ಯವೇನಿಲ್ಲ. ಆದರೆ ಈತ ಬಂದು ನಿನ್ನನ್ನು ಖಂಡಿಸಲಾಗಿದೆ ಎನ್ನುತ್ತಾನೆ. ನಾನು ಮೊದಲು ಇದನ್ನು ನಂಬಬೇಕು! ನಂತರ ಆತ ನನ್ನ ರಕ್ಷಕನಾಗಿ ತನ್ನನ್ನು ತಾನು ನೇಮಿಸಿಕೊಳ್ಳುತ್ತಾನೆ.

ಯಾವುದೋ ಒಂದು ವಿಧದಲ್ಲಿ ಮತಾಂತರಗೊಳಿಸುವುದೇ ಅವನ ಉದ್ದೇಶ- ವಿವಾಹದ ಮೂಲಕ, ಯಾವುದಾದರೂ ಪ್ರಲೋಭನೆ ಅಥವಾ ಭಯ ಹುಟ್ಟಿಸುವಂತಹ ಬೋಧನೆ. ಸ್ವರ್ಗದಲ್ಲಿ ಸಿಗುವಂತಹ ಸುಖೋಪಭೋಗಗಳ ಬಗ್ಗೆ ಮಾತನಾಡುತ್ತಾನೆ. ಅಲ್ಲಿ ಸೌಂದರ್ಯವೇ ತುಂಬಿತುಳುಕಾಡುತ್ತಿದ್ದು, ನಿಮಗೆ ರಕ್ಷಣೆ ಸಿಗುತ್ತದಂತೆ. ಇಲ್ಲದಿದ್ದರೆ ನಿಮಗೆ ನರಕ, ನರಕಯಾತನೆ ಖಚಿತ. ಇಂತಹ ಭಯದಿಂದಾಗಿ ಒಬ್ಬ ವ್ಯಕ್ತಿ ಸ್ವರ್ಗವನ್ನಾಯ್ದುಕೊಳ್ಳುತ್ತಾನೆನಿಸುತ್ತದೆ.

ಇಂತಹ ಮಾತುಗಳನ್ನಾಡಿ ತನ್ನ ಧರ್ಮಕ್ಕೆ ಜನರನ್ನು ಮತಾಂತರಿಸಿಕೊಳ್ಳುತ್ತಾನೆ. ನಾನಿದನ್ನು ತಪ್ಪೆನ್ನುತ್ತೇನೆ. ಏಕೆಂದರೆ ಒಬ್ಬ ಹಿಂದೂ ಅಥವಾ ಪಾರ್ಸಿಯವನು ಮತಾಂತರಗೊಂಡು ಕುಟುಂಬದ ಇತರ ಸದಸ್ಯರು ಪರಿವರ್ತಿತರಾಗದೆ ನೋವನ್ನನುಭವಿಸುತ್ತಾರೆ. ಪರಿವರ್ತಿತಗೊಂಡವನಿಗೂ ಸಹ ಒಳಗೆ ನೋವಿರುತ್ತದೆನಿಸುತ್ತದೆ. ತಾನು ಮಾಡಿದ್ದು ಸರಿಯೋ ಅಥವಾ ತಪ್ಪೋ ಎಂದು ತನ್ನಲ್ಲೇ ತಾನು ಚರ್ಚಿಸುತ್ತಿರುತ್ತಾನೆ. ಅವನಿಗೂ ನೋವಾಗಿರುವುದರಿಂದ ಅದು ಗುಣವಾಗಲು ಸಮಯ ಬೇಕು. ಇದನ್ನು ತಿಳಿದ ಅವನ ಸಮುದಾಯಕ್ಕೂ ಇದರಿಂದ ನೋವು.

ದಯವಿಟ್ಟು ಹೇಳಿ, ದೌರ್ಜನ್ಯವೆಂದರೇನು? ನೋವನ್ನುಂಟು ಮಾಡುವ ಈ ಕೃತ್ಯವನ್ನು ನೀವು ಏನೆಂದು ಹೇಳುತ್ತೀರಿ? ನಾನಿದನ್ನು ದೌರ್ಜನ್ಯವೆನ್ನುತ್ತೇನೆ. ಅದು ಸಾಧಾರಣವಾದ ದೌರ್ಜನ್ಯವಲ್ಲ. ಮಾನವನಲ್ಲಿರುವ ಮೂಲಭೂತ ವ್ಯಕ್ತಿಗೆ ಅವನ ಅಂತರಾಳಕ್ಕೆ ಆಗುವ ದೌರ್ಜನ್ಯ. ಧಾರ್ಮಿಕ ವ್ಯಕ್ತಿ ಅತ್ಯಂತ ಗಹನವಾಗಿರುವವನು. ಇಂತಹವನಿಗೆ ನೋವುಂಟಾಗುವುದನ್ನು ನಾನು ದೌರ್ಜನ್ಯವೆನ್ನುತ್ತೇನೆ. ಘೋರ ದೌರ್ಜನ್ಯ. ಇದು ಏನು ಮಾಡುತ್ತದೆ? ಸಂಸ್ಕೃತಿಯನ್ನೇ ಅಳಿಸಿಹಾಕುತ್ತದೆ.

ಗ್ರೀಸ್ ದೇಶಕ್ಕೆ ಹೋಗಿ ಅಲ್ಲಿ ಜನರು ಬಾಳಿದ ಜೀವಂತ ಸಂಸ್ಕೃತಿಯನ್ನು ನೋಡ ಬೇಕೆನಿಸುತ್ತದೆ. ಈಗ ಆ ಸಂಸ್ಕೃತಿ ಎಲ್ಲಿದೆ? ಅವರು ಹೇಗೆ ಬದುಕಿದ್ದರೆಂದು ನಾವು ಊಹಿಸಿಕೊಳ್ಳಬೇಕಷ್ಟೇ. ಅಲ್ಲಿ ಉಳಿದಿರುವ ದೊಡ್ಡ ದೊಡ್ಡ ಸ್ಮಾರಕಗಳಷ್ಟೇ ನಮ್ಮ ಕಣ್ಣಿಗೆ ಕಾಣುವುದು. ಇದೇ ರೀತಿ ಅನೇಕ ಸಂಸ್ಕೃತಿಗಳನ್ನು ನಾಶಗೊಳಿಸಲಾಗಿದೆ. ದಕ್ಷಿಣ ಅಮೇರಿಕ, ಉತ್ತರ ಅಮೇರಿಕ ಮತ್ತು ಆಸ್ಟ್ರೇಲಿಯಾದ ದೇಶೀಯ ಸಂಸ್ಕೃತಿಗಳನ್ನು ಸಮಗ್ರ ವಾಗಿ ನಾಶಗೊಳಿಸಲಾಗಿವೆ. ಹವಾಯ್‌ನ ಸಂಸ್ಕೃತಿ ಏನಾಯಿತು? ಹಾಳಾಯಿತು! ಆಫ್ರಿಕಾ ದೇಶದ ಬುಡಕಟ್ಟು ಸಂಸ್ಕೃತಿಯನ್ನು ನಾಶಗೊಳಿಸಲಾಗಿದೆ. ಕಳೆದ ಎರಡು ಸಾವಿರ ವರ್ಷಗಳಲ್ಲಿ ಎಷ್ಟು ಸಂಸ್ಕೃತಿಗಳನ್ನು ನಾಶಗೊಳಿಸಲಾಗಿದೆ? ಮಾನವ ಕುಲಕ್ಕೆ ಇದೊಂದು ಪೀಡೆ.

ಮತಾಂತರಗೊಳಿಸಿದ ನಂತರ ಭರತನಾಟ್ಯದಂತಹ ಕಲೆಗಳನ್ನುಳಿಸಲು ಅವರು ಪ್ರಯತ್ನಿಸಬಹುದು. ಆದರೆ, ನಟರಾಜನೇ ಇಲ್ಲದೇ ಭರತನಾಟ್ಯವೇ? ಭಕ್ತಿಯಿಲ್ಲದೆ ನೃತ್ಯವೆಲ್ಲಿ?

ನಮ್ಮ ಧರ್ಮ ಹಾಗೂ ಸಂಸ್ಕೃತಿ ಒಂದಕ್ಕೊಂದು ಹೊಸೆದುಕೊಂಡಿವೆ. ಸಂಸ್ಕೃತಿಯ ಕಣಕಣದಲ್ಲೂ ಧರ್ಮ ಹೊಕ್ಕಿದೆ. ನಾನು ನಿಮಗೆ ನಮಸ್ತೆ ಎಂದಾಗ, ಅದು ಸಂಸ್ಕೃತಿ, ಧರ್ಮ. ರಂಗೋಲಿ ಇಡುವುದು ಒಂದು ಸಂಪ್ರದಾಯ, ಅದು ಸಂಸ್ಕೃತಿ. ಪ್ರತಿಯೊಂದರ ಹಿಂದೆಯೂ ಒಂದು ದರ್ಶನವಿರುತ್ತದೆ. ಸಂಸ್ಕೃತಿಯ ಪ್ರತಿಯೊಂದು ರೂಪವೂ ಧರ್ಮಕ್ಕೆ ಸಂಬಂಧಿಸಿರುತ್ತದೆ ಹಾಗೂ ಸ್ವತಃ ಧರ್ಮವೇ ಆಧ್ಯಾತ್ಮಿಕ ಪರಿಜ್ಞಾನದಲ್ಲಿ ಬೇರೂರಿದೆ. ಏಕೆಂದರೆ ನಮ್ಮಲ್ಲಿ ಆಧ್ಯಾತ್ಮಿಕ ಸಂಪ್ರದಾಯವಿದೆ.

ಹೀಗಾಗಿ ಧರ್ಮಕ್ಕೆ ಸಂಬಂಧಪಡದ ಸಂಸ್ಕೃತಿ ಭಾರತದಲ್ಲಿ ಇಲ್ಲ. ಸಂಸ್ಕೃತಿಯ ನಾಶ ಧರ್ಮದ ನಾಶ. ಈ ವಿನಾಶವು ದೌರ್ಜನ್ಯವಲ್ಲದಿದ್ದರೆ, ದೌರ್ಜನ್ಯವೆನ್ನುವು ದೇನದು? ದಯವಿಟ್ಟು ನನಗೆ ಹೇಳಿ, ನಾನು ತಿಳಿಯಲಿಚ್ಛಿಸುತ್ತೇನೆ.

ಮತಾಂತರ ಒಂದು ದೌರ್ಜನ್ಯವೆಂದು ನಾನು ಹೇಳುತ್ತೇನೆ. ಘೋರವಾದ ಉಗ್ರ ವಾದ, ಗಹನವಾದ ದೌರ್ಜನ್ಯ. ಅಷ್ಟೇ ಅಲ್ಲ, ಬಲವಂತವಾಗಿ ಬೇರೊಬ್ಬರ ಜಾಗವನ್ನು ಆಕ್ರಮಿಸಿಕೊಳ್ಳುವವನನ್ನು ನಮ್ಮ ಧರ್ಮಶಾಸ್ತ್ರದಲ್ಲಿ ಆತತಾಯೀ ಎಂದು ಕರೆಯಲಾಗಿದೆ. ನಮ್ಮ ಶಾಸ್ತ್ರದನ್ವಯ ಆತತಾಯಿಗೆ ಪರಮಾವಧಿ ಶಿಕ್ಷೆಯನ್ನು ವಿಧಿಸಲಾಗಿದೆ. ಮಾಲೀಕನ ಮನಸ್ಸಿಗೆ ವಿರುದ್ಧವಾಗಿ ಅವನ ಜಾಗವನ್ನು ಅತಿಕ್ರಮಿಸಿಕೊಳ್ಳುವುದು ಮಹಾಪಾಪವೆಂದು ನಮ್ಮ ಧರ್ಮ ಹೇಳುತ್ತದೆ. ಬೇರೊಬ್ಬನ ಕ್ಷೇತ್ರ ಬೇರೊಬ್ಬನ ಕ್ಷೇತ್ರವೇ. ನಮಗೂ ಅದಕ್ಕೂ ಏನು ಸಂಬಂಧವಿಲ್ಲ. ವಿಷವನ್ನುಣಿಸುವವನು, ಪರಪತ್ನಿಯನ್ನು ಅಪಹರಿಸುವ ವನು, ಅಶಸ್ತ್ರನಾಗಿ ಬಂದವನ ಮೇಲೆ ದೌರ್ಜನ್ಯ ನಡೆಸುವವನು. ಇವರೆಲ್ಲರೂ ಆತತಾಯಿಗಳೇ ಆಗಿದ್ದು, ಅದಕ್ಕೆ ಗರಿಷ್ಠ ಶಿಕ್ಷೆಯನ್ನು ವಿಧಿಸಲಾಗಿದೆ. ಹೀಗಿರುವಾಗ ಇನ್ನು ಸಂಸ್ಕೃತಿಯ ನಾಶಕ್ಕೆ ಇನ್ನೆಂತಹ ಶಿಕ್ಷೆಯಿರಬಹುದು?

ಈಗ ಇಲ್ಲಿ ಒಬ್ಬ ಹಿಂದೂ ಅಶಸ್ತ್ರಪಾಣಿ. ಒಬ್ಬ ಯೆಹೂದಿ, ಒಬ್ಬ ಪಾರಸಿ, ಒಬ್ಬ ಬೌದ್ಧ ಧರ್ಮಿ ಎಲ್ಲರೂ ಅಶಸ್ತ್ರಪಾಣಿಗಳೇ. ಹಾಗಿರುವುದರಿಂದಲೇ ಅವರುಗಳು ಅನಾಕ್ರಮಣಕಾರರು. ಇವರನ್ನು ಮತಾಂತರಗೊಳಿಸಲು ಪ್ರಯತ್ನಿಸುವುದು ಅವರಿಗೆ ನೋವುಂಟು ಮಾಡಿದಂತೆ.

ನನ್ನ ಸಂಸ್ಕೃತಿಯ ಪ್ರತಿಭೆಯನ್ನು (Genius) ಬದಲಾಯಿಸುವಂತೆ ಹೇಳಲು ಅವರಿಗೆ ಅಧಿಕಾರವಿಲ್ಲ. ಅದು ನನ್ನ ಧರ್ಮದ ಪ್ರತಿಭೆ. ನಾನು ಮತಾಂತರವಾಗದಿರುವುದು ನನ್ನ ಸಂಸ್ಕೃತಿ ಹಾಗೂ ಧರ್ಮದ ಸಂಪ್ರದಾಯ. ನಾನು ನಿನ್ನನ್ನು ಮತ್ತು ನೀನು ನನ್ನನ್ನು ಪರಿವರ್ತಿಸುವೆನೆಂಬ ಪರಿಸ್ಥಿತಿ ಅದಲ್ಲ. ಉತ್ತಮವಾದ ಸಂಸ್ಥೆಯನ್ನು ಹೊಂದಿರುವವನು ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ಮತಾಂತರಗೊಳಿಸುತ್ತಾನೆ. ಆದರೆ ಇದು ಮಾರುಕಟ್ಟೆಯ ಪರ್ಸೆಂಟೇಜ್ ವ್ಯವಹಾರವೇನಲ್ಲ, ಇವರು ಆಟವಾಡಲು.

ನಮ್ಮಲ್ಲಿ ಇರುವುದೊಂದೇ. ಮತಾಂತರದಲ್ಲಿ ನಮಗೆ ನಂಬಿಕೆಯಿಲ್ಲದಿರುವುದರಿಂದ ನಮ್ಮ ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ನಾವು ಬದಲಾಯಿಸಲಾರೆವು. ನಿಮ್ಮನ್ನು ಕ್ರಿಶ್ಚಿಯನ್ನಾಗಿರಲು ಬಿಡುತ್ತೇವೆ, ಮುಸಲ್ಮಾನನಾಗಿರಲು ಬಿಡುತ್ತೇವೆ; ನಿಮ್ಮ ಪ್ರಾರ್ಥನೆ ನಮಗೆ ಸ್ವೀಕೃತ. 'ಎಲ್ಲಾ ಧರ್ಮಗಳು ಒಂದೇ ಗುರಿಯತ್ತ ಕೊಂಡೊಯ್ಯುತ್ತವೆ' ಎಂದು ನಾನು ಹೇಳದಿದ್ದರೂ ನಿಮ್ಮಷ್ಟಕ್ಕೆ ನಿಮ್ಮನ್ನು ಬಿಡುತ್ತೇನೆ. ಆ ಸರ್ವತ್ರ ತಪ್ಪನ್ನು ನಾನು ಮಾಡುವುದಿಲ್ಲ.

ಆದರೆ ನಿಮಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡುತ್ತೇನೆ. ನಿಮ್ಮ ಧರ್ಮವನ್ನು ನೀವು ಅನುಸರಿಸಿ. ನೀವು ಮಾಡುವಂತೆ ಬೇರೆಯವರನ್ನು ನನ್ನ ಧರ್ಮಕ್ಕೆ ಪರಿವರ್ತಿಸುವಂತೆ ನನಗೆ ಹೇಳಬೇಡಿ. ಏಕೆಂದರೆ ನಾನು ಮತಾಂತರ ಮಾಡಲಾರೆ. ಅದೇಕೆಂದರೆ, ನನಗದರಲ್ಲಿ ನಂಬಿಕೆಯಿಲ್ಲ. ನನ್ನ ತಂದೆ-ತಾಯಿ ಅದನ್ನು ನಂಬಲಿಲ್ಲ. ನಮ್ಮ ತಾತ-ಮುತ್ತಾತಂದಿರು ನಂಬಲಿಲ್ಲ. ನಮ್ಮ ಋಷಿಗಳಿಗೆ ಅದರಲ್ಲಿ ನಂಬಿಕೆಯಿರಲಿಲ್ಲ. ಬೇರೆಯವರ ಸಂಸ್ಕೃತಿಗೆ ಸಮಾನವಾಗಿರಬೇಕೆಂದು ನಮ್ಮ ಸಂಸ್ಕೃತಿಯನ್ನು ಬದಲಾಯಿಸಿಕೊಳ್ಳುವಂತೆ ಹೇಳಲು ಯಾರಿಗೂ ಹಕ್ಕಿಲ್ಲ. ಇದು ನಮ್ಮ ಸಂಸ್ಕೃತಿಯ ಹುಟ್ಟಿಗೆ ವಿರುದ್ಧ.

ನಮ್ಮ ಸಂಸ್ಕೃತಿಯಷ್ಟೇ ಅಲ್ಲ ಹೀಗಿರುವುದು; ಬೇರೆ ಸಂಸ್ಕೃತಿಗಳೂ ಇವೆ. ಪಾರ್ಸಿ ಜನಾಂಗದ ಸಂಖ್ಯೆ ಇಳಿಮುಖವಾಗಿದೆ. ಈ ಸಂಸ್ಕೃತಿಯ ನಾಶವನ್ನು ನೋಡುವುದೇ ನನಗೆ ಜುಗುಪ್ಸೆಯಾಗಿದೆ. ಅವರು ನಿರಪಾಯಕಾರಿ ಜನ, ಒಳ್ಳೆಯವರು.

ಯೆಹೂದಿಗಳೂ ಸಹ ನಷ್ಟವನ್ನನುಭವಿಸುತ್ತಿದ್ದು, ಅವರ ಸಂಖ್ಯೆಯೂ ಇಳಿಯುತ್ತಿದೆ. ತಮ್ಮ ಸಂಸ್ಕೃತಿ ಮತ್ತು ಧರ್ಮವನ್ನುಳಿಸಿಕೊಳ್ಳಲು ಅವರು ಸೆಣಸುತ್ತಿದ್ದಾರೆ. ಯಾರನ್ನೂ ಅವರು ಮತಾಂತರಗೊಳಿಸುತ್ತಿಲ್ಲ. ಜುಡಾಯಿಸ್ಮ್‌ನಲ್ಲಿ ಕ್ರೈಸ್ತ ಸಿದ್ಧಾಂತ (Evangelism) ಇಲ್ಲ. ಮತ ಪರಿವರ್ತನೆಯೆಂಬುದಿಲ್ಲ. (Proselitization).

ಅವರಲ್ಲಿ ಯಾವ ಪಾಷಂಡಿ ನ್ಯಾಯಾಲಯವಿರಲಿಲ್ಲ. ಅವರು ಕಷ್ಟಕ್ಕೊಳಪಟ್ಟವರು. ದೌರ್ಜನ್ಯಕ್ಕೆ ನೂರಾರು ವರ್ಷಗಳಿಂದ ಬಲಿಯಾದವರು.

ಆದ್ದರಿಂದ ಮತಾಂತರ ಜನರ ವಿರುದ್ಧದ ದೌರ್ಜನ್ಯವಷ್ಟೇ ಅಲ್ಲ, ಅಹಿಂಸೆಯನ್ನು ಪಾಲಿಸುವ ಜನರ ವಿರುದ್ಧದ ದೌರ್ಜನ್ಯ. ಹಿಂದೂಗಳು ಜಗಳವಾಡುವುದಿಲ್ಲವೆಂದು ನಾನು ಹೇಳುವುದಿಲ್ಲ. ಅವರು ಸೊಗಸಾಗಿ ಜಗಳವಾಡಬಲ್ಲರು. 'ನಿನ್ನ ಮನೆಯನ್ನು ನೀನು ಸರಿಮಾಡಿಕೊ' ಎಂದು ನೀವು ಹೇಳುವ ಅಗತ್ಯವಿಲ್ಲ. ನನಗೆ ಬೇಕಾದಷ್ಟು ಸಮಯ ವನ್ನು ತೆಗೆದುಕೊಂಡು ನನ್ನದೇ ರೀತಿಯಲ್ಲಿ ನನ್ನ ಮನೆಯನ್ನು ನಾನು ವ್ಯವಸ್ಥೆಗೊಳಿಸು ತ್ತೇನೆ. ನಮ್ಮ ಯಾವ ವೈದಿಕ ವಿಧಿಗಳನ್ನೂ ಅವರು ಒಪ್ಪಿಕೊಳ್ಳುವುದಿಲ್ಲ. ಆದರೂ ನಮಗೆ ಬೋಧಿಸಲು ಬರುತ್ತಾರೆ! ತಮ್ಮ ಧರ್ಮ ಬೋಧಿಸುವುದಷ್ಟೇ ಅಲ್ಲ, ಇತರ ಧರ್ಮಗಳ ವಿರುದ್ಧವಾಗಿ ಬೋಧಿಸುತ್ತಾರೆ. ಇಂತಹ ಬೋಧನೆ ದೌರ್ಜನ್ಯದ್ದು. ಅದು ದೌರ್ಜನ್ಯವನ್ನೇ ಬೆಳೆಸುತ್ತದೆ. ನಮ್ಮಲ್ಲೊಂದು ಮಹತ್ತಾದ ಪ್ರತಿಭೆಯಿದ್ದು, ಅದು ನನ್ನನ್ನು ಮತಾಂತರಗೊಳ್ಳಲು ಬಿಡುವುದಿಲ್ಲ. ನನ್ನನ್ನು ಮತಾಂತರಗೊಳ್ಳುವಂತೆ ಕೇಳಲು ಯಾರಿಗೂ ಅಧಿಕಾರವಿಲ್ಲ.

ನಮ್ಮ ವಿರುದ್ಧ ನಡೆಯುವ ದೌರ್ಜನ್ಯ ಒಂದು ಮುಖವಾದದ್ದು. ಉಗ್ರವಾದ ಒಮ್ಮುಖ ಹಿಂಸೆ. ಹೀಗೆ ಅವರು ಕಳೆದ ಎರಡು ಸಾವಿರ ವರ್ಷಗಳಿಂದ ನಡೆಸಿಕೊಂಡು ಬಂದು ಪಾರಾಗುತ್ತಿದ್ದಾರೆ. ಇದು ದೌರ್ಜನ್ಯವೆಂದು ಅವರು ತಿಳಿದುಕೊಳ್ಳಬೇಕೆಂದು ನನ್ನ ಇಚ್ಛೆ. ಮತಾಂತರ ದೌರ್ಜನ್ಯವಲ್ಲವೆಂಬುದನ್ನು ಅವರು ಸಾಬೀತುಗೊಳಿಸಲಿ.

*(ಈ ಲೇಖನವನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟವರು ಸ್ವಾಮಿನಿ ವರದಾ ಚೈತನ್ಯ)*



# ಹಿಂದೂಗಳು ಸ್ವಾತಂತ್ರ್ಯ ಗೌರವಿಸುವ ಜನಾಂಗ

- ಸುಮತೀಂದ್ರ ನಾಡಿಗ

ಮತಾಂತರದ ಬಗ್ಗೆ ಕೆಲವು ಪ್ರತಿಕ್ರಿಯೆಗಳನ್ನು ಗಮನಿಸುತ್ತ ಮಾಸ್ತಿಯವರು ಈ ವಿಷಯವಾಗಿ ಬರೆದದ್ದು ನೆನಪಾಯಿತು. ಅದು 'ಧರ್ಮ ಸಂರಕ್ಷಣೆ' ಎನ್ನುವ ಪುಸ್ತಕದಲ್ಲಿದೆ. ಮಾಸ್ತಿಯವರ ಧರ್ಮ ಸಂರಕ್ಷಣೆ ಪುಸ್ತಕ 25 ವರ್ಷದ ಹಿಂದೆ ಅಂದರೆ 1983ರಲ್ಲಿ ಪ್ರಕಟವಾಯಿತು. ಈ ಪುಸ್ತಕವನ್ನು ಓದಿದರೆ ಮಾಸ್ತಿಯವರ ದನಿ ಕೇಳಿದಂತಾಗುತ್ತದೆ. ಚಿಂತನೆ ಇಡೀತನ ಕಾಣುತ್ತದೆ. ಇಡೀ ಭಾರತೀಯ ಸಮಾಜದ ಬಗ್ಗೆ, ಸನಾತನ ಧರ್ಮದ ಬಗ್ಗೆ ದೀರ್ಘಕಾಲ ಆಳವಾಗಿ ಆಲೋಚಿಸಿದ ಮಾಸ್ತಿಯವರ ಆಪ್ತ ಮಾತುಗಳನ್ನು ಕೇಳಬೇಕಾದರೆ ಈ ಪುಸ್ತಕ ಓದಬೇಕು.

ಮಾಸ್ತಿಯವರು ಮತಾಂತರ ನಿದರ್ಶನಗಳನ್ನು ಕೊಡುತ್ತ ತಮಿಳುನಾಡಿನ ಮೀನಾಕ್ಷಿ ಪುರದಲ್ಲಿ ಹರಿಜನರು ಮುಸಲ್ಮಾನರಾದದ್ದನ್ನು ಜ್ಞಾಪಿಸುತ್ತಾರೆ. ಈ ಮತಾಂತರಕ್ಕೆ ಅರೇಬಿಯಾದಲ್ಲಿ ಪೆಟ್ರೋಲ್ ಮಾರಿ ಶ್ರೀಮಂತರಾದ ಮುಸಲ್ಮಾನರು ಹಣ ಕೊಟ್ಟರು. ಅದಕ್ಕೂ ಹಿಂದೆ ಮುಸಲ್ಮಾನರು ಭಾರತದ ಮೇಲೆ ಆಕ್ರಮಣ ನಡೆಸಿದ ಕಾಲದಲ್ಲಿ ಹಿಂದೂ ಧರ್ಮವನ್ನು ಕುಗ್ಗಿಸುವ ಮತ್ತು ಇಸ್ಲಾಂ ಧರ್ಮವನ್ನು ಶಕ್ತಗೊಳಿಸುವ ಪ್ರಯತ್ನ ಮಾಡುತ್ತ ನಿಸ್ಸಂಕೋಚವಾಗಿ ಬಲಪ್ರಯೋಗ ಮಾಡಿದರು. ಕ್ರೈಸ್ತರು ಗೋವಾ ಪ್ರಾಂತ ದಲ್ಲಿ ಹಿಂದೂಗಳನ್ನು ಬಲಾತ್ಕಾರದಿಂದ ಕ್ರೈಸ್ತರನ್ನಾಗಿ ಮಾಡಿದರು. ಈಚೆಗೆ ಕ್ರೈಸ್ತ ಪಾದ್ರಿಗಳು ಅನೇಕ ಆಸೆಗಳನ್ನು ತೋರಿಸಿ ಮತಾಂತರ ಮಾಡುತ್ತಿದ್ದಾರೆ. 'ನಮ್ಮ ರಾಷ್ಟ್ರ ಶಾಸನ ಪ್ರಜೆಗಳು ತಮಗೆ ಇಷ್ಟ ಬಂದ ಮತವನ್ನು ಸೇರಬಹುದು ಎಂದು ಸ್ವಾತಂತ್ರ್ಯವನ್ನು ನೀಡಿದೆ'. ಹಣ, ಹೆಣ್ಣು ಉದ್ಯೋಗ ಮೊದಲಾದ ಪ್ರಯೋಜನಗಳ ಪ್ರಲೋಭನೆ ಇಲ್ಲದೆ, ಕೇವಲ ಆತ್ಮತೃಪ್ತಿಗಾಗಿ ಮತಾಂತರವಾಗುವುದಕ್ಕೆ ಅಡ್ಡಿಯಿಲ್ಲ. ಆದರೆ 1955ರಲ್ಲಿ ಹೈದರಾಬಾದ್ ರಾಜ್ಯದ ಹಿಂದೂ ಧರ್ಮರಕ್ಷಕ ಸಂಸ್ಥೆಯೊಂದು 'ರಾಜ್ಯದಲ್ಲಿ ಕೆಲವು ಕ್ರೈಸ್ತ ಪಾದ್ರಿಗಳು ಹಿಂದೂ ಸಮಾಜದ ಜನರಿಗೆ ಒಂದಲ್ಲ ಒಂದು ಆಸೆ ತೋರಿಸಿ

ಜನರನ್ನು ಗುಂಪು ಗುಂಪಾಗಿ ಕ್ರೈಸ್ತರನ್ನಾಗಿ ಮಾಡುತ್ತಿದ್ದಾರೆ. ಇದನ್ನು ತಡೆಯಬೇಕು' ಎಂದು ಗೃಹಮಂತ್ರಿ ಗೋವಿಂದ ವಲ್ಲಭ ಪಂತರಿಗೆ ದೂರು ಕೊಟ್ಟದ್ದನ್ನು ನೋಡಿದರೆ ಮತಾಂತರಕ್ಕೆ ಸಂವಿಧಾನ ನೀಡಿದ ಸ್ವಾತಂತ್ರ್ಯದ ದುರುಪಯೋಗ ಆಗುತ್ತಿದೆ ಎನ್ನುವುದು ಸ್ಪಷ್ಟವಾಗಿದೆ.

1981ರಲ್ಲಿ ಕ್ರೈಸ್ತ ಪಾದ್ರಿಯೊಬ್ಬರು ಹಣಕಾಸಿನ ಸಹಾಯದ ಆಸೆ ತೋರಿಸಿ ಮಧ್ಯಪ್ರದೇಶದ ಹಿಂದುಳಿದ ವರ್ಗಗಳ ಸಮ್ಮ ಜನರನ್ನು ಕ್ರೈಸ್ತರನ್ನಾಗಿ ಮಾಡುತ್ತಿದ್ದುದು ಸರಕಾರದ ಗಮನಕ್ಕೆ ಬಂತು. ಆ ರೀತಿಯ ಮತಾಂತರವನ್ನು ನಿಲ್ಲಿಸಬೇಕೆಂದು ಸರಕಾರ ತಾಕೀತು ಮಾಡಿತು. ಪಾದ್ರಿ ತನ್ನ ವೃತ್ತಿಯನ್ನು ಬಿಟ್ಟಿದ್ದೇನೆ ಎಂದು ಹೇಳಿ, ತನ್ನ ಚೇಷ್ಟೆಯನ್ನು ಮುಂದುವರಿಸಿದ. ಕೆಲವು ವರ್ಷಗಳ ಹಿಂದೆ ಮದರಾಸಿನಲ್ಲಿ ಒಬ್ಬ ಕ್ರೈಸ್ತ ತರುಣ ಹದಿನಾಲ್ಕು ವರ್ಷದ ಹಿಂದೂ ಹುಡುಗಿಯನ್ನು ಚರ್ಚಿಗೆ ಕರೆದುಕೊಂಡು ಹೋಗಿ ಮದುವೆಯಾದ. ಹುಡುಗಿಯ ಕಡೆಯವರು ಪೊಲೀಸ್ ಕಂಪ್ಲೆಂಟ್ ಕೊಟ್ಟರು. ಈ ಕೇಸು ಕೋರ್ಟಿಗೆ ಹೋದಾಗ ಮ್ಯಾಜಿಸ್ಟ್ರೇಟರು ಆ ಕ್ರೈಸ್ತ ತರುಣ ಮತ್ತು ಕ್ರೈಸ್ತ ಪಾದ್ರಿಯ ವರ್ತನೆ ತಪ್ಪು ಎಂದು ತೀರ್ಪು ಕೊಟ್ಟರು. ಹೀಗೆ ಮಾಸ್ತಿಯವರು ಮತಾಂತರದ ನಿರ್ದಿಷ್ಟ ಮಾಹಿತಿಗಳನ್ನು ಕೊಟ್ಟು, ಬಿಳಿಯ ಜನ ಮಿಶನರಿಗಳಿಗೆ ಪ್ರಚಾರಕ್ಕೆ ಮತ್ತು ಮತಾಂತರ ಮಾಡುವುದಕ್ಕೆ ದುಡ್ಡು ಕೊಟ್ಟು ಬೆಂಬಲಿಸುತ್ತಾರೆ.

'ಸ್ವಾತಂತ್ರ್ಯವನ್ನು ಗೌರವಿಸುವ ಜನಾಂಗ' ಅಂದರೆ ಹಿಂದೂಗಳು 'ಇಂಥ ವಿಷಯದಲ್ಲಿ ಅಂದರೆ ಮತಾಂತರದ ವಿಷಯದಲ್ಲಿ ಯಾವ ಅಡ್ಡಿಯನ್ನು ಒಡ್ಡಕೂಡದು' ಎಂದು ನಮಗೇ ಬುದ್ಧಿವಾದ ಹೇಳುತ್ತಾರೆ! ಇದು ನಮ್ಮ ರಾಷ್ಟ್ರದ ಶಾಸನ ಮತದ ವಿಷಯವನ್ನು ಕುರಿತು ಒದಗಿಸುವ ಸ್ವಾತಂತ್ರ್ಯದ ಪೂರ್ಣ ದುರುಪಯೋಗ' ಎಂದು ಮಾಸ್ತಿಯವರು ಹೇಳುತ್ತಾರೆ (ಪುಟ 162).

ಬಲಾತ್ಕಾರದಿಂದ ಅಥವಾ ಇತರ ಕಾರಣಗಳಿಂದ ಮುಸ್ಲಿಮ್ ಆದ ಜನರ ಸಂತಾನ ದೊಡ್ಡದಾಗಿ ಬೆಳೆದು ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಭಾರತದೇಶ ಎರಡು ರಾಷ್ಟ್ರವಾಗಿ ವಿಭಾಗವಾಗಬೇಕಾಯಿತು. 'ಹಿಂದೂಗಳ ಜತೆ ಬದುಕಲಾರೆವು ನಮಗೆ ಬೇರೆ ರಾಷ್ಟ್ರಬೇಕು ಎಂದು ಭಾರತೀಯ ಮುಸ್ಲಿಮರು ಪಾಕಿಸ್ತಾನವನ್ನು ರಚಿಸಿಕೊಂಡರು. ಪಾಕಿಸ್ತಾನ ಎಂದರೆ ಪುಣ್ಯಭೂಮಿ. ಸದ್ಯಕ್ಕೆ ಪುಣ್ಯಭೂಮಿಯ ಒಂದು ದೊಡ್ಡ ಲಕ್ಷಣ ಅದರಲ್ಲಿ ಹಿಂದೂಗಳಿಲ್ಲದಿರುವುದು; ಅಥವಾ ಇದ್ದರೂ ಯಾವ ಲೆಕ್ಕಕ್ಕೂ ಬಾರದಿರುವುದು. ಹೀಗೆ ಪುಣ್ಯಾವನ್ನು ಸಾಧಿಸಿದ ಜನ ಇಪ್ಪತ್ತೈದು ವರುಷದ ಬಳಿಕ ಒಂದಾಗಿ ಬಾಳಲಾರದೆ ಹೋದರು. ಪಶ್ಚಿಮಕ್ಕೆ ಪಾಕಿಸ್ತಾನ, ಪೂರ್ವದ ಅರ್ಧ ಬಾಂಗ್ಲಾದೇಶ. ಅವಕಾಶ ಸಿಕ್ಕಿದರೆ ಪಾಕಿಸ್ತಾನದ ಮುಸ್ಲಿಂ ಜನ ಮತ್ತೆ ನಾಲ್ಕು ಭಾಗವಾಗಲು ಯತ್ನಿಸೀತು ಎಂದು ಕಾಣುತ್ತದೆ. ಸೇನಾಧಿಕಾರಿ ಒಬ್ಬ ಜನತೆಯ ಸ್ವಾತಂತ್ರ್ಯವನ್ನು ಕಸಿದು ಅದನ್ನು ಮೆಟ್ಟಿ ನಿಂತಿರುವುದರಿಂದ ಈ ದುರ್ದೆಸೆ ತಪ್ಪಿತು' ಎಂದು ಮಾಸ್ತಿಯವರು ಹೇಳುವಾಗ, ಪಾಕಿಸ್ತಾನ ಮತ್ತೆ ನಾಲ್ಕು ಭಾಗವಾಗಲಿಲ್ಲ

ಎನ್ನುವ ಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ಹೀಗೆ ಹೇಳುತ್ತಲೇ ಅವರು ಮುಸ್ಲಿಮರಿಗೆ ಒಂದು ರಾಷ್ಟ್ರ ಆದಂತೆ ತಮಗೂ ಒಂದು ರಾಷ್ಟ್ರ ಆಗಲಿ ಎಂದು ಕೆಲವರು ಕ್ರೈಸ್ತ ಪ್ರಮುಖರು ಯೋಚಿಸಿದಂತೆ ಕಾಣುತ್ತದೆ. ಅದಕ್ಕೆ ಪೂರಕವಾಗಿ ನಾಗಾಲ್ಯಾಂಡಿನಲ್ಲಿ ಫಿಜೋ ನಡೆಸಿದ ಪ್ರತ್ಯೇಕ ರಾಷ್ಟ್ರದ ಚಳವಳಿಯನ್ನು ಮತ್ತು ಅವರಿಗೆ ಮರೆಯಿಂದ ಸಹಾಯ ಮಾಡಿದ ಕ್ರೈಸ್ತ ಮಿಶನರಿ ಮೈಕೆಲ್ ಸ್ಕಾಟ್‌ನನ್ನು ನೆನಪು ಮಾಡಿಕೊಳ್ಳುತ್ತಾರೆ. ಈ ಚಳವಳಿಯನ್ನು ಹಿಡಿತಕ್ಕೆ ತರುವುದಕ್ಕಾಗಿ ನಮ್ಮ ಕೇಂದ್ರ ಸರಕಾರ ನಾಗಾಲ್ಯಾಂಡನ್ನು ರಚಿಸಿದ್ದು, ಫಿಜೋ ಇಂಗ್ಲೆಂಡಿಗೆ ಹೋಗಿ ನೆಲೆಸಿದ್ದು ಮತ್ತು ಮೈಕೆಲ್ ಸ್ಕಾಟ್‌ನನ್ನು ದೇಶದಿಂದಾಚೆಗೆ ಕಳಿಸಿದ್ದಕ್ಕೆ ಮಾಸ್ತಿಯವರು ಸಮಾಧಾನಪಟ್ಟುಕೊಳ್ಳುತ್ತಾರೆ.

'ಮಿಜೊ ಎಂಬ ಆದಿವಾಸಿ ಸಮುದಾಯದ ಕೆಲವರು ತಾವು ಕ್ರೈಸ್ತರಾದ ಕಾರಣದಿಂದ ತಮ್ಮ ಮೂಲೆಯೂ ಬೇರೆ ರಾಷ್ಟ್ರ ಆಗಬೇಕೆಂದು ಬಯಸಿದರು. ಇವರ ನಾಯಕ ಲಾಲ್‌ಡೇಂಗಾ ಎಂಬ ಕ್ರೈಸ್ತ ಪ್ರಮುಖ. ರಾಷ್ಟ್ರದ ಶಾಸನ ಪರಿಧಿಯೊಳಗೆ ಇದ್ದುಕೊಂಡೇ ಮಿಜೊ ಜನರ ಭೂಮಿ ಸ್ವಾಯತ್ತವಾಗಿ ಬಾಳಲು ಒಪ್ಪುತ್ತದೆ ಎಂದು ಹೇಳುತ್ತ ಈ ಕ್ರೈಸ್ತ ನಾಯಕ ಸಂಧಾನ ನಡೆಸಿದರು. ಮೇಲ್ನೋಟಕ್ಕೆ ಚೆನ್ನಾಗಿ ನಡೆದುಕೊಂಡರು. ಅಂತರ್ಯದಲ್ಲಿ ಇವರಿಗೆ ಕೆಟ್ಟ ಎಣಿಕೆ ಇದೆ ಎನ್ನುವುದು ಇವರ ನಡತೆಯಿಂದ ಕಂಡಿತು. ಈಗ ಇವರ ಸಂಧಾನ ಮುಗಿದು ಮಿಜೊ ಭೂಮಿ ತಕ್ಕಷ್ಟು ಸಮಾಧಾನದಿಂದ ನಡೆಯುತ್ತಿದೆ. ಇದರಿಂದ ನಮ್ಮ ಜನ ಕ್ರೈಸ್ತರಾಗುವುದು ಮತದ ದೃಷ್ಟಿಯಿಂದ ಮಾತ್ರ ಅಲ್ಲ, ಮತವನ್ನು ಬಿಡುವಂತೆ ರಾಷ್ಟ್ರವನ್ನೂ ಬಿಡಬೇಕು ಎನ್ನುವ ಬುದ್ಧಿಯನ್ನು ಬೆಳೆಸಿದೆ ಎನ್ನುವುದು ಕಾಣುತ್ತದೆ. ಇಂಥ ನಡತೆಗೆ ರಾಷ್ಟ್ರ ಜೀವನದಲ್ಲಿ ಅವಕಾಶ ಇರಕೂಡದು. ಇದು ಅನ್ಯಮತ ಸ್ವೀಕಾರ ಮಾತ್ರ ಅಲ್ಲ; ರಾಷ್ಟ್ರದ್ರೋಹ' ಹೀಗೆ ಮಾಸ್ತಿಯವರು ಮತಾಂತರದ ದೀರ್ಘ ಇತಿಹಾಸವನ್ನು ಮತ್ತು ಮೂಲ ಉದ್ದೇಶವನ್ನು ವಿಶ್ಲೇಷಿಸುತ್ತಾರೆ.

* * * *

ಮಾಸ್ತಿಯವರ 'ಧರ್ಮ ಸಂರಕ್ಷಣೆ' ಎನ್ನುವ ಪುಸ್ತಕವನ್ನು ಓದುತ್ತ ನನ್ನ ತಲೆಯಲ್ಲಿ ಅನೇಕ ಪ್ರಶ್ನೆಗಳು ಗುಂಯ್ಗುಟ್ಟಿದವು. ಪ್ರಪಂಚದ ಮೂಲೆ ಮೂಲೆಯಿಂದ ಮತಾಂತರಕ್ಕೆ ಕೋಟಿಗಟ್ಟಲೆ ಹಣದ ಹೊಳೆಯನ್ನು ಹರಿಸುವ ಪರದೇಶದ ಮುಸಲ್ಮಾನ ಸಂಘ ಸಂಸ್ಥೆಗಳು ಬಡ ಮುಸಲ್ಮಾನರನ್ನು ಚೀನಾ, ರಷ್ಯಾ, ಇಂಗ್ಲೆಂಡ್, ಅಮೆರಿಕ, ಭಾರತ, ಪಾಕಿಸ್ತಾನ, ಬಾಂಗ್ಲಾದೇಶ ಮೊದಲಾದ ರಾಷ್ಟ್ರಗಳಲ್ಲಿರುವ ಬಡ ಮುಸ್ಲಿಮರಿಗೆ ಆಧುನಿಕ ವಿದ್ಯಾಭ್ಯಾಸಕ್ಕೆ ಬೇಕಾದ ಅನುಕೂಲಗಳನ್ನೇಕೆ ಒದಗಿಸುತ್ತಿಲ್ಲ? ಅವರ ಆರೋಗ್ಯ, ನೈರ್ಮಲ್ಯ, ವಸತಿಗಳ ಕಡೆಗೇಕೆ ಗಮನ ಕೊಡುತ್ತಿಲ್ಲ? ಅವರು ಯಾವುದೇ ರಾಷ್ಟ್ರದಲ್ಲಿದ್ದರೂ ಆ ರಾಷ್ಟ್ರದ ನಿಷ್ಠಾವಂತ ಪ್ರಜೆಗಳಾಗಿ ಬದುಕಲಿಕ್ಕೇಕೆ ಬಿಡುವುದಿಲ್ಲ? ಬೇರೆ ದೇಶದ ಮುಸಲ್ಮಾನರು ಏನು ಮಾಡಬೇಕು ಎನ್ನುವ ವಿಷಯ ಒಂದು ಕಡೆ ಇರಲಿ. ಭಾರತಕ್ಕೆ ಸ್ವಾತಂತ್ರ್ಯ

ಒಂದು ಅರವತ್ತು ವರ್ಷಗಳ ಮೇಲಾದರೂ, ಅವರನ್ನು ವೋಟ್‌ಬ್ಯಾಂಕ್ ಆಗಿಟ್ಟು ಕೊಳ್ಳಲಿಕ್ಕೆ ಸ್ಪರ್ಧಿಸುತ್ತಿರುವ ಪಕ್ಷಗಳು ಭಾರತದ ಎಲ್ಲ ಮುಸಲ್ಮಾನರನ್ನೂ ಅಕ್ಷರಸ್ಥರನ್ನಾಗಿ, ವಿದ್ಯಾವಂತರನ್ನಾಗಿ ಮತ್ತು ವಿಚಾರವಂತರನ್ನಾಗಿ ಮಾಡಲಿಕ್ಕೆ ಏಕೆ ಪ್ರಯತ್ನಿಸಲಿಲ್ಲ? ಅವರೂ ಸುಶಿಕ್ಷಿತರಾಗಬೇಕು, ಸುಸಂಸ್ಕೃತರಾಗಬೇಕು, ಉದ್ಯೋಗಸ್ಥರಾಗಬೇಕು, ಬರೀ ವೋಟುಗಳಾಗಬಾರದು ಎಂದು ಸ್ವತಂತ್ರ ಭಾರತದಲ್ಲಿ ಹೆಚ್ಚು ಕಾಲ ಸರಕಾರವನ್ನು ನಡೆಸಿದ ಕಾಂಗ್ರೆಸ್ ಪಕ್ಷಕ್ಕೇಕೆ ಹೊಳೆದಿಲ್ಲ? ಅವರಿಗೆ ಮನುಷ್ಯತ್ವವೇ ಇಲ್ಲವೆ?

ಈಗಿನ ಕಾಲದ ಮತಾಂತರದ ಬಗ್ಗೆ ನನಗೆ ಇನ್ನೂ ಒಂದು ವಿಚಾರ ಬಂತು. ಮತಾಂತರಕ್ಕೆ ಮುಖ್ಯ ಕಾರಣಗಳು ಎರಡು ಕಾಣುತ್ತದೆ. ಒಂದು ಬಡತನ, ಸರಿಯಾದ ಊಟ, ವಸತಿ, ನೈರ್ಮಲ್ಯ, ಶಿಕ್ಷಣ, ಉದ್ಯೋಗಾವಕಾಶಗಳು, ಇಲ್ಲದಿರುವಿಕೆ, ಇನ್ನೊಂದು ಕಾರಣವೆಂದರೆ ಹಿಂದೂ ಧರ್ಮಕ್ಕೆ ಹಲವಾರು ಶತಕಗಳಿಂದ ಅಂಟಿಕೊಂಡಿರುವ ಅಸ್ಪೃಶ್ಯ-ತೆಯ ರೋಗ. ಬಡತನದ ನಿರ್ಮೂಲನಕ್ಕೆ ಸರಕಾರಗಳು ಸರಿಯಾದ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರಬೇಕು. ಅಸ್ಪೃಶ್ಯತೆ ನಿವಾರಣೆಗೆ ಮಾಸ್ತಿಯವರು ಒಂದು ಪರಿಹಾರವನ್ನು ಸೂಚಿಸುತ್ತಾರೆ. ಅದೇನೆಂದರೆ 'ಹಿಂದೂ ಧರ್ಮದಲ್ಲಿ ಹುಟ್ಟಿದವರೆಲ್ಲ ಸಮಾನರು ಎಂದು ಸಾರಿ, ಧರ್ಮ ಈಗ ಆರ್ಯ ಸಮಾಜದಲ್ಲಿ ನಡೆಯುತ್ತಿರುವಂತೆ ಎಲ್ಲ ಹಿಂದೂ ಬಾಲಕ ಬಾಲಕಿಯರಿಗೆ ಎಂಟನೆ ವರ್ಷದಲ್ಲಿ ಯಜ್ಞೋಪವೀತವನ್ನು ಹಾಕಿ, ಗಾಯತ್ರಿ ಉಪದೇಶ ಮಾಡಬೇಕು. ಹಿಂದೂ ಆಗಿ ಹುಟ್ಟಿದವರಿಗೆ ಮಾತ್ರವಲ್ಲ, ಹೊರಗಿನ ಯಾರು ಈ ಸಮಾಜವನ್ನು ಸೇರಲು ಬಯಸಿದರೂ ಅವರಿಗೂ ಹಿಂದೂ ದೀಕ್ಷೆ ಕೊಟ್ಟು ಯಜ್ಞೋ-ಪವೀತ ಬ್ರಹ್ಮೋಪದೇಶವನ್ನು ಕೊಡಬೇಕು. ಹೀಗೆ ದೀಕ್ಷೆ ಪಡೆದ ಜನವೆಲ್ಲ ಹಿಂದೂ ಸಮಾಜದಲ್ಲಿ ಸೇರಿರುವ ಎಲ್ಲ ಜನ ಎಲ್ಲ ರೀತಿಯಲ್ಲೂ ತಮಗೆ ಸಮ ಎಂದು ತಿಳಿಯ ತಕ್ಕದ್ದು. ಭೇದದ ಕಲ್ಪನೆ ಇಲ್ಲದೆ ಎಲ್ಲರೂ ಜತೆಯಾಗಿ ಕುಳಿತು ಊಟ ಮಾಡಬಹುದು. ಇಷ್ಟೇ; ಸಾರ್ವಜನಿಕ ಭೋಜನದಲ್ಲಿ ಎಲ್ಲರಿಗೂ ಸರಿಯೆನಿಸುವ ಆಹಾರ ಮಾತ್ರ ಇರ-ಬೇಕು. ಹೆಣ್ಣು, ಗಂಡು ಪರಸ್ಪರ ಒಲಿದವರು ಜಾತಿಯ ಅಡ್ಡಿ ಇಲ್ಲದೆ ಮದುವೆ ಆಗ ಬಹುದು'. ಇದು ಮಾಸ್ತಿಯವರ ಮನೋಧರ್ಮ.

ಮಾಸ್ತಿಯವರ ಧರ್ಮ ಸಂರಕ್ಷಣೆ ಎನ್ನುವ ಪುಸ್ತಕವನ್ನು ಓದುತ್ತಿರುವಾಗ ಹದಿಮೂರನೆ ಶತಮಾನದ 'ದೇವಲಸ್ಮೃತಿ' ಎನ್ನುವ ಗ್ರಂಥದ ನೆನಪಾಯಿತು. ದೇವಲ ಋಷಿ 'ಒಂದು ವೇಳೆ ಹಿಂದೂ ಹುಡುಗಿಯೊಬ್ಬಳು ಮುಸಲ್ಮಾನನಿಂದ ಅತ್ಯಾಚಾರಕ್ಕೆ ಒಳಗಾಗಿದ್ದರೂ ಅವಳು ಮುಟ್ಟಾದ ಕೂಡಲೇ ಪವಿತ್ರಳಾಗುತ್ತಾಳೆ. ಅಕಸ್ಮಾತ್ತಾಗಿ ಅವಳಿಗೆ ಬಸಿರು ನಿಂತರೆ ಮಗುವನ್ನು ಹಡೆದು ಕೂಡಲೇ ಪವಿತ್ರಳಾಗುತ್ತಾಳೆ' ಎಂದು ಹೇಳುತ್ತಾನೆ. ಅವನ ಮಾತುಗಳನ್ನು ಭಾರತೀಯರು ಪರಿಗಣಿಸಿದ್ದರೆ, ಆ ಋಷಿಯ ಮಾತುಗಳನ್ನು ನಂಬಿದ್ದರೆ ಒಬ್ಬ ಮುಸಲ್ಮಾನ ಹಿಂದೂ ಹುಡುಗಿಯನ್ನು ಮುಟ್ಟಿದ್ದರಿಂದ ಅಥವಾ ಬಲಾತ್ಕಾರವಾಗಿ ಕೂಡಿದ್ದರಿಂದ ಅವಳು ಅಪವಿತ್ರಳಾದಳೆಂದು ಅವಳನ್ನು ಹಿಂದೂ

ಧರ್ಮದಿಂದ ಹೊರದೂಡುವ ಅಮಾನವೀಯ, ದಯಾಹೀನ ಕ್ರೂರವರ್ತನೆಯನ್ನು ಬಿಡಬಹುದಾಗಿತ್ತು. ದೇವಲ ಋಷಿಯ ಮಾತುಗಳಿಗೆ ನಾವು ಮನಸ್ಸು ಕೊಟ್ಟಿದ್ದರೆ, ನಮ್ಮ ಹೃದಯ ಏನು ಹೇಳುತ್ತದೆಂದು ಕೇಳಿಸಿಕೊಂಡು ಹಾಗೆ ನಡೆದಿದ್ದರೆ ಲಕ್ಷಾಂತರ ಹಿಂದೂ ಹೆಣ್ಣುಗಳನ್ನು ಮುಸಲ್ಮಾನರ ತೆಕ್ಕೆಗೆ ತಳ್ಳುತ್ತಿರಲಿಲ್ಲ. ನಾವು ಹೊರಗೆ ತಳ್ಳಿ ಬಹಿಷ್ಕೃತಳಾದ ಒಬ್ಬೊಬ್ಬಳೂ ಆರೆಂಟು ಮಕ್ಕಳನ್ನು ಹೆತ್ತು ತನ್ನ ಅರಿವಿಲ್ಲದೆಯೇ, ಹಿಂದೂ ಧರ್ಮದ ಮೇಲೆ ಪ್ರತೀಕಾರವನ್ನು ತೆಗೆದುಕೊಳ್ಳುವುದು ಸಾಧ್ಯವಿರಲಿಲ್ಲ. ಮುಸಲ್ಮಾನರ ಸಂಖ್ಯೆ ಹೆಚ್ಚಾಗಲಿಕ್ಕೆ ಹಿಂದೂಗಳ ಹೃದಯಹೀನತೆಯೇ ಕಾರಣವಾಯಿತು.

ದೇವಲ ಋಷಿಯಂತಹ ಉದಾರ ಮಾನವತಾವಾದಿಗಳು ಹೃದಯವಂತರು ಇದ್ದರೆನ್ನುವುದಕ್ಕೆ ಮಾಸ್ತಿಯವರು ಒಂದು ಉದಾಹರಣೆಯನ್ನು ಕೊಡುತ್ತಾರೆ. 'ಕಾಶ್ಮೀರದಲ್ಲಿ ಹಿಂದೂಗಳನ್ನು ಮುಸಲ್ಮಾನರನ್ನಾಗಿ ಮಾಡುವ ಕ್ರಮ ಬಹುಪಾಲು ನಡೆದು ನೂರರಲ್ಲಿ ತೊಂಬತ್ತೈದರಷ್ಟು ಪ್ರಜೆ ಮಹಮ್ಮದೀಯ ಆಯಿತು. ಹತ್ತೊಂಬತ್ತನೆಯ ಶತಮಾನದ ಮಧ್ಯದಲ್ಲಿ ಆ ರಾಜ್ಯದ ದೊರೆ ಒಬ್ಬ ಈ ಜನರಲ್ಲಿ ಬಹುಸಂಖ್ಯೆಯ ಅನೇಕರು ಸಮುದಾಯ ಸಮುದಾಯೇತರವಾಗಿ ಮತ್ತೆ ಹಿಂದೂಗಳಾಗಲು ಬಯಸುತ್ತಿರುವುದನ್ನು ಕಂಡನು. ಈ ಜನರನ್ನು ಹೀಗೆ ಮರಳಿ ಹಿಂದೂಗಳಾಗಿ ಸೇರಿಸಿಕೊಳ್ಳಬಹುದೇ ಎಂದು ತಿಳಿಯಲು.ಅವನು ವಾರಣಾಸಿಯ ಪಂಡಿತ ಮಂಡಲಿಗೆ ಒಂದು ನಿಯೋಗವನ್ನು ಕಳುಹಿಸಿದನು. ಪಂಡಿತ ಮಂಡಲಿ ತಮಗೆ ಶುದ್ಧಾಂಗವಾಗಿ ಒಪ್ಪಿಗೆ ಇಲ್ಲ ಎಂದು ತಿಳಿಸಿದರು. ದೊರೆಯ ಅಪೇಕ್ಷೆ ಹೀಗೆ ಕೊನೆಗೊಂಡಿತು. ಈಗ ನಮ್ಮ ಜನರ ಮನಸ್ಸಿನ ಸ್ಥಿತಿ ಬೇರೆಯಾಗಿದೆ. ಹೀಗಾಗಿ ಆರ್ಯ ಸಮಾಜ ಎಷ್ಟೋ ವರುಷಗಳಿಂದ ಈ ಕೆಲಸವನ್ನು ಮಾಡುತ್ತ ಬಂದಿದೆ. ಈಚೆಗೆ ಇಂಥ ಜನ ಬೇರೆ ಮತಗಳಿಂದ ಹಿಂದೂಮತಕ್ಕೆ ಹಿಂದಿರುಗಿ ಬಂದರು ಎಂದು ವರದಿಯೂ ಆಗಿದೆ. ನಮ್ಮ ಸಮಾಜ ಈ ವಿಷಯದಲ್ಲಿ ಇನ್ನಷ್ಟು ಕಾರ್ಯೋನ್ಮುಖವಾಗಬೇಕು. ಇದುವರೆಗೆ ಈ ಕೆಲಸವನ್ನು ಮಾಡದ ಈ ಸಮಾಜ ಇದರಲ್ಲಿ ತೊಡಗಿದರೆ ಕ್ರೈಸ್ತ ಮುಸ್ಲಿಂ ಮತಗಳವರು ತೀರ ಸಹಜವಾಗಿ ಬೇಸರ ಪಟ್ಟಾರು. ಅವರಿಗೆ ನಾವು 'ಅಪ್ಪಾ, ನಾವು ಪೂರ್ವದಿಂದ ಮುಸ್ಲಿಮರಾದವರನ್ನು ನಮ್ಮಲ್ಲಿ ಬಂದು ಸೇರಿ ಎಂದು ಕರೆಯುತ್ತಿಲ್ಲ. ನಮ್ಮವರಾಗಿದ್ದು ಯಾವುದೋ ಕಾರಣದಿಂದ ನಮ್ಮನ್ನು ಬಿಟ್ಟು ಬೇರೆ ಮತಗಳಿಗೆ ಹೋದ ನಮ್ಮವರನ್ನು ಹಿಂದಕ್ಕೆ ಬರಮಾಡಿಕೊಳ್ಳುತ್ತಿದ್ದೇವೆ ಅಷ್ಟೇ' ಎಂದು ಸಮಾಧಾನ ಹೇಳಬೇಕು.

ಮೇಲ್ಮಟ್ಟವೆಂಬ ಸಮುದಾಯಗಳು ಕೆಳಗಿನವು ಎಂಬ ಸಮುದಾಯಗಳನ್ನು ತಮಗೆ ಸಮ ಎಂದು ಕಾಣುವುದು ಈ ಜನರನ್ನು ಕಳೆದುಕೊಳ್ಳಬಾರದು ಎಂಬ ದೃಷ್ಟಿಯಿಂದ ಮಾತ್ರ ಅಲ್ಲ, ದಿಟದಲ್ಲಿ ನಮ್ಮ ಧರ್ಮ ಇದನ್ನೇ ಅಪೇಕ್ಷಿಸುತ್ತದೆ ಎಂಬ ಕಾರಣದಿಂದ ಆಗಬೇಕು. ಈ ಅರ್ಥದಲ್ಲಿ ನಮ್ಮ ಧರ್ಮದ ನಿಲುವಿನಲ್ಲಿ ಒಂದು ಮಾರ್ಪಾಡು ಅವಶ್ಯಕ ಆಗುತ್ತದೆ'. ಇದು ಮಾಸ್ತಿಯವರು ಇಪ್ಪತ್ತೈದು ವರ್ಷದ ಹಿಂದೆ ಯೋಚಿಸಿ

ಸಮಾಧಾನದಿಂದ ಹೇಳಿದ ಮಾತುಗಳು. ಇನ್ನೊಂದು ಕಡೆ ಮಾಸ್ತಿಯವರು 'ಹಿಂದೆ ಹಿಂದೂಮತವನ್ನು ಬಿಟ್ಟು, ಬೇರೆ ಮತಕ್ಕೆ ಹೋದ ಜನರು, ಮತ್ತು ಅವರ ಸಂತಾನ ಹಿಂದಕ್ಕೆ ಬರಲಿ ಎಂದು ಬಯಸುವುದು, ಹಾಗೆ ಬಂದವರನ್ನು ಮತ್ತೆ ಸಮಾಜಕ್ಕೆ ಸೇರಿಸಿ ಕೊಳ್ಳುವುದು ಯುಕ್ತ' ಎಂದು ಹೇಳಿದ್ದಾರೆ. ಮಾಸ್ತಿಯವರು ಇನ್ನೂ ಬದುಕಿದ್ದರೆ, ಈಗ ಮತಾಂತರದ ಸಮಸ್ಯೆ ದೊಡ್ಡದಾಗಿ ಕಾಣುತ್ತಿ ರುವ ಈ ಸಂದರ್ಭ ಅವರು 25 ವರ್ಷದ ಹಿಂದೆ ಹೇಳಿದ ಮಾತನ್ನೆ ಹೇಳುತ್ತಿದ್ದರು ಅನ್ನಿಸುತ್ತದೆ. 'ಎಲ್ಲ ಮತಗಳ ಜನರೂ ತಮ್ಮಲ್ಲಿ ಒಳ್ಳೆಯತನ ಬೆಳೆಯುವುದಕ್ಕೆ ಏನು ಮಾಡಬೇಕು ಎಂದು ಯೋಚಿಸಬೇಕು. ಒಂದು ಮತದವರು ಬೇರೆ ಮತಗಳಿಂದ ಜನರನ್ನು ಕಸಿಯುತ್ತಿರುವ ಇಂದಿನ ಅಸಾಧು ಪ್ರವೃತ್ತಿ ಯನ್ನು ಬಿಡಬೇಕು' ಈ ಮಾತನ್ನು ಈಗಲೂ ಮಾಸ್ತಿಯವರು ಹೇಳುತ್ತಿದ್ದಾರೆ.



# ಮತಾಂತರ: ತಪ್ಪು-ಒಪ್ಪು, ಹಿಂದು-ಇಂದು

- ಡಾ. ಎಸ್.ಆರ್. ಲೀಲಾ

---

ನಲವತ್ತು ವರ್ಷಗಳಿಂದ ನಿರಂತರವಾಗಿ ಕಾದಂಬರಿಗಳನ್ನು ಬರೆಯುತ್ತಿರುವ ಭೈರಪ್ಪ ಕನ್ನಡವನ್ನೂ, ಕನ್ನಡ ಓದುಗರನ್ನೂ ಬೆಳೆಸಿದ್ದಾರೆ. ಜೀವನದ ಬೇರುಗಳನ್ನು ಅರಿಯಲು ತಾನು ಹುಟ್ಟಿಬೆಳೆದ ಪರಿಸರದಲ್ಲೇ ನೆಲೆನಿಂತು ಪ್ರಜ್ಞಾಪೂರ್ವಕ ಪ್ರಾಮಾಣಿಕ ಪ್ರಯತ್ನ ಪಡುತ್ತಿದ್ದಾರೆ ಎಂಬುದು ಅವರ ಕಾದಂಬರಿಗಳನ್ನು ಓದಿದ ಸಾಮಾನ್ಯರಿಗೂ ವೇದ್ಯವಾಗುತ್ತದೆ. ಆದರೆ ಅವರನ್ನು ಈ ರೀತಿ ನೋಡದ ಅಸಾಮಾನ್ಯರೂ ಬೇಕಾದಷ್ಟಿದ್ದಾರೆ.

ಕನ್ನಡ ಖ್ಯಾತ ವಿಮರ್ಶಕರೂ, ಕನ್ನಡ ಲೋಕದ ಕೆಲ ವಿಶಿಷ್ಟ ವ್ಯಕ್ತಿಗಳೂ ಅವರ ಮೇಲೆ ಎಂದಿನಿಂದಲೂ ದಾಳಿ, ವಾಗ್ದಾಳಿ ಮಾಡುತ್ತಲೇ ಇದ್ದಾರೆ. ದಾಳಿ ಮಾಡುವವರಲ್ಲಿ ಭಾರತೀಯ ಸಾಹಿತ್ಯದ ಬುಡಗಳನ್ನು ತಡಕಾಡಿದವರಿಗಿಂತ ಪಾಶ್ಚಾತ್ಯ ಪ್ರಭಾವಗಳಿಗೆ ಒಳಗಾದವರೇ ಹೆಚ್ಚು. ಪಾಶ್ಚಾತ್ಯ ಮಾನದಂಡಗಳನ್ನೇ ಭಾರತೀಯ ಸಾಹಿತ್ಯ ವಿಮರ್ಶೆಗೂ ಅನ್ವಯಿಸಿದವರು ಇವರು. ಇದರಿಂದ ವಿಮರ್ಶೆ ಹಾದಿ ತಪ್ಪಿ ಎಷ್ಟೋ ವಿಚಾರಗಳು ನೆಲೆ ಕಳೆದುಕೊಂಡು ಅಸ್ಪಷ್ಟವಾಗೇ ಉಳಿದಿವೆ. ಭೈರಪ್ಪನವರಷ್ಟು, ದೇಶವಿದೇಶಗಳ ಪ್ರವಾಸಾನುಭವವಾಗಲಿ, ಅಧ್ಯಯನದ ಆಳವಾಗಲಿ, ಜೀವನ ನಿಷ್ಠೆಯಾಗಲಿ ಕನ್ನಡದಲ್ಲಿ ಹೆಸರು ಮಾಡಿರುವ ಎಷ್ಟೋ ಜನಕ್ಕೆ ಇಲ್ಲವೆಂಬುದು ಎಲ್ಲರಿಗೂ ತಿಳಿದ ಗುಟ್ಟು. ಹೀಗಾಗಿ ವಿಮರ್ಶಕರ ಆಕ್ಷೇಪಗಳು ಏನೇ ಇದ್ದರೂ, ಎಷ್ಟೇ ಇದ್ದರೂ ಓದುಗರು ಮಾತ್ರ ಭೈರಪ್ಪನವರಿಗೆ ತಮ್ಮ ಮನ-ಮನೆಗಳಲ್ಲಿ ಎತ್ತರದ ಸ್ಥಾನ ಕಲ್ಪಿಸಿ ಗೌರವಿಸಿದ್ದಾರೆ.

ಅಪಾರ ಓದುಗರಿರುವ ಭೈರಪ್ಪನವರು ಮತಾಂತರದ ಬಗ್ಗೆ ತಮ್ಮ ಅಧ್ಯಯನದ ಹರಿವಿನಲ್ಲಿ ಚರಿತ್ರೆಯ ಕ್ರೂರಸಂಗತಿಗಳನ್ನು ತೆರೆದಿಟ್ಟಾಗ, ವಾಸ್ತವದ ಚಿತ್ರಕ್ಕೆ ಇತಿಹಾಸದ ಕಟ್ಟು ಹಾಕಿದಾಗ ಅದು ಓದುಗರಲ್ಲಿ ಸಂಚಲನ ಮೂಡಿಸುವುದು ಸಹಜ. ಕ್ರೈಸ್ತ ಮತಕ್ಕೂ ಹಿಂದೂ ಧರ್ಮಕ್ಕೂ ಕೆಲವು ಮೂಲಭೂತ ವ್ಯತ್ಯಾಸಗಳಿವೆ. ಕ್ರೈಸ್ತರು ಸಾವಿರಾರು ವರ್ಷಗಳಿಂದ ಮತಾಂತರ ಪ್ರಕ್ರಿಯೆಯನ್ನು ಜಗತ್ತಿನಾದ್ಯಂತ ಚಾಲ್ತಿಯಲ್ಲಿಟ್ಟಿದ್ದಾರೆ.

ಇದಕ್ಕಾಗಿ ಅತ್ಯಂತ ವ್ಯವಸ್ಥಿತವಾದ ಸಂಸ್ಥೆಯನ್ನು ನಿರ್ಮಿಸಿಕೊಂಡಿದ್ದಾರೆ. ಅದೇ ಚರ್ಚ್. ನಮ್ಮ ಮಠಮಾನ್ಯಗಳಲ್ಲಿ ತಮ್ಮ ತಮ್ಮ ಸ್ವಾಮಿಗಳನ್ನು ಜಗದ್ಗುರು ಎಂದು ಹೇಳಿಕೊಳ್ಳುವುದುಂಟು. ಇದು ಕೇವಲ ಔಪಚಾರಿಕವಷ್ಟೆ. ನಿಜವಾಗಿಯೂ ಜಗತ್ತನ್ನೆಲ್ಲ ವ್ಯಾಪಿಸಲು ಹವಣಿಸಿ ಕ್ರಿಯಾಯೋಜನೆ ರೂಪಿಸಿರುವುದು ಚರ್ಚ್. ಈ ದೃಷ್ಟಿಯಿಂದ ನೋಡಿದರೆ ಕ್ರೈಸ್ತ ಮತವನ್ನು ಜಗದ್ಗುರು ಅಲ್ಲದಿದ್ದರೂ ಜಗದ್ವ್ಯಾಪಿ ಎನ್ನಲು ಅಡ್ಡಿಯಿಲ್ಲ. ಯೇನಕೇನ ಪ್ರಕಾರೇಣ ತಮ್ಮ ಮತ ವಿಸ್ತರಣೆ ಆಗಬೇಕು. ಎಲ್ಲರೂ ಕ್ರೈಸ್ತರಾಗಬೇಕೆಂಬ ಬಯಸುವ ವಿಚಿತ್ರ ಸಿಂಡ್ರೋಮ್‌ನಿಂದ ಚರ್ಚ್ ಬಳಲುತ್ತಿದೆ. ಇದಕ್ಕೆ ಕಾರಣ ಕ್ರೈಸ್ತ ಮತವೇ ಎಲ್ಲಕ್ಕಿಂತ ಶ್ರೇಷ್ಠ ಎಂದು ತ್ರಿಕರಣಪೂರ್ವಕವಾಗಿ ಅವರು ನಂಬಿಕೊಂಡಿರುವುದು. ಈ ಅಭಿಪ್ರಾಯಕ್ಕೆ ಪೂರಕವಾಗಿ 1893ರಲ್ಲಿ ಅಮೆರಿಕದ ಶಿಕಾಗೊ ನಗರದಲ್ಲಿ ನಡೆದ ಪಾರ್ಲಿಮೆಂಟ್ ಆಫ್ ರಿಲಿಜಿನ್ಸ್‌ನ ಸಂದರ್ಭವನ್ನು ಗಮನಿಸಬೇಕು ಹಾಗೂ ಮೇರಿ ಲೂಯಿಸ್ ಬರ್ಕ್ ಅವರ ಸ್ವಾಮಿ ವಿವೇಕಾನಂದ ಇನ್ ದಿ ವೆಸ್ಟ್, ನ್ಯೂ ಡಿಸ್ಕವರೀಸ್ ಪುಸ್ತಕದಿಂದ ಈ ಮಾತನ್ನು ಉದ್ಧರಿಸಬಹುದು. Although the principles of universal toleration for which, ideally, the Parliament stood were earnestly and well expressed by some of the Christian delegates, the nation that a universal religion meant nothing other than a universal acceptance of Christianity not only insinuated itself into the proceeding, but was sounded forth in unabashed oratory. (p. 107, 3 rd Edn. 1983).

ಇದೇ ಅಮಲಿನಲ್ಲಿಯೇ ಅವರು ಶಿಕಾಗೊ ಪಾರ್ಲಿಮೆಂಟಿಗೆ ವಿಶ್ವದೆಲ್ಲೆಡೆಯಿಂದ ಬಂದಿದ್ದ ಎಲ್ಲ ಧರ್ಮೀಯರಿಗೂ ಎಗ್ಗಿಲ್ಲದೆ ಎಂಟು ದಿನ ಪಾಠ ಹೇಳಿದರು. ಉನ್ನತ ಪೀಠದಲ್ಲಿ ಕುಳಿತು ಅವರು ಮಾಡಿದ ಉಪದೇಶ ಭಾರತವೂ ಸೇರಿದಂತೆ ಚೀನಾ, ಜಪಾನ್, ಸಿಲೋನ್ ಮುಂತಾದ ಪೂರ್ವ ದೇಶಗಳಿಂದ ಬಂದಿದ್ದ ಧರ್ಮಪ್ರವರ್ತಕರನ್ನು ಎಷ್ಟು ಕೆರಳಿಸಿತೆಂದರೆ ಸ್ವಾಮಿ ವಿವೇಕಾನಂದರು ಕಡೆಯಲ್ಲಿ (ಒಂಭತ್ತನೇ ದಿನ) ಮಾತನಾಡಿದಾಗ ಅಷ್ಟೇ ಸ್ಪಷ್ಟವಾದ ಕಟುವಾದ ಮಾತುಗಳಲ್ಲಿ ಅವರನ್ನು ತರಾಟೆಗೆ ತೆಗೆದುಕೊಳ್ಳಬೇಕಾಯಿತು. We who have come from the east have sat here day after day and have been told in a patronizing way that we ought to accept Christianity because Christian nations are the most prosperous. We look about us and we see England the most prosperous Christian nation in the world, with her foot on the neck of 250,000,000 Asiatics. (P. 112, ಅದೇ ಪುಸ್ತಕ).

ಎಲ್ಲ ಏಷಿಯನ್ನರ ಪರವಾಗಿ ವಿವೇಕಾನಂದರು ಸುಮಾರು 15 ವರ್ಷಗಳ ಹಿಂದೆ

ಗುಡುಗಿದ್ದರು. ಇಂದಿನ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗೇನೂ ಇಲ್ಲ. ಕೊಲೆ, ಸುಲಿಗೆ, ನಾಶ ಏನೇ ಆಗಲಿ ಪರವಾಗಿಲ್ಲ. ತಮ್ಮ ಮತ ವಿಸ್ತರಣೆ ಮಾತ್ರ ಆಗಬೇಕು, ತಮ್ಮ ಸಾಮ್ರಾಜ್ಯ ಕಟ್ಟಬೇಕು. ಮಹಾಜನರೆಲ್ಲ ಕ್ರೈಸ್ತ ಮತಾವಲಂಬಿಗಳಾಗಬೇಕೆಂಬ ಈ ವಿಚಿತ್ರ ಮನೋಭಾವ ಕೆಲಸ ಮಾಡಿದ ವೈಖರಿಯನ್ನು ಭೈರಪ್ಪ ತಮ್ಮ ಲೇಖನದಲ್ಲಿ ಬಿಡಿಸಿಟ್ಟಿದ್ದಾರೆ. Witch hunting, Gas Chamber, Inquisitionಗಳು ಹಾಗೂ ಇತರೆ ಆಮಿಷಗಳು ಚರ್ಚ್ ಆರಿಸಿಕೊಂಡಿದ್ದ ದಾರಿಗಳು. ಹೀಗೆ ಇದ್ದದ್ದನ್ನು ಇದ್ದ ಹಾಗೆ ಹೇಳಿದರೆ ಎದ್ದು ಬಂದು ಎದೆಗೆ ಒದ್ದರು ಎಂಬಂತೆ ಬರೆದದ್ದೇ ತಪ್ಪು ಎಂದು ಅನೇಕರು ಎಗರಾಡಿದ್ದಾರೆ. ಹಿಂದೂ ಮುಖವಾಣಿ ಎಂದು ಹೀಗಳೆದಿದ್ದಾರೆ. ಇದು ಯಾವ ಕಾಮನ್‌ಸೆನ್ಸ್?

ಈಗ ಸಾಮಾನ್ಯರಿಗೆ ಕಾಣುವ ಕ್ರಿಶ್ಚಿಯಾನಿಟಿಯ ಮೂರ್ತರೂಪವೆಂದರೆ ಸಿಸ್ಟರ್‌ಗಳು, ಫಾದರ್‌ಗಳು, ನನ್‌ಗಳು. ಇವರೆಲ್ಲ ಶಿಕ್ಷಣ, ವೈದ್ಯಕೀಯ ಸೇವೆ ಅಂತ ದೀನಾನಾಥರ ಸೇವೆಯಲ್ಲಿ ತೊಡಗಿರುವವರು. ಕ್ರೈಸ್ತಮತದ ಈ ಮುಖವನ್ನು ಯಾರೂ ಅಲ್ಲಗಳೆಯುತ್ತಿಲ್ಲ. ಆದರೆ ಅದರ ಹಿಂದಿರುವ ನೆಲೆ-ಬೆಲೆಗಳನ್ನು ಮಾತ್ರ ಪ್ರಶ್ನಿಸುವಂತಾಗಿದೆ. ಪ್ರಶ್ನೆ ಮಾಡಬಾರದು ಎಂದು ಕೆಲವು ವಿತಂಡವಾದಿಗಳು ದಿಗ್ಬಂಧನ ಹಾಕುತ್ತಿರುವುದು ತುಂಬಾ ಹಾಸ್ಯಾಸ್ಪದವಾಗಿ ಕಾಣುತ್ತಿದೆ. ವ್ಯಾವಹಾರಿಕ ಸತ್ಯದ ಪರದೆ ಸರಿಸಿ ನೋಡಿದವರಿಗೆ ಮಾತ್ರ ಹಿನ್ನೆಲೆಯಲ್ಲಿರುವ ಪರಮಾರ್ಥ ಗೋಚರವಾಗುತ್ತದೆ. ಸೇವೆಯನ್ನು ಕೇವಲ ಕ್ರೈಸ್ತರು ಮಾತ್ರ ಗುತ್ತಿಗೆಗೆ ಪಡೆದಿದ್ದಾರೆ ಎಂದು ಅನೇಕರು ಭಾವಿಸಿದಂತಿದೆ. ಆದರೆ ಇಂದು ಅದು ಶುದ್ಧಾಂಗ ತಪ್ಪು ಎಂಬುದು ಸಾಬೀತಾಗಿದೆ. ಇದಕ್ಕೆ ಪೋಷಕವಾಗಿ ಒಂದು ಸಣ್ಣ ಉದಾಹರಣೆಯನ್ನು ನೀಡಬಹುದೇನೋ:

ಮುಂಬೈಯಿಂದ 80 ಮೈಲಿ ದೂರದ ದಟ್ಟ ಕಾನನದಲ್ಲಿ ಇರುವುದೇ ಆನಂದವನ. ಕಳೆದ ಎರಡು ತಿಂಗಳ ಹಿಂದೆ ಕಣ್ಮರೆಯಾದ ಬಾಬಾ ಆಮ್ಟೆ ಆನಂದವನದ ನಿರ್ಮಾಪಕರು. ಸೇವೆಯೇ ಮೂರ್ತಸ್ವರೂಪರಾಗಿದ್ದವರು ಆಮ್ಟೆ. ಕುಷ್ಠ ರೋಗಿಗಳನ್ನು ಮನೆಯ ಮಕ್ಕಳಂತೆ ಅಪ್ಪಿ ಅವರ ಆರೋಗ್ಯಕ್ಕಾಗಿ ಜೀವನವನ್ನೇ ಮುಡುಪಿಟ್ಟವರು. ಕಾಡಿನ ಅತಿ ಹಿಂದುಳಿದ ಜನರಿಗೆ ವಿದ್ಯೆ, ಆರೋಗ್ಯ, ಆಹಾರ ನೀಡಲು ಆರಂಭಿಸಿದ ಸೇವಾಭಾವವುಳ್ಳ ನಿಜವಾದ ಕಾರ್ಯಶಾಲೆ ಆನಂದವನ. ಆ ವನವಾಸಿಗಳು ನಾಗರಿಕ ರೀತಿ ನೀತಿಗಳಿಂದ ಎಷ್ಟು ಹಿಂದುಳಿದಿದ್ದರೆಂದರೆ ಮೊಲ, ಇಲಿ, ಜಿಂಕೆಗಳರಲಿ, ಹೆಬ್ಬಾವು, ಹುಲಿಗಳನ್ನೇ ಕೊಂದು ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಅನಾರೋಗ್ಯ, ಅಜ್ಞಾನ, ಹಸಿವುಗಳಿಂದ ಕಂಗೆಟ್ಟಿದ್ದ ಬಡಪಾಯಿಗಳವರು. ಕಾಡಿನ ಕಠೋರತೆಗೆ ಸಿಲುಕಿದ ಅವರ ದೇಹಗಳು ನಾನಾ ರೋಗಗಳಿಗೆ ತುತ್ತಾಗಿ ಅನೇಕರು ಎಲುಬಿನ ಗೂಡುಗಳಂತೆ ಕಾಣುತ್ತಿದ್ದರು. ನಿಜ ಹೇಳಬೇಕೆಂದರೆ ಪ್ರಾಣಿಗಳೊಡನೆ ಪ್ರಾಣಿಗಳಂತೆ ಬದುಕುತ್ತಿದ್ದ ಮಾನವ ರೂಪಿಗಳು. ಇಂತಹ ಜನರನ್ನು ಪ್ರಾಣಿಲೋಕದಿಂದ ಮೇಲೆತ್ತಲು ಸತತವಾಗಿ ಶ್ರಮಿಸಿದವರು ಬಾಬಾ

ಆಮ್ಟೆ. ಇಂದು ಬಾಬಾರ ಮಗ ಡಾ. ಪ್ರಕಾಶ್, ಮೊಮ್ಮಗ ಡಾ. ದಿಗಂತ್ ಅಲ್ಲೇ ವೈದ್ಯರಾಗಿ ವನವಾಸಿಗಳೊಡನೆಯೇ ಬದುಕು ಸವೆಸುತ್ತಿದ್ದಾರೆ. ಇವರ ಕುಟುಂಬ ವರ್ಗದವರು ಮಕ್ಕಳೊಡನೆ ಅಲ್ಲೇ ನೆಲೆಸಿದ್ದಾರೆ. ಪ್ರಕಾಶರ ಪತ್ನಿ ಶ್ರೀಮತಿ ಮಂದಾಕಿನಿಯೂ ಕೂಡ ವೈದ್ಯವೃತ್ತಿಯವರೇ. ವನವಾಸಿಗಳಿಗಾಗಿ ಶಾಲೆ ಕಟ್ಟಿದ್ದಾರೆ. ಚಿಕಿತ್ಸಾಲಯ ತೆರೆದಿದ್ದಾರೆ. ಅಷ್ಟೇ ಅಲ್ಲದೆ ಅಪರೂಪದ ಕಾಡು ಪ್ರಾಣಿಗಳನ್ನು ಉಳಿಸುವ ಸಲುವಾಗಿ ಅವರಿಗೆ ಕಾಯಿಪಲ್ಲೆ, ದವಸ-ಧಾನ್ಯ ಬೆಳೆಯುವ ಕೃಷಿ ಪದ್ಧತಿಯನ್ನು ಹೇಳಿಕೊಟ್ಟಿದ್ದಾರೆ. ಇದರ ಪರಿಣಾಮವಾಗಿ ಅಳಿದುಳಿದ ಕೆಲವು ಪಶು, ಪಕ್ಷಿ, ಹಾವು, ಹುಲಿಗಳಿಗೆ ತಮ್ಮ ಮನೆಯ ಪಕ್ಕದಲ್ಲೇ ಆಶ್ರಯ ಕಲ್ಪಿಸಿ ಸಾಕುತ್ತಿದ್ದಾರೆ. ಅಲ್ಲಿನ ಸಹಜೀವನ ನೋಡಿದರೆ ನಿಜವಾಗಿಯೂ ಪ್ರಾಚೀನ ಕಾಲದ ತಪೋವನಗಳು ಕಣ್ಣಮುಂದೆ ಸುಳಿಯುತ್ತವೆ. ಋಷ್ಯಾಶ್ರಮಗಳ ಪ್ರಶಾಂತ ಪರಿಸರ ಅಲ್ಲಿ ಗೋಚರವಾಗುತ್ತದೆ. ಸಹಜವಾದ ವೈರಭಾವಗಳು ಉಪಶಮನಗೊಂಡು ಹುಲಿಯೂ-ಜಿಂಕೆಯೂ ಹೊಂದಿಕೊಂಡು ಬಾಳುತ್ತಿವೆ. ಪ್ರಕಾಶರ ಮೊಮ್ಮಗ ಮೂರು ವರ್ಷದ ಮುದ್ದು ಮಗು ಹೆಬ್ಬಾವಿನ ಬಾಲ ಹಿಡಿದು ಆಡುತ್ತಾನೆ. ಪ್ರಕಾಶ ಆಮ್ಟೆಯವರು ಹೆಬ್ಬುಲಿಯ ಬಾಯಿಗೆ ಮುಂಗೈ ನೀಡಿ ಮುದ್ದಿನ ನಾಯಿ ಮರಿಯೊಡನೆ ಆಡುವಂತೆ ಅದರ ಹಲ್ಲುಗಳ ಚೂಪು ಎಷ್ಟಿರಬಹುದೆಂದು ಪರೀಕ್ಷಿಸುತ್ತಾರೆ. ಒಟ್ಟಿನಲ್ಲಿ ಎಲ್ಲರೂ ಕಾಡಿನ ಮಕ್ಕಳಂತೆ ಸಹಜವಾಗಿ ಸರಳವಾಗಿ ಬದುಕುತ್ತಿದ್ದಾರೆ. ಆನಂದವನದ ಶಾಲೆಗಳಲ್ಲೇ ಓದಿದ ಇಬ್ಬರು ವನವಾಸಿಗಳು ಈಗ ವೈದ್ಯರಾಗಿ ಆಮ್ಟೆ ಕುಟುಂಬದೊಡನೆ ಸ್ವಜನರ ಯೋಗಕ್ಷೇಮಕ್ಕಾಗಿ ಕೈ ಜೋಡಿಸಿದ್ದಾರೆ. ಮತ್ತಿಬ್ಬರು ಅಲ್ಲಿನ ವಿದ್ಯಾಶಾಲೆಗಳಲ್ಲಿ ಉಪಾಧ್ಯಾಯರಾಗಿದ್ದಾರೆ. ವನವಾಸಿಗಳ ಬದುಕು ಹಸನಾಗುತ್ತಿದೆ. ಮುಂಬಯಿ ಸರಕಾರದ ಹಾಗೂ ಸ್ವಿಟ್ಜರ್ಲೆಂಡಿನ ಧನಸಹಾಯ ಈ ವೈದ್ಯಕುಟುಂಬ ಮಾಡುವ ಸೇವಾ ಕಾರ್ಯಕ್ಕೆ ನೆರವಾಗುತ್ತಿದೆ.

ಸುಮಾರು 50 ವರ್ಷಗಳಿಂದ ವನವಾಸಿಗಳೊಡನೆ ಬದುಕು ಹಂಚಿಕೊಳ್ಳುತ್ತಿರುವ ಡಾ. ಪ್ರಕಾಶ್ ದಂಪತಿಗಳನ್ನು 'ಈ ಕಾಡಿನ ಜನರು ಯಾವ ಧರ್ಮಕ್ಕೆ ಸೇರಿದವರು, ಅವರ ಪೂಜಾ ಪದ್ಧತಿಗಳೇನು?' ಎಂದು ಕೇಳಿದರೆ ಗೊತ್ತಿಲ್ಲ, ನಾವು ಕೇಳೋಕೇ ಹೋಗಿಲ್ಲ, ಅವರು ಮರಗಳನ್ನೋ, ಕಲ್ಲುಗಳನ್ನೋ ಪೂಜಿಸುತ್ತಾರೆ ಎಂದು ತೋರುತ್ತದೆ. ನಾವು ಅದರ ಬಗ್ಗೆ ಹೆಚ್ಚು ತಿಳಿದುಕೊಳ್ಳುವ ಪ್ರಯತ್ನ ಮಾಡಿಲ್ಲ' ಎಂದರು ನಿರ್ಭಾವುಕರಾಗಿ. (ಸುತ್ತೂರಿನಲ್ಲಿ ಕಳೆದ ತಿಂಗಳು ಶಾಸಕರಿಗಾಗಿ ಏರ್ಪಡಿಸಿದ್ದ ಮೂರು ದಿನಗಳ ಶಿಬಿರದಲ್ಲಿ ಅವರ ಕಾರ್ಯಕಲಾಪಗಳ ಪ್ರತ್ಯಕ್ಷ ಪರಿಚಯ ನಮಗೆ ಚೆನ್ನಾಗಿ ಆಯಿತು). ಒಂದು ಕ್ಷಣ ಯೋಚಿಸಿ. ಇದೇ ಕ್ರೈಸ್ತರೇನಾದರೂ ಅಲ್ಲಿದ್ದಿದ್ದರೆ ವನವಾಸಿಗಳನ್ನು ತಮ್ಮಷ್ಟಕ್ಕೆ ತಾವಿರಲು ಬಿಡುತ್ತಿದ್ದರೇ? ಅವರ ಗುಡಿಸಲಿನಲ್ಲಿ ಕ್ರಿಸ್ತನ ಫೋಟೊ ತಗುಲಿಸಿ, ಅವರ ಕುತ್ತಿಗೆಗೆ ಶಿಲುಬೆ ನೇತು ಹಾಕಿ ನೀವೆಲ್ಲ ಕ್ರೈಸ್ತರು ಎಂದು ತಲೆ ಚಿಟ್ಟು ಹಿಡಿಯುವಷ್ಟು ಪಾಠ ಹೇಳುವುದಷ್ಟೇ ಅಲ್ಲ, 'ನೀವು ಹಿಂದೂಗಳಲ್ಲ' ಎಂಬುದನ್ನು ಒತ್ತಿ ಹೇಳಿ

ತಲೆಕೆಡಿಸುತ್ತಿದ್ದರು. ಒರಿಸ್ಸಾದ ಕಂದಮಾಲ್‌ನಲ್ಲಿ ಆಗಿರುವುದು, ಆಗುತ್ತಿರುವುದು ಇದೇ.

ಕ್ರೈಸ್ತರಲ್ಲದವರೂ ಕೂಡ ಶಿಕ್ಷಣ ಹಾಗೂ ಸಮಾಜ ಸೇವಾ ಕಾರ್ಯಗಳಲ್ಲಿ ತೊಡಗಿಕೊಂಡು ನಿರಂತರವಾಗಿ ಕೆಲಸ ಮಾಡುತ್ತಿದ್ದಾರೆ. ವ್ಯಕ್ತಿಗಳು, ಸಂಸ್ಥೆಗಳೂ ಸಮಾಜದ ಒಡಕನ್ನು ತಿದ್ದಲು, ಸುಧಾರಿಸಲು ಅನೇಕ ರೀತಿಯ ರಚನಾತ್ಮಕ ಕ್ರಿಯೆಗಳಲ್ಲಿ ತೊಡಗಿದ್ದಾರೆ. ಕೆಲವಾದರೂ ಹೆಸರುಗಳನ್ನು ಹೇಳಬಹುದೆಂದರೆ, ಮಹಾರಾಷ್ಟ್ರದ ಅಸಾಮಾನ್ಯ ಹೋರಾಟಗಾರ ಅಣ್ಣಾ ಹಜಾರೆ, ಡಾ. ಸುದರ್ಶನ್ ಅವರ ಗಿರಿಜನ ಕಲ್ಯಾಣ ಕೇಂದ್ರ, ವನವಾಸಿ ಕಲ್ಯಾಣಾಶ್ರಮ, ಶ್ರೀ ರಾಮಕೃಷ್ಣ ಮಠ, ವಿವೇಕಾನಂದ ಕೇಂದ್ರ, ಶ್ರೀ ಕ್ಷೇತ್ರ ಧರ್ಮಸ್ಥಳದ ನಾನಾ ಸೇವಾ ಸಂಸ್ಥೆಗಳು, ಸುತ್ತೂರಿನ ಸೇವಾ ಹಾಗೂ ಶಿಕ್ಷಣ ಸಂಸ್ಥೆಗಳು, ಆದಿಚುಂಚನಗಿರಿಯ ವಿದ್ಯಾಸಂಸ್ಥೆಗಳು, ಸಿದ್ದಗಂಗೆಯ ಸಿದ್ದಪುರುಷರ ಸಂಸ್ಥೆಗಳು, ಸಾಯಿಬಾಬಾರವರ ಸತ್ಯಸೇವಾ ಸಂಸ್ಥೆಗಳು, ವಿಶ್ವದಾದ್ಯಂತ ಮನೆಮಾತಾಗಿರುವ ವಾತ್ಸಲ್ಯಮಯಿಯಾದ ಮಾತಾ ಅಮೃತಾನಂದಮಯಿ ಅವರ ಸಂಸ್ಥೆಗಳು, ಆರ್ಟ್ ಆಫ್ ಲಿವಿಂಗ್ ಮುಂತಾದವು. ಇವರು ಬಡವರ, ಅತ್ಯಂತ ಸಾಮಾನ್ಯರ, ಮಧ್ಯಮವರ್ಗೀಯರ ಜೀವನಕ್ಕೆ ಭದ್ರವಾದ ಬುನಾದಿಯನ್ನು ಹಾಕುವುದರ ಜತೆಗೆ ಉಳ್ಳವರಿಗೆ ನೈತಿಕ ಹಾಗೂ ಧಾರ್ಮಿಕ ಬಲವನ್ನೂ ತುಂಬುತ್ತಿದ್ದಾರೆ. ಈ ಯಾವ ಸಂಸ್ಥೆಗಳೂ ತಮ್ಮ ಮತಗಳಿಗೆ ಸೇರಬೇಕೆಂದು ಬೇರೆಯವರಿಗೆ ಅಂದರೆ ಕ್ರಿಶ್ಚಿಯನ್ನರಿಗಾಗಲಿ, ಮುಸಲ್ಮಾನರಿಗಾಗಲಿ ಗಾಳ ಹಾಕುವುದಿಲ್ಲ. ತಮ್ಮ ಅನುಯಾಯಿಗಳಿಗೆ ಈ ದಿಸೆಯಲ್ಲಿ ಯಾವ ಪ್ರಚೋದನೆಯನ್ನೂ ನೀಡುವುದಿಲ್ಲ. ನಿಷ್ಕಳಂಕ ಸ್ವಧರ್ಮ ನಿಷ್ಠ ಸೇವೆ ಈ ಸಂಘ-ಸಂಸ್ಥೆಗಳಿಂದ ನಡೆಯುತ್ತಿದೆ ಎಂದರೆ ಯಾವ ಅತಿಶಯೋಕ್ತಿಯೂ ಅಲ್ಲ.

ಹಿಂದುಗಳಲ್ಲಿಯೂ ತಮ್ಮ ಇಡೀ ಜೀವನವನ್ನೇ ಸಮಾಜ ಸೇವೆಗಾಗಿ, ದೀನರ, ದುರ್ಬಲರ ಸೇವೆಗಾಗಿ ಮುಡುಪಿಟ್ಟ ಮಹಾತ್ಮರು ಅಸಂಖ್ಯರಿದ್ದಾರೆ. ನಮ್ಮ ಸಮಾಜಕ್ಕೆ ಶಾಪವಾಗಿರುವ ಎಷ್ಟೋ ದೋಷಗಳನ್ನು ನಿವಾರಿಸಲು ಟೊಂಕಕಟ್ಟಿ ನಿಂತಿರುವ ಸಾವಿರ ಸಾವಿರ ಸಜ್ಜನರಿದ್ದಾರೆ ಎಂಬುದನ್ನು ಗಾಂಧೀಜಿ ಎದೆ ತಟ್ಟಿ ಹೇಳಿದ್ದಾರೆ. ಜಾತಿ-ವಿಜಾತಿಗಳಿದ್ದರೂ ಸಮಾನತೆಯ ಮಂತ್ರದಿಂದ ಹಿಂದೂಗಳಲ್ಲಿನ ಭೇದಭಾವಗಳನ್ನಳಿಸಲು ತಮ್ಮ ಸರ್ವಸ್ವವನ್ನೂ ಧಾರೆಯೆರೆದವರಿದ್ದಾರೆ. ಗಾಂಧೀಜಿಯವರೇ ಒಮ್ಮೆ ಹೀಗೆ ಬರೆಯುತ್ತಾರೆ 'I am here to tell you that there are non-Brahmins, there are Brahmins, who are as fine specimens of humanity as you will find in any place on the earth. There are Brahmins today in India who are embodiments of self sacrifice, Godliness and humanity. There are Brahmins who are devoting themselves body and soul to the service of 'untouchables'.

ಹಿಂದೂಗಳಿಗಂತೂ ಕ್ರೈಸ್ತ ಮತದ ಮನಃಸ್ಥಿತಿಯೇ ಅರ್ಥವಾಗುವುದಿಲ್ಲ. ಏಕೆಂದರೆ

ಮೂರು ಹೊತ್ತು ಅಗ್ನಿಹೋತ್ರ ಮಾಡುವವನು ಒಮ್ಮೆಯೂ ಇವುಗಳ ಬಗ್ಗೆ ತಲೆ ಕೆಡಿಸಿಕೊಳ್ಳದವನು, ದೇವರು ದಿಂಡರು ಇಲ್ಲವೇ ಇಲ್ಲ ಎಂದು ಜೀವನ ಪರ್ಯಂತ ಸಾಧಿಸುವವನು, ಅಣುರೇಣು ತೃಣಕಾಷ್ಟಗಳಲ್ಲಿ ಭಗವಂತನನ್ನೇ ಕಾಣುವವನು, ಕರ್ಮವೇ ದೇವರೆನ್ನುವವನು, ಜ್ಞಾನವೇ ದೇವರೆನ್ನುವವನು ಇವರೆಲ್ಲರೂ ಹಿಂದೂಗಳೇ. ನಿತ್ಯವೂ ದೇವಾಲಯಕ್ಕೆ ಹೋಗಿ ನಿಯಮಾನುಸಾರ ಪೂಜೆ ಸಲ್ಲಿಸುವವನು, ಒಮ್ಮೆಯೂ ದೇವಸ್ಥಾನದ ಕಡೆ ತಲೆಹಾಕದವನೂ ಹಿಂದೂವೇ. ನಮ್ಮ ಮನೆಗಳಲ್ಲೂ ಯಾರೂ ಏನೂ ಹೇಳುವುದಿಲ್ಲ. ಹೇಳಿದರೂ ಕೇಳುವುದಿಲ್ಲ ಎನ್ನುವುದು ಬೇರೆ. ಆದರೆ ಪ್ರಗತಿಪರರೆನಿಸಿಕೊಂಡವರು-ಪ್ರಗತಿಪರರು ಎಂದರೆ ಹಿಂದೂ ಧರ್ಮವನ್ನು ಲೇವಡಿ ಮಾಡುವವರು, ಜಾತಿ-ವಿಜಾತಿಗಳಾಗಿ ಸಮಾಜವನ್ನು ಒಡೆದ ಧರ್ಮ ಎಂದು ಹೀಗಳೆಯಲು ಮತ್ತೆ ಅದೇ ಜಾತಿ-ಉಪಜಾತಿಗಳನ್ನು ಸಲಕರಣೆಗಳನ್ನಾಗಿ ಬಳಸಿಕೊಂಡು ಜನರ ಮೇಲೆ ಛೂ ಬಿಡುವವರು, ಭಾರತೀಯ ಸಾಹಿತ್ಯದ, ಧರ್ಮದ ಮೂಲಗ್ರಂಥಗಳನ್ನು ಓದದೆ ಯೂರೋಪಿಯನ್ನರು ಅಲ್ಲಿ-ಇಲ್ಲಿ ಉಲ್ಲೇಖ ಮಾಡಿದ ಅನುವಾದ ವಾಕ್ಯಗಳನ್ನು ನೋಡಿ ತಾವು ಎಲ್ಲವನ್ನೂ ಬಲ್ಲವರೆಂದೂ ಧರ್ಮದ ಒಳ-ಹೊರಗನ್ನು ಅರೆದು ಕುಡಿದಿದ್ದೇವೆಂದು ಪೋಸು ಕೊಡುವವರು, ಸಕಲ ಕಲ್ಯಾಣ ಗುಣಾನ್ವಿತರು. ಆದರೆ ಇಂಥವರು ಚರ್ಚಿಗೆ ಹೋಗುವವರ, ನಮಾಜು ಮಾಡುವವರ ಶ್ರದ್ಧೆಯನ್ನು ಮಾತ್ರ ಹಾಡಿ ಹೊಗಳುತ್ತಾರೆ. ಧರ್ಮ ಅನ್ನುವುದೇ ಇಲ್ಲ, ಇದ್ದರೂ ಎಲ್ಲಾ ಧರ್ಮಗಳೂ ಒಂದೇ. ಎಲ್ಲ ಮತಗಳೂ ಒಂದೇ ಎಂದು ತಿಪ್ಪೆ ಸಾರಿಸುವವರೂ ಕೂಡ ಮತಾಂತರ ಜನ್ಮಸಿದ್ಧ ಹಕ್ಕು ಎಂದು ಕೂಗುತ್ತಾರೆ. ಎಲ್ಲ ಒಂದೇ ಆದ ಮೇಲೆ ಮತಾಂತರ ಯಾಕೆ? ಎಂಬ ಸರಳ ಪ್ರಶ್ನೆಗೆ ಉತ್ತರ ಇವರಲ್ಲಿಲ್ಲ. ಇವರನ್ನು ಅಜ್ಞರು ಎನ್ನಬೇಕೋ? ಪ್ರಾಜ್ಞರು ಎನ್ನಬೇಕೋ? ಇಲ್ಲ ಎಡಬಿಡಂಗಿಗಳು ಎನ್ನಬೇಕೋ ತಿಳಿಯದಾಗಿದೆ. ಅಜ್ಞನಿಗೆ ಅಂದರೆ ಏನೂ ತಿಳಿಯದವನಿಗೆ ಸುಲಭವಾಗಿ ಹೇಳಬಹುದು. ಚೆನ್ನಾಗಿ ತಿಳಿದಿರುವವನಿಗೂ ಇನ್ನೊಂದು ವಿಚಾರವನ್ನು ಕುರಿತು ಸುಲಭವಾಗಿಯೇ ಮನದಟ್ಟು ಮಾಡಿಸಬಹುದು. ಆದರೆ ಸ್ವಲ್ಪಮಾತ್ರ ತಿಳಿದು, ಎಲ್ಲವನ್ನೂ ಅರಿತಿರುವೆವೆಂಬ ಭ್ರಮೆ ಹಿಡಿಸಿಕೊಂಡವರನ್ನು ಸ್ವತಃ ಬ್ರಹ್ಮನೂ ಸಮಾಧಾನಪಡಿಸಲಾರ ಎನ್ನುತ್ತದೆ ಒಂದು ಸಂಸ್ಕೃತ ಸುಭಾಷಿತ!

ತುಂಬ ಜನರಿಗೆ ಇತಿಹಾಸದ ಕಟುಸತ್ಯಗಳನ್ನು ಅರಗಿಸಿಕೊಳ್ಳಲಾಗಿಲ್ಲ ಎಂಬುದು ಅವರು ಮೈ ಪರಚಿಕೊಳ್ಳುವುದರಿಂದಲೇ ತಿಳಿಯುತ್ತದೆ. ವಾದಗಳಲ್ಲಿ ಗೆಲ್ಲಲಾಗದಿದ್ದರೆ ವಾದಿಗಳನ್ನೇ ಗುರಿಯಾಗಿಸಿಕೊಳ್ಳುವುದು ಸಾಮಾನ್ಯರ ಮಾರ್ಗ. ಕೆಲವರು ಆಧಾರಸಹಿತವಾಗಿ ಇತಿಹಾಸದ ಪುಟಗಳನ್ನು ತೋರಿದವರನ್ನೇ ಪ್ಯಾರನಾಯಿಡ್ ಎಂದರೆ ತಲೆ ಸರಿ ಇಲ್ಲದವರೆಂದು ಟೀಕಿಸಿ ತಾವು ದೊಡ್ಡವರೆಂದು ಭಾವಿಸಿದ್ದಾರೆ.

ಮತ್ತೆ ಕೆಲವರು ಹಿಂದೂ ಧರ್ಮದಲ್ಲೇನು ದೊಡ್ಡಸ್ಥಿಕೆ? ಅದರಲ್ಲಿ ಹುಳುಕಿರುವುದರಿಂದಲೇ ಕಂಡವರು ಬಂದು ಕೈ ಹಾಕುತ್ತಿದ್ದಾರೆ. ಅದಕ್ಕೆ ಏಕೆ ಇವರು ಇತಿಹಾಸವನ್ನೆಲ್ಲ

ತಿರುವಿ ಹಾಕಬೇಕು ಎಂದೆಲ್ಲ ಕಿರುಚಾಡುತ್ತಾರೆ. ಇನ್ನು ಕೆಲವರು ದಲಿತರನ್ನು ಮೇಲೆತ್ತಲು ಜಾತಿ ಪದ್ಧತಿಯನ್ನು ಕಿತ್ತು ಹಾಕಲಿ ಎಂದು ಸವಾಲೆಸೆದಿದ್ದಾರೆ. ಇನ್ನು ಕೆಲವರು ಬಲವಂತ ಮತಾಂತರವಾಗಿದ್ದರೆ ಪೊಲೀಸರಿಗೆ ಹಿಡಿದು ಕೊಡಲಿ ಎಂದು ಬಿಟ್ಟಿ ಸಲಹೆ ನೀಡಿದ್ದಾರೆ. ಮತಾಂತರವಾಗುವುದು ವ್ಯಕ್ತಿಗತ ಹಕ್ಕು. ಬಲವಂತದ ಮತಾಂತರ ಆದರೆ ಅದರ ವಿರುದ್ಧ ಪೊಲೀಸರಿಗೆ ದೂರು ಕೊಡಿ, ಕೇಸು ದಾಖಲಿಸಿ ಎಂದು ದೊಡ್ಡ ಪಂಡಿತರು, ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಅತ್ಯಂತ ಮುಗ್ಧವಾಗಿ Free advice ಕೊಡುವುದನ್ನು ನಾವು ಮಾಧ್ಯಮಗಳಲ್ಲಿ ನೋಡುತ್ತಿದ್ದೇವೆ, ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಆದರೆ 1960ರ ದಶಕದಲ್ಲಿ ಮಧ್ಯಪ್ರದೇಶದಲ್ಲಿ ಕ್ರೈಸ್ತ ಮಿಶನರಿಗಳು ವ್ಯಾಪಕವಾಗಿ ಮತಾಂತರ ನಡೆಸಿ ಗಲಭೆ, ದೊಂಬಿಗಳನ್ನು ಎಬ್ಬಿಸಿದವು. ಆಗ ಮಧ್ಯಪ್ರದೇಶದ ಕಾಂಗ್ರೆಸ್ ಸರಕಾರ ಮತಾಂತರದ ಹಿಂದಿನ ಕುಮ್ಮಕ್ಕು ಯಾವುದು? ಎಂಬ ಬಗ್ಗೆ ವರದಿ ಸಲ್ಲಿಸಲು ಆಯೋಗ ನೇಮಕ ಮಾಡಿತು. ಆಯೋಗವು ಮತಾಂತರ ನಿಷೇಧ ಕಾನೂನು ತರುವುದೇ ಸೂಕ್ತ ಎಂದು ಅಭಿಪ್ರಾಯಪಟ್ಟಿತು. ಆದರೆ ಈ ಅಭಿಪ್ರಾಯವನ್ನು ಕಾಯಿದೆಯಾಗಿ 1967ರಲ್ಲಿ ಒರಿಸ್ಸಾ ಸರಕಾರ ಜಾರಿಗೆ ತಂದಿತು. ಮತಾಂತರಕ್ಕೆ ಪ್ರಯತ್ನಿಸುವುದು ಅಪರಾಧ, ಇಂತಹ ಕೃತ್ಯದಲ್ಲಿ ಭಾಗಿಯಾದವರಿಗೆ ಎರಡು ವರ್ಷ ಕಠಿಣ ಸಜೆ ಎಂಬ ಕಾನೂನನ್ನು ಜಾರಿಗೆ ತಂದಿತು. 1968ರಲ್ಲಿ ಮಧ್ಯಪ್ರದೇಶದ ಕಾಂಗ್ರೆಸ್ ಸರಕಾರ ಇನ್ನೂ ಕಠಿಣವಾದ ಧರ್ಮಸ್ವಾತಂತ್ರ್ಯ ಅಧಿನಿಯಮವನ್ನು ಜಾರಿಗೆ ತಂದಿತು. ಇನ್ನೂ ಹೆಚ್ಚು ಶಿಕ್ಷೆಯನ್ನು ಘೋಷಿಸಿತು. ಇಂತಹ ಯಾವ ಕಾಯಿದೆಯೂ ಕರ್ನಾಟಕದಲ್ಲಿ ಇಲ್ಲ. ಮತಾಂತರವೋ ಬಲವಂತದ ಮತಾಂತರವೋ ಆದಾಗ ದೂರು ಕೊಟ್ಟರೂ ಕರ್ನಾಟಕದಲ್ಲಿ ಕೇಸು ದಾಖಲಿಸಿ ಕೊಳ್ಳಲು ಯಾವ ನಿಯಮವೂ ಇಲ್ಲ. ಯಾರಿಗೆ ದೂರು ಕೊಡಬೇಕು, ಯಾವ ಸೆಕ್ಷನ್ನಿನ ಪ್ರಕಾರ ಪೊಲೀಸರು ಕೇಸು ಕೈಗೆತ್ತಿಕೊಳ್ಳಬೇಕು? ದೊಡ್ಡವರ ದಡ್ಡತನದಿಂದ ಈ ವಿಚಾರ ಗಳು ಅವರ ಅರಿವಿನಿಂದ ಹೊರಗಾಗಿವೆಯೇ? ಒಟ್ಟಿನಲ್ಲಿ ಇತಿಹಾಸ, ಕಾನೂನು, ಸಾಮಾ ಜಿಕ ಬಿಕ್ಕಟ್ಟುಗಳು, ವೈಯಕ್ತಿಕ ತಳಮಳಗಳನ್ನು ಕುರಿತು ಗಂಭೀರವಾಗಿ ಯೋಚಿಸುವವರೇ ಇಲ್ಲವಾಗಿದ್ದಾರೆ. ಇನ್ನು ತಪ್ಪುಗಳನ್ನು ಸರಿಪಡಿಸಲು ಪ್ರಯತ್ನ ಪಡುವವರನ್ನು ಎಲ್ಲಿಂದ ತರೋಣ? ಮಾಜಿ ಮುಖ್ಯಮಂತ್ರಿಯೋರ್ವರು 'ನಾನು ಕ್ರೈಸ್ತ ಶಾಲೆಯಲ್ಲೇ ಓದಿದೆ. ನನ್ನನ್ನು ಯಾರೂ ಮತಾಂತರಗೊಳಿಸಲಿಲ್ಲ, ಮತಾಂತರವೇ ನಡೆಯುತ್ತಿಲ್ಲ' ಎಂದು ತಮ್ಮ ಅಪಾರ ಜ್ಞಾನವನ್ನು ಪ್ರದರ್ಶಿಸಿದ್ದಾರೆ. ಮತ್ತೊಬ್ಬ ಚಿಂತಕರು (ಚಿಂತಕರೆನ್ನುವ ಉಪಾಧಿ ಸ್ವಯಂ ಘೋಷಿತ ಅಥವಾ ಪತ್ರಕರ್ತರಿಂದ ಪ್ರದಾನವಾದ ಪತ್ರಿಕಾ ಪ್ರಶಸ್ತಿ) 'ನಾನು ಎಷ್ಟೋ ವರ್ಷ ಗೆಲಿಲಿಯೋ ನಾಟಕವನ್ನು ಕ್ರೈಸ್ತರ ಕಾಲೇಜಿನಲ್ಲಿಯೇ ಪಾಠ ಮಾಡಿದ್ದೇನೆ. ನನಗೆ ಕ್ರೈಸ್ತ ಸಂಸ್ಥೆಗಳಿಂದೇನೂ ತೊಂದರೆಯಾಗಿಲ್ಲ' ಎಂದು ಸಾರಿದ್ದಾರೆ. ವಿಶ್ವವಿದ್ಯಾಲಯ ನಿಗದಿಪಡಿಸಿದ ಪಠ್ಯವನ್ನು ಪಾಠ ಮಾಡಲು ಯಾರಪ್ಪನ ದೇನು ಅಡ್ಡಿ? ಹೊಳೆ ನೀರಿಗೆ ದೊಣ್ಣೆ ನಾಯಕನ ಅಪ್ಪಣೆಯೇ ಎಂಬುದನ್ನು ಮರೆತಿರುವಂತಿದೆ ಚಿಂತಕರು.

ಇತಿಹಾಸದಿಂದ ಯಾರೂ ಪಾಠ ಕಲಿಯುವುದಿಲ್ಲ. ಕಲಿಯುವ ಅಪೇಕ್ಷೆಯೂ ಇರುವುದಿಲ್ಲ. ವಾದವನ್ನು ಎದುರಿಸಲಾಗದೇ ಇದ್ದರೆ ವ್ಯಕ್ತಿಯನ್ನೇ ನಿಂದಿಸು ಎಂಬ ಮಾತಿನಂತೆ ಅನೇಕರು ಪ್ರತಿಕ್ರಿಯಿಸಿದ್ದಾರೆ. ಮತಾಂತರ ಮಾಡಿದವರು ಕೈಗೊಂಡ ಹೀನ, ಹಿಂಸಾತ್ಮಕ ತಂತ್ರ, ಕುತಂತ್ರಗಳು ಮತಾಂತರಗೊಳಿಸಲ್ಪಟ್ಟ ಜನಾಂಗದ ಮನಸ್ಸನ್ನು ವಿಕ್ಷಿಪ್ತಗೊಳಿಸಿದೆ. ತಲೆತಲಾಂತರದಿಂದ ನೋವು ಗುಪ್ತವಾಗಿ ರಕ್ತದಲ್ಲಿ ಹರಿದು ಬಂದಿದೆ. ಸತ್ಯ, ಗುಪ್ತವಾಗಿದ್ದ ಮಟ್ಟಿಗೆ ಸುಳ್ಳಾಗಲಾರದು. ಅದು ತನ್ನ ಇರವನ್ನು ಆಗಾಗ ನಾನಾ ರೀತಿಯಲ್ಲಿ ಪ್ರಕಟಪಡಿಸುತ್ತದೆ.

. ಭಾರತದಂತಹ ಪ್ರಬುದ್ಧ ಧರ್ಮವಿರುವ ದೇಶದಲ್ಲಿ ಆಫ್ರಿಕದಂಥ ಜಾಗಗಳಲ್ಲಿ ನಡೆದಂತೆ ಸುಲಭವಾಗಿ ಮತಾಂತರ ಮಾಡಲು ಸಾಧ್ಯವಿಲ್ಲ. ಎಲ್ಲ ಕಾಲದಲ್ಲೂ ಧರ್ಮದ ಆಳ ಅಗಲಗಳನ್ನು ಬಲ್ಲವರು, ಧಾರ್ಮಿಕವಾಗಿ ಬದುಕಿದವರು ಮತಾಂತರವನ್ನು ವಿರೋಧಿಸಿದ್ದಾರೆ. ಕ್ರಿಶ್ಚಿಯನ್ನರು ಎಲ್ಲರಿಗೂ ಗಾಳ ಹಾಕಿದವರೆ. ಗಾಂಧೀಜಿ, ಕುವೆಂಪು ಮುಂತಾದವರು ನಮಗೆ ಮಹಾನ್ ವ್ಯಕ್ತಿಗಳಾಗಿರಬಹುದು. ಆದರೆ ಮತಾಂತರಿಗಳಿಗಲ್ಲ. ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು! ಗಾಂಧೀಜಿ ತಮಾಷೆಯಾಗಿ ಹೀಗೆನ್ನುತ್ತಾರೆ - One missionary friend of mine in South Africa still writes to me and asks me, How is it with you? I have always told him that so far as I know it is all well with me'.

ಆದರೆ ಹಿಂದೂಧರ್ಮದ ಸಾರವನ್ನು ಸಜ್ಜನಿಕೆಯನ್ನು ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿದ್ದ ಕುಟುಂಬದಿಂದ ಬಂದವರಾಗಿದ್ದರು ಗಾಂಧೀಜಿ. ತಾಯಿಯ ವಾತ್ಸಲ್ಯದೊಡನೆ ಧರ್ಮದ ಅಂತಃಶಕ್ತಿಯನ್ನು ಹೀರಿಕೊಂಡಿದ್ದರು. ಈ ಕಾರಣದಿಂದ ಅವರು ಸುಲಭದಲ್ಲಿ ಬಲೆಗೆ ಬೀಳಲಿಲ್ಲ. ಅವರೇ ಹೇಳುವಂತೆ : 'today my position is that, though I admire much in Christianity, I am unable to identify myself with orthodox Christianity. I must tell you in all humility that Hinduism, as I know it entirely satisfies my soul, fills my whole being, and I find a solace in the *Bhagavadgita* and *Upanishads* that I miss even in the Sermon on the Mount.'

Christianity and Hinduism-Address delivered to the Christian Missionaries assembled in Calcutta on July 28, 1925 (C.F. Andrews, Mahatma Gandhi's Ideas, pp. 71-77) ಅಸಂಖ್ಯ ಹಿಂದೂಗಳ ಭಾವನೆಗಳಿಗೆ ಗಾಂಧೀಜಿಯವರು ಮಾತಾಗಿದ್ದಾರೆ ಎನ್ನಲಡ್ಡಿಯಿಲ್ಲ.

ಕೋಟಿ ಕೋಟಿ ಹಿಂದೂ ಮನೆಗಳಲ್ಲಿ ಸದಾಚಾರ ನಿರತರು ಇದೇ ರೀತಿ ಯೋಚಿಸುತ್ತಾರೆ. ತಮ್ಮನ್ನು ಬಲಿತೆಗೆದುಕೊಳ್ಳಲು ಬರುವ ಮಿಷನರಿಗಳಿಗೆ ಇದೇ ಮಾತುಗಳಲ್ಲಿ

ಪ್ರತ್ಯುತ್ತರ ನೀಡುತ್ತಾರೆ ಎಂಬುದು ಸತ್ಯವಾದ ಮಾತು. ಉದಾಹರಣೆಗಾಗಿ ನನ್ನದೇ ಅನುಭವವನ್ನು ಇಲ್ಲಿ ಉಲ್ಲೇಖಿಸಬಹುದು.

ನಮ್ಮ ಮನೆಯವರು ಎಚ್‌ಪಿಎಫ್ ಫ್ಯಾಕ್ಟರಿಯಲ್ಲಿ (ಊಟಿ) ಕೆಲಸ ಮಾಡುತ್ತಿದ್ದರು. ನಾನು ರಜಾ ದಿನಗಳಲ್ಲಿ ಊಟಿಗೆ ಹೋಗುತ್ತಿದ್ದೆ. ಒಮ್ಮೆ ಸುಮಾರು ಮಧ್ಯಾಹ್ನ 12ರ ಸಮಯ. ನಾನೊಬ್ಬಳೇ ಇದ್ದೆ. ಇವರು ಮಧ್ಯಾಹ್ನದ ಊಟಕ್ಕೆ ಬರುವುದು 1.30ಕ್ಕೆ. ಯಾರೋ ಬಾಗಿಲು ತಟ್ಟಿದರು. ತೆಗೆದು ನೋಡಿದರೆ ಒಬ್ಬಳು ಹೆಂಗಸು ಕಂಡಳು. ಅವಳ ಪಕ್ಕದಲ್ಲಿ ಅವಳಿಗಿಂತ ಚಿಕ್ಕವನಾದ ಯುವಕನೋರ್ವ ಇದ್ದ. ಇಬ್ಬರೂ ಊಟ ಕಂಡು ಎಷ್ಟು ದಿನವಾಯ್ತೋ ಎನ್ನುವಂತಹ ಜೋಲುಮೋರೆಗಳು. ಅತ್ಯಂತ ಅನಾಕರ್ಷಕ ವ್ಯಕ್ತಿಗಳು. ಕೈಯಲ್ಲಿ ಕೆಲವು ಪತ್ರಗಳು ಸಣ್ಣ ಪುಸ್ತಿಕೆಗಳು ಇದ್ದವು. ಪೋಸ್ಟ್‌ಮನ್ ಅಂತೂ ಅಲ್ಲ ಎಂಬುದು ಅವರು ನಿಂತಿದ್ದ ರೀತಿಯಲ್ಲೇ ತಿಳಿಯಿತು. ಈ ಸ್ವರೂಪಗಳು ಇಲ್ಲೇಕೆ ನಿಂತಿವೆ ಎಂದು ತಿಳಿಯದೆ, ಏನಾಗಬೇಕು ಎಂದೆ. ಕೋಲಿನಾಕೃತಿಯ ಕೃಶ ಹೆಣ್ಣು ದೇಹ ಮಾತಾಡಿತು 'ಕೊಂಚು ನಲ್ಲ ವಿಷಯಂ ಪೇಸಲಾಮಾ'. ನಾನು ಸ್ವಲ್ಪ ದಂಗಾಗಿ ನಿಂತೆ. ತಕ್ಷಣ ಹುಡುಗ ಕ್ರಿಸ್ತನ ಚಿತ್ರ ತೋರಿಸಿದ. ನನಗೆ ಎಲ್ಲ ಅರಿವಾಯಿತು. 'ಇದಕಿನ್ನು ನಲ್ಲ ವಿಷಯಂ ನಾನೇ ಸೊಲ್ಲುವೆ' ಎಂದೆ. ಮೆಲ್ಲನೆ ಆಕೆ ಜಾಗ ಖಾಲಿ ಮಾಡಿದಳು. ಇದು ಕ್ರಿಸ್ತನನ್ನು ಕೊಳ್ಳುವ ಗಿರಾಕಿಯಲ್ಲ ಎಂದರಿತು!

'ಯಾವ್ಯಾವ ರೀತಿಯಲ್ಲಿ ಇವರು ಬಲೆಗೆ ಕೆಡವಲು ನೋಡುತ್ತಾರೆ! ಎಷ್ಟು ಜನ ಇವರಿಂದ ತಪ್ಪಿಸಿಕೊಂಡಾರು? ಅಮಾಯಕರು ಅದೆಷ್ಟು ಸಲೀಸಾಗಿ ಇವರ ಬುಟ್ಟಿಗೆ ಬಿದ್ದು ಬಿಡುತ್ತಾರಲ್ಲ. ಇವರಿಗೇಕೆ ಎಲ್ಲರನ್ನೂ ಮತಾಂತರಿಸುವ ಗೀಳು' ಎಂದೆಲ್ಲ ನನ್ನ ಲಹರಿ ಹರಿಯಿತು. ಮತಾಂತರಕ್ಕೆ ಭಾರಿ ಭಾರಿ ಅಂತಾರಾಷ್ಟ್ರೀಯ ಮಟ್ಟದ ಯೋಜನೆಗಳೇ ಸಿದ್ಧವಾಗಿರುವಾಗ ಎಷ್ಟು ಜನ ಇವರಿಂದ ತಪ್ಪಿಸಿಕೊಂಡಾರು? ಗಾಂಧೀಜಿಯವರಂತೆ ಇನ್ನೂ ಕೋಟಿ ಕೋಟಿ ಜನ ತಮ್ಮ ಧರ್ಮದ ಬಗ್ಗೆ ಆಳವಾದ ತಿಳಿವಳಿಕೆಯನ್ನು ಅಸ್ಖಲಿತ ನಿಷ್ಠೆಯನ್ನೂ ಇಟ್ಟುಕೊಂಡಿದ್ದಾರೆ ಎಂಬುದು ಎಷ್ಟು ನಿಜವೋ, ಹಿಂದೂ ಧರ್ಮವೆಂದರೇನೆಂದು ಕೇಳುವ, ಅಮಾಯಕರೂ, ಅಜ್ಞಾನಿಗಳೂ ಆದ ನಮ್ಮ ಸಹೋದರ ಸಹೋದರಿಯರೂ ಕೋಟಿಗಟ್ಟಲೆ ಇದ್ದಾರೆ ಎಂಬುದೂ ಅಷ್ಟೇ ಸತ್ಯ. ಇದಕ್ಕೂ ನನ್ನ ಅನುಭವದ ದೃಷ್ಟಾಂತವನ್ನೇ ನೀಡಬಹುದು.

ಹತ್ತು ವರ್ಷದ ಹಿಂದಿನ ಮಾತು. ಮಾರ್ಚ್ ತಿಂಗಳ ಮಧ್ಯದ ದಿನಗಳು. ಮಧ್ಯಾಹ್ನದ ಬಿಸಿಲು ಏರುತ್ತಿತ್ತು. ಬೀದಿಯಲ್ಲಿ ಕಲ್ಲಂಗಡಿ ಹಣ್ಣಿನ ರಾಶಿ ಕಣ್ಣಿಗೆ ಬಿದ್ದೊಡನೆ ನನ್ನ ಕಾಲು ಅತ್ತಲೇ ಹೋಯಿತು. ಹಣ್ಣಿನ ವ್ಯಾಪಾರಕ್ಕಿಳಿದೆ. ನಾನು ಕೇಳಿದ ಬೆಲೆಗೆ ಹಣ್ಣು ಮಾರುತ್ತಿದ್ದಾಕೆ ಕೊಡಲೊಪ್ಪಲಿಲ್ಲ. ಆಕೆಯ ತಕ್ಕಡಿಯೂ ಸರಿಯಾಗಿಲ್ಲ ಎಂಬ ಅನುಮಾನ ನನಗೆ. 'ಬೆಲೆಯೂ ಜಾಸ್ತಿ ಹೇಳ್ತೀಯ, ತಕ್ಕಡೀನೂ ನೇರವಾಗಿಲ್ಲ ಯಾಕಮ್ಮಾ' ಎಂದೆ, ಜೋರು ದನಿಯಲ್ಲಿ. 'ಅಂಗೆಲ್ಲ ಮೋಸ ಮಾಡಿದ್ರೆ, ಯೇಸು

ಮೆಚ್ಚಾಕಿಲ್ಲಮ್ಮ' ಎಂದಳು ಆಕೆ. ನಾನು ಅವಾಕ್ಕಾದೆ. ಅವಳು ಕೆಂಬಣ್ಣದ ಸೀರೆ ಉಟ್ಟಿದ್ದಳು. ಲಕ್ಷಣವಾದ ಗೌರವರ್ಣದ ಮುಖದಲ್ಲಿ ದೊಡ್ಡ ಕುಂಕುಮ ರಾರಾಜಿಸುತ್ತಿತ್ತು. ಕುತ್ತಿಗೆಯ ಕರಿಮಣಿ, ಕಾಲುಂಗುರ ಎಲ್ಲ ಕುರುಹುಗಳು ಆಕೆ ಹಿಂದು ಹೆಂಗಸು ಎಂಬುದನ್ನು ಎತ್ತಿ ತೋರುತ್ತಿದ್ದವು. ಆದರೆ ಅವಳ ಮಾತು ಮಾತ್ರ ನನ್ನನ್ನು ಚಕಿತಗೊಳಿಸಿತು. 'ಅದೇನು ಯೇಸು ಮಾತ್ರ ಮೆಚ್ಚಾಕಿಲ್ಲ, ಶ್ರೀರಾಮ, ಶ್ರೀಕೃಷ್ಣ, ನಾರಾಯಣ ಎಲ್ಲ ಮೋಸ ಮಾಡಿದ್ರೆ ಮೆಚ್ತಾರಾ' ಎಂದೆ. ಅದಕ್ಕವಳು 'ಅಂಗಲ್ಲಮ್ಮ ನಾವು ಕಿರಿಸ್ತಾನರು, ಅದಕ್ಕೆ ಅಂಗಂದೆ' ಎಂದಳು. ನಾನು, 'ಎಲ್ಲ ನಮ್ಮಂಗೆ ಇದ್ದೀಯ ಕಿರಿಸ್ತಾನರು ಯಾವಾಗಾದೆ?' ಯಾವೂರು ನಿಂದು? ಯಾರಿದ್ದಾರೆ ನಿನ್ನ ಜತೆ?' ಎಂದಾಗ ಅವಳು ಹಲ್ಲು ಕಿರಿಯುತ್ತಾ, 'ಇಂಗೆ, ಒಂದೆಳ್ಡು ವರ್ಷ ಆತು. ನನ್ನ ಗಂಡ, ಮಕ್ಕೆಲ್ಲ ಇಂಗೆ ಆಗಿದ್ದೀವಿ, ನಾವು ಮಂಡ್ಯದ ಕಡೆ ಒಕ್ಕಲಿಗರು' ಎಂದಳು. ಸಾಮಾನ್ಯವಾಗಿ ನಮ್ಮೆದುರೇ ಸಮಸ್ಯೆ ಬಂದು ನಿಲ್ಲುವವರೆಗೂ ನಾವು ಅದರ ಬಗ್ಗೆ ಯೋಚಿಸಲು ಹೋಗುವುದಿಲ್ಲ. ಇನ್ನೊಬ್ಬರ ಅನುಭವದಿಂದ ನಾವು ಪಾಠ ಕಲಿಯುವುದು ಅಪರೂಪ! 'ಗ್ಲುಕೋಮ' ಅಂತ ಒಂದು ಕಣ್ಣಿನ ಕಾಯಿಲೆ ಇದೆ. ಅದು ಹೆಚ್ಚು ಕಸಿವಿಸಿ ಉಂಟು ಮಾಡುವುದಿಲ್ಲ. ನೋವು ನರಳಾಟಿಕೆಯೂ ಅಷ್ಟಾಗಿರುವುದಿಲ್ಲ. ಆದರೆ ಮೌನವಾಗಿ ಕಣ್ಣಿನ ಕೆಲಸವನ್ನೇ ಮುಗಿಸಿ ಬಿಡುತ್ತದೆ. ಸಮಯಕ್ಕೆ ಸರಿಯಾಗಿ ಔಷಧೋಪಚಾರ ಮಾಡಿಕೊಳ್ಳದಿದ್ದರೆ ನಮಗರಿವಿಲ್ಲದೆಯೇ ನೇತ್ರಜ್ಯೋತಿ ಆರಿರುತ್ತದೆ. ನಾವು ಕುರುಡರಾಗಿರುತ್ತೇವೆ. ಎಲ್ಲ ಕಡೆ ಕತ್ತಲು ಕವಿದಾಗ ಏನೂ ತೋಚದೆ ತಡಕಾಡುತ್ತೇವೆ. ವೈದ್ಯರು ಇದನ್ನು 'ಸೈಲೆಂಟ್ ಕಿಲ್ಲರ್' ಎನ್ನುತ್ತಾರೆ. ಕ್ರಿಶ್ಚಿಯನ್ ಮತಾಂತರವೂ ಹೀಗೆ. ಸದ್ದುಗದ್ದಲವಿಲ್ಲದೆ ಹಿಂದೂ ಧರ್ಮೀಯರನ್ನು ತನ್ನೆಡೆಗೆ ಸೆಳೆದುಕೊಂಡು ಹಿಂದೂ ಧರ್ಮವನ್ನು ನಾಶಗೊಳಿಸಲು ನೋಡುತ್ತದೆ. ಸೇವೆ, ಶಿಕ್ಷಣ ಇವೆಲ್ಲ ನೆಪಗಳಷ್ಟೆ.

ನಮ್ಮ ದೇಶದಲ್ಲಿ ಸಮಾಜದಲ್ಲಿ ನಡೆದುಹೋದ, ನಡೆಯುತ್ತಿರುವ ಹಿಂಸೆಗೆ ಭೈರಪ್ಪನವರ ಕಾರಣ ಎನ್ನುವಂತೆ ಚಲನಚಿತ್ರ ನಿರ್ದೇಶಕರೊಬ್ಬರು ಅಪಲಾಪ ಮಾಡಿದ್ದಾರೆ. ಹೇಲು ತಿನ್ನಿಸಿದವರನ್ನು ಕಠಿಣ ಶಿಕ್ಷೆಗೆ ಒಳಪಡಿಸದಿರಲು ಕಾರಣರು ಯಾರು? ದಲಿತರನ್ನು ಹತ್ಯೆಗೈದರೆ, ಅದರ ಹಿಂದಿರುವ ಕೊಲೆಗಡುಕರಾರು? ಎಂಬುದನ್ನು ಶೋಧಿಸಿ ಅವರಿಗೂ ಮರಣದಂಡನೆ ನೀಡಿ ತನ್ಮೂಲಕ ಇಂತಹ ನೀಚಕೃತ್ಯಗಳಿಗೆ ಕೈಹಾಕಿದವರಿಗೆ ಎಚ್ಚರಿಕೆ ನೀಡಬಾರದು ಎಂದು ಭೈರಪ್ಪ ಹೇಳಿದ್ದಾರಾ? ಮಾಧ್ಯಮಗಳಲ್ಲಿ ಕಂಡ ಕ್ರೈಸ್ತ ಸನ್ಯಾಸಿನಿಯ ಕತೆಗೆ ಕಣ್ಣೀರು ಮಿಡಿದ ನಿರ್ದೇಶಕರ ಹೃದಯವಂತಿಕೆಗೆ ಸಾವಿರ ನಮನಗಳು. ಆದರೆ 84 ವರ್ಷದ ವಯೋವೃದ್ಧ ಸಂತ ವನವಾಸಿಗಳಿಗೆ ಅನ್ನ, ಬಟ್ಟೆ, ವಿದ್ಯೆ ನೀಡುತ್ತಿದ್ದ ಸ್ವಾಮಿ ಲಕ್ಷ್ಮಣಾನಂದ ಸರಸ್ವತಿಯವರನ್ನು, ಅವರ ನಾಲ್ಕು ಜನ ಸಹವರ್ತಿಗಳೊಂದಿಗೆ ಮೈತುಂಬ ಗುಂಡು ಹಾರಿಸಿ, ಕಾಲು ಕಡಿದು, ಪವಿತ್ರ ಹಬ್ಬವಾದ ಗೋಕುಲಾಷ್ಟಮಿಯ ಹಿಂದಿನ ದಿನ ಕೊಲೆ ಮಾಡಿದರಲ್ಲಾ? ಮಾಡಿದವರು ಮಿಷನರಿಗಳು ಹಾಗೂ ಮಾವೋ

ಉಗ್ರವಾದಿಗಳು. ಸ್ವಾಮಿಗಳನ್ನು ರಕ್ಷಿಸಲು ಹೋದ 60 ವರ್ಷದ ಭಕ್ತಿಮಾತಾ ಎಂಬ ಆಶ್ರಮವಾಸಿಯನ್ನು ತಲೆಗೆ ಹೊಡೆದು ರಕ್ತದ ಮಡುವಿನಲ್ಲಿ ಬೀಳಿಸಿದರಲ್ಲಾ? ಇನ್ನೂ ಮೂವರನ್ನು ಅಲ್ಲೇ ನೀವು ಹುಟ್ಟಲಿಲ್ಲ ಅನ್ನಿಸಿಬಿಟ್ಟರಲ್ಲಾ? ಒಟ್ಟು ಐದು ಅತ್ಯಂತ ಬರ್ಬರವಾದ ಕೊಲೆಗಳು ನಡೆಯಿತಲ್ಲಾ? ಯಾವ ಪತ್ರಿಕೆ ಈ ಸುದ್ದಿಯನ್ನು ಸವಿವರವಾಗಿ ಪ್ರಕಟಿಸಿದೆ? ಯಾವ ಮಾಧ್ಯಮಗಳು ಈ ಘಟನೆಗಳನ್ನು ಬಿತ್ತರಿಸಿವೆ? ಈ ದೇಶದಲ್ಲಿ ಕೆಲಸ ಮಾಡುತ್ತಿರುವ ಮಾಧ್ಯಮಗಳ ನೀತಿ ಸಾಮಾನ್ಯರಿಗೆ ಅರ್ಥವಾಗುವಂತದಲ್ಲ!

ಇಷ್ಟು ಹೇಳಿದ ಮೇಲೆ ಕೊನೆಯ ಮಾತು. ಸತ್ಯ ಹೇಳಿದವರನ್ನು ಹಂಗಿಸಿ, ಹಿಯಾಳಿಸಿ ಹೊಸಕಿ ಹಾಕುವ ಪ್ರವೃತ್ತಿಯನ್ನು ನಾವೆಲ್ಲ ಕೈಬಿಡಬೇಕು. ಭಾರತದ ಸಹಸ್ರಾರು ವರ್ಷಗಳ ಸಾಮಾಜಿಕ ಇತಿಹಾಸದಲ್ಲಿ ತಪ್ಪುಗಳು, ಭ್ರಷ್ಟತನಗಳು, ಭಂಡತನಗಳು, ಹಿಂಸೆ, ಕ್ರೌರ್ಯಗಳು ಆಗಿಲ್ಲ ಎಂದು ಯಾರೂ ವಾದಿಸುತ್ತಿಲ್ಲ. ಆಗಿರುವುದು ತಪ್ಪು ಎಂಬುದೇ ಎಲ್ಲ ಸುಧಾರಕರೂ ಹೇಳುತ್ತಿರುವ ಮಾತು. ಹಿಂದೆ ತಪ್ಪಾಗಿದೆ ಎಂದು ಇಂದು ಒಂದಾಗಲೇಬಾರದೆಂಬ ಹಠ ಕೆಲವರಿಗೆ. ಬೆರಳಿಗೆ ಗಾಯ ಆಯಿತೆಂದು ಕೈಯನ್ನೇ ಕತ್ತರಿಸಿಕೊಳ್ಳುವ ಮೂರ್ಖತನ ಬೇಡ ಎಂದೇ ಎಲ್ಲ ಹಿಂದೂ ನಿಂದಕರಿಗೆ ತಿಳಿಯಬೇಕಾಗಿರುವ ಕಟು ಸತ್ಯ. ದೊಡ್ಡಬಳ್ಳಾಪುರದ ಗುಂಡಂಗೆರೆ ವೆಂಕಟಲಕ್ಷ್ಮಯ್ಯ ಅವರು ಹೇಳಿದ ಮಾತನ್ನು ಗಮನಿಸೋಣ: 'ಹಿಂದೂ ಧರ್ಮವೆಂಬ ಮರಕ್ಕೆ ಎಲೆಯುದುರಿಸುವವರು, ರೆಂಬೆ ಕಡಿಯುವವರು ಹಿಂದಿನಿಂದ ಇಂದಿನವರೆಗೂ ಬರುತ್ತಲೇ ಇದ್ದಾರೆ. ಆದರೆ ಆ ಮರ ಮಾತ್ರ ಸತ್ತಿಲ್ಲ. ಅದ್ದರಿಂದ ಕಲ್ಲೆಸೆಯುವವರನ್ನು ಓಡಿಸಲು ನೀವೂ ಕಲ್ಲೆಸೆಯುವ ಬದಲು ಅದೇ ಕಲ್ಲನ್ನು ಹೂವಾಗಿಸಿ ಆ ಉದುರಲಿಚ್ಛಿಸುತ್ತಿರುವ ಎಲೆಗಳ ಹೃದಯಗಳಿಗೆ ಬೀರಿ ಅವರಿಗೆ ನಿಮ್ಮೊಂದಿಗೆ ನಾವಿದ್ದೇವೆ ಎಂದು ಸಾಂತ್ವನ ಹೇಳಿ.'

ಇದನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸೋಣ.



# ದೇವರು-ನಂಬಿಕೆ: ಏನಿದು ಮತಾಂತರ-ಅವಾಂತರ?

- ಎ. ಶ್ರೀನಿವಾಸಮೂರ್ತಿ

---

ದೇವರೆಂಬುದೇನು ಕಗ್ಗತ್ತಲೆಯ ಗವಿಯೆ?
ನಾವರಿಯಲಾರದೆಲ್ಲದರೊಟ್ಟು ಹೆಸರೇ?
ಕಾವನೋರ್ವನಿರಲ್ಕೆ ಜಗದ ಕಥೆಯೇಕಿಂತು?
ಸಾವು ಹುಟ್ಟುಗಳೇನು?.... ಮಂಕುತಿಮ್ಮ

ಬದುಕಿಗಾರ್ ನಾಯಕರು, ಏನಕೋ ಅನೇಕರೋ?
ವಿಧಿಯ ಪೌರುಷವೋ ಧರುಮವೋ ಅಂಧಬಲವೋ?
ಕುದುರುವುದೆಂತು ಈ ವ್ಯವಸ್ಥೆಯ ಪಾಡು?

ನಮ್ಮ ನಡುವೆ ಆಸ್ತಿಕರೂ ಇದ್ದಾರೆ ನಾಸ್ತಿಕರೂ ಇದ್ದಾರೆ. ನಾವು ಇವರಿಬ್ಬರ ಮಧ್ಯೆ ಗೊಂದಲದಲ್ಲಿದ್ದೇವೆ. ಆಭಾಸ, ಅತಿರೇಕವಿಲ್ಲದಿದ್ದಲ್ಲಿ ಎರಡೂ ಸರಿ. ಎಲ್ಲೆ ಮೀರಿದರೆ ಎರಡೂ ತಪ್ಪು, ಆಘಾತಕಾರಿ.

ನಾನಂತೂ ಸಾಂಪ್ರದಾಯಿಕ ಕುಟುಂಬದಲ್ಲಿ ಜನಿಸಿ, ವಿಜ್ಞಾನದ ವಿದ್ಯಾರ್ಥಿಯಾಗಿ, ದೇವರನ್ನು ಇನ್ನೂ ಹುಡುಕುತ್ತಿದ್ದೇನೆ. ಈ ದೇವರ ಹೆಸರಿನಲ್ಲಿ ನಡೆಯುತ್ತಿರುವ ಬಡಿದಾಟ, ರಂಪ, ಗೊಂದಲ, ಗಲಭೆ, ಹಿಂಸೆ ಎಲ್ಲವೂ ಅನಗತ್ಯ ಅಸಹ್ಯವೆನಿಸುತ್ತವೆ.

ದೇವರನ್ನು ಕುರಿತು ಮೂರ್ತಿರಾಯರು ಬರೆದಿರುವ 'ದೇವರು' ಎಂಬ ಅತ್ಯಂತ ಸೊಗಸಾದ ಪುಸ್ತಕವನ್ನು ಕನ್ನಡನಾಡಿನ ಆಸ್ತಿಕ, ನಾಸ್ತಿಕರೆಲ್ಲರೂ ಓದಲೇಬೇಕು. ಅತ್ಯಂತ ವಿನಮ್ರರಾಗಿ, ಯಾರ ಮನಸ್ಸನ್ನೂ ನೋಯಿಸದೆ ರಾಯರು ದೇವರಿಲ್ಲವೆಂದು ಇಲ್ಲಿ ಪ್ರತಿಪಾದಿಸಿದ್ದಾರೆ. ಅಯ್ಯೋ, ಆ ದಯಾಮಯನಾದ ಸರ್ವಶಕ್ತನಾದ ದೇವರಿಲ್ಲವಲ್ಲ ಎಂದು ಮರುಗಿದ್ದಾರೆ. ನನಗೂ ಹಾಗೆಯೇ ಅನಿಸಿದೆ.

ಇತ್ತೀಚೆಗೆ 'God Delurioni' ಎಂಬ ಪುಸ್ತಕ ಓದಿದೆ. ಅದರ ಕರ್ತೃ ರಿಚರ್ಡ್

ಡಾಕಿನ್ಸ್ ಎಂಬ ಜೀವವಿಜ್ಞಾನಿ ಹಾಗೂ ನಾಸ್ತಿಕ. ಇದೊಂದು ಅತ್ಯಂತ ವಿಶಿಷ್ಟವಾದ ವಿವಾದಾತ್ಮಕ ವೈಜ್ಞಾನಿಕ ಪುಸ್ತಕ. ಇದು ದೇವರಿಲ್ಲವೆಂದು, ದೇವರ ಹೆಸರಿನಲ್ಲಿ ನಡೆದ, ನಡೆಯುತ್ತಿರುವ ಘೋರ ಅನ್ಯಾಯ, ಹಿಂಸೆ ಕ್ರೌರ್ಯವನ್ನು ಮನಕಲಕುವಂತೆ ವಿವರಿಸುವ ಪುಸ್ತಕ, ಸಂಪೂರ್ಣ ವೈಜ್ಞಾನಿಕ ಆಧಾರಸಹಿತ ಬರೆದ ಎಲ್ಲರೂ ಓದಲೇಬೇಕಾದ ಮತ್ತೊಂದು ಪುಸ್ತಕ. ಮುಂದಿನ ಘಟನೆಗಳನ್ನು ವಿವರಿಸಲು ಬೇಕಾದ ಪುಸ್ತಕ ಇದು. ಅದಕ್ಕೆ ಇದರ ಪ್ರಸ್ತಾಪ.

ಕೆಲ ದಿನಗಳ ಹಿಂದೆ ಮಂಗಳೂರಿನ ಕೆಲವು ಚರ್ಚ್ ಅರ್ಥಾತ್ ಪ್ರಾರ್ಥನಾ ಮಂದಿರಗಳ ಮೇಲೆ ಕಲ್ಲು ತೂರಾಟ ನಡೆದು ಒಳಗಿದ್ದ 'ನ್ಯೂಲೈಫ್' ಗುಂಪಿನ ಭಕ್ತರು ರೊಚ್ಚಿಗೆದ್ದು ತಿರುಗೇಟು ನೀಡಿದ್ದ ಘಟನೆಗಳನ್ನು ಮಾಧ್ಯಮಗಳು ಅದನ್ನು ಕ್ರಿಶ್ಚಿಯನ್ ಸಮುದಾಯದ ಮೇಲೆ ನಡೆದ ವ್ಯವಸ್ಥಿತ ದಾಳಿ ಎಂದು ಬಣ್ಣಿಸಿ ಪ್ರಚಾರ ಮಾಡಿದ್ದು ನಿಮಗೆಲ್ಲರಿಗೂ ತಿಳಿದ ವಿಷಯ. ರಾಜಕಾರಣಿಗಳಿಗಂತೂ ಈ ಘಟನೆಗಳ ಸುದ್ದಿ ಸುಗ್ಗಿಯಾಯಿತು. ಇದನ್ನು ಪದೇ ಪದೇ ಜ್ಞಾಪಿಸುತ್ತಾ, ಪ್ರತಿಭಟಿಸುತ್ತಾ, ಪ್ರಸ್ತಾಪಿಸುತ್ತಾ ದೃಶ್ಯ ಮಾಧ್ಯಮಗಳಲ್ಲಿ ನಟಿಸುತ್ತಾ ತಮ್ಮ ವೋಟ್‌ಬ್ಯಾಂಕ್ ಸಿದ್ಧಪಡಿಸಿಕೊಂಡದ್ದಂತೂ ಸತ್ಯ. ಇದಕ್ಕೆಲ್ಲಾ ಕಾರಣ ಭಜರಂಗದಳ ಎಂಬ ಬಾಂಬ್, ಬಂದೂಕು, ಲಾಂಗ್‌ಗಳಿಲ್ಲದ ಬರೇ ಕಲ್ಲೆಸೆಯುವ ಸಂಘಟನೆಯೊಂದು ಈ ಪ್ರಾರ್ಥನಾ ಮಂದಿರಗಳಲ್ಲಿ ಹಿಂದೂ ದೇವರನ್ನು ಅವಹೇಳನಕಾರಿಯಾಗಿ ಬಣ್ಣಿಸುವ ಸಾಹಿತ್ಯ ಹಂಚುತ್ತಾ ಬಡ, ಮುಗ್ಧ ಹಿಂದೂಗಳನ್ನು ಕ್ರೈಸ್ತಧರ್ಮಕ್ಕೆ ಮತಾಂತರ ಮಾಡುತ್ತಿ-ದ್ದಾರೆಂಬ ಆಪಾದನೆಗೆ ಪ್ರತಿಕ್ರಿಯಿಸಿದ್ದು.

ಇವೆಲ್ಲಾ ಮಾಧ್ಯಮಗಳಿಗೆ ಒಂದು ದೊಡ್ಡ ವಿಷಯವಾಯಿತು. ಅತ್ತ ಉಗ್ರವಾದಿಗಳ ದಿನನಿತ್ಯದ ರಕ್ತಪಾತ, ಮತಾಂಧರ ಅಟ್ಟಹಾಸ ಗೌಣವಾಯಿತು. ಇದೇ ಕ್ರಿಸ್ತ ಸಮುದಾಯದ ಮಾರಣಹೋಮ ಇಲ್ಲಿ ನಡೆಯುತ್ತಿದೆ ಎಂದು ನಮ್ಮ ಸೆಕ್ಯೂಲರ್ ರಾಜಕಾರಣಿಗಳು ಬೊಬ್ಬೆ ಹಾಕುತ್ತಾ ಸೋನಿಯಾಜಿಗೆ ಮನನೋಯಿಸಬಾರದೆಂದು ಪರಾಕು ಹೇಳುತ್ತಾ ಮಂಡಿಯೂರಿ ಬೀದಿಗಳಲ್ಲಿ ಬಾಯಿಬಡಿದುಕೊಂಡರು.

**ಏನಿದು, ಯಾಕೆ ಹೀಗೆ?**

ಅರೇಬಿಯಾ, ಇಸ್ರೇಲ್ ಸುತ್ತಮುತ್ತಲ ಮರುಭೂಮಿಯಲ್ಲಿ ಅಬ್ರಾಹಾಂ ಎಂಬ ದೇವಮಾನವ ಮೂರು ಮತಗಳ ಅರ್ಥಾತ್ ಯಹೂದಿ, ಕ್ರಿಶ್ಚಿಯನ್, ಇಸ್ಲಾಂ ಮತಕ್ಕೆ ಬುನಾದಿ ಹಾಕಿದ್ದ. ಎರಡು ಸಾವಿರ ವರ್ಷಗಳಷ್ಟು ಹಿಂದೆ ಜೀಸಸ್ ಎಂಬ ಯಹೂದಿ ಇಸ್ರೇಲ್‌ನ ಸುತ್ತಮುತ್ತ ಹಳೇ ಒಡಂಬಡಿಕೆಯ (Old Testament) ಸಿದ್ಧಾಂತಗಳಿಗೆ ವ್ಯತಿರಿಕ್ತವಾಗಿ ತನ್ನ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಾ ಒಂದು ಶಿಷ್ಯ ಸಮೂಹ ಸೃಷ್ಟಿಸಿದ. ಅವನ ಹಿಂಬಾಲಕರ ಸಂಖ್ಯೆ ದಿನೇ ದಿನೇ ವೃದ್ಧಿಯಾಗುತ್ತಿದ್ದಂತೆ, ಅವನ ಜನರೇ ರೊಚ್ಚಿಗೆದ್ದು ಆತನನ್ನು ಶಿಲುಬೆಗೇರಿಸಿದರು.

ಅಲ್ಲಿಗೆ ಈ ಪ್ರಸಂಗ ಮುಗಿಯಬೇಕಿತ್ತು. ಆದರೆ ಹಾಗಾಗಲಿಲ್ಲ. ಅವನ ಶಿಷ್ಯರು ತಿರುಗಿಬಿದ್ದರು. ದಂಗೆ ಎದ್ದರು. ಏಸುವಿನ ಅನಿಸಿಕೆಗಳನ್ನು ಬೆಳೆಸಿ ಅದಕ್ಕೆ ರೆಕ್ಕೆ ಪುಕ್ಕ ಕಟ್ಟಿ ನೂರಾರು ಕಥೆ, ಪವಾಡಗಳನ್ನು ಕಾಲಕ್ರಮೇಣ ಸೇರಿಸಿ ಹೆಣೆದು ತಳಕು ಹಾಕಿ ಕ್ರೈಸ್ತಧರ್ಮ ಸ್ಥಾಪಿಸಿದರು. ಶತಮಾನಗಳು ಉರುಳುತ್ತಿದ್ದಂತೆ ಈ ಕ್ರೈಸ್ತಧರ್ಮವೂ ಹರಡುತ್ತಾ ಯೂರೋಪಿನ ಕಡೆ ಪ್ರಸರಿಸಿತು. ನಂತರ ಈ ಧರ್ಮ ನಾನಾರೂಪ ಪಡೆದು ಮಧ್ಯ ಏಷಿಯಾದಲ್ಲಿ ನೆಲೆಯೂರಿತು. ಆಮೇಲೆ ಈ ಧರ್ಮವನ್ನು ಬಲವಾಗಿ ನಂಬಿ ರಾಜಾಶ್ರಯ ಪಡೆದು ಇದನ್ನು ಜನಸಮುದಾಯ ಒಪ್ಪಿಕೊಳ್ಳುವಂತೆ ಮಾಡುವ ಗುಂಪುಗಳ ಸೃಷ್ಟಿಯಾಯಿತು. ಬಲವಂತ, ಆಮಿಷ ಹಿಂಸೆಯನ್ನು ಅಸ್ತ್ರಗಳನ್ನಾಗಿ ಬಳಸಿ ಮೈಗೂಡಿಸಿ ಕೊಂಡು ಮತಾಂತರ ಆರಂಭಿಸಿರುವುದು ಚರಿತ್ರೆಯಲ್ಲಿದೆ. 500 ವರ್ಷದ ನಂತರ ಪ್ರವಾದಿ ಮೊಹಮ್ಮದ್‌ರು ಅರೇಬಿಯಾದಲ್ಲಿದ್ದ ನಾನಾ ಬುಡಕಟ್ಟಿನ ಗುಂಪುಗಳ ವಿಗ್ರಹಾರಾಧನೆ ವಿರೋಧಿಸಿ ಕತ್ತಿ ಝಳಪಿಸುತ್ತಾ ಇಸ್ಲಾಂ ಧರ್ಮ ಹುಟ್ಟುಹಾಕಿದರೆ, ನಂತರ ಅಲ್ಲಿಯೇ ಈ ಎರಡೂ ಧರ್ಮಗಳ ಮಧ್ಯೆ ಘೋರವಾದ ಸಂಘರ್ಷ ಆರಂಭವಾಯಿತು. ವಿಗ್ರಹ ಭಂಜಕರ ಕೈ ಬಲ ಮೇಲಾಯಿತು. ಕ್ರೈಸ್ತ ಧರ್ಮದಲ್ಲೇ ಅನಂತರ ಎರಡು ಪಂಗಡಗಳಾ ಯಿತು. ಇಸ್ಲಾಂನಲ್ಲೂ ಷಿಯಾ, ಸುನ್ನಿ ಎಂಬ ಎರಡು ಪಂಗಡಗಳಾಗಿ ಪರಸ್ಪರ ಬಡಿದಾಟ, ಯುದ್ಧದಿಂದ ಶತಮಾನಗಳು ಕಳೆದವು. ರೋಮನ್ ಕ್ಯಾಥೊಲಿಕ್, ಪ್ರಾಟೆಸ್ಟೆಂಟ್ ಎಂಬ ಪಂಗಡಗಳ ಮಧ್ಯೆ ಭಾರೀ ಸಂಘರ್ಷವಾಯಿತು. ಮಧ್ಯೆ ಏಷ್ಯಾ ಮತ್ತು ಯೂರೋಪ್‌ಗಳಲ್ಲಿ ರಕ್ತದ ಕೋಡಿ ಹರಿಯಿತು. 20 ಲಕ್ಷ ಜನ ಈ ಸಂಘರ್ಷದಲ್ಲಿ ಪ್ರಾಣ ಕಳೆದು ಕೊಂಡರೆಂದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ. ಇದನ್ನು ಬರ್ಟ್‌ರೆಂಡ್ ರಸೆಲ್ ಎಂಬ ತತ್ತ್ವಜ್ಞಾನಿ ಚಿಂತಕ, ವಿಜ್ಞಾನಿ ದೃಢೀಕರಿಸಿದ್ದಾನೆ.

ನಂತರ ಈ ಎರಡೂ ಧರ್ಮಗಳು ಅಫಘಾನಿಸ್ತಾನದ ಮೂಲಕ ಭಾರತ ಪ್ರವೇಶಿಸಿದ ನಂತರ ಅನಾಹುತಗಳು ಈಗಾಗಲೇ ಗೊತ್ತಾಗಿರುವ ರಕ್ತಸಿಕ್ತ ಇತಿಹಾಸ. ಇವೆಲ್ಲಾ ದೇವರ ಹೆಸರಿನಲ್ಲೇ ನಡೆದದ್ದು. ಈ ಕ್ರಿಶ್ಚಿಯನ್ ಧರ್ಮದ ಬಗ್ಗೆ ಪ್ರೊ. ರಿಚರ್ಡ್ ಡಾಕಿನ್ಸ್ ತಮ್ಮ ಪುಸ್ತಕದಲ್ಲಿ ವಿವರವಾಗಿ ಚರ್ಚಿಸಿ, ಮಾನವನ ಚರಿತ್ರೆಯಲ್ಲಿ ಧರ್ಮಗಳಿಂದ ಸಮಾಜಕ್ಕೆ ಎಷ್ಟು ಹಾನಿ ಮಾಡಿದೆ ಎಂಬುದನ್ನು ಪ್ರತಿಪಾದಿಸಿದ್ದಾರೆ.

**ಏನಿದು ಈ ನ್ಯೂ ಲೈಫ್ ಪಂಗಡ?**

ಇದು ಏಸುವಿನ ಹೆಸರಿನಲ್ಲಿ ಹುಟ್ಟಿರುವ ನೂರಾರು ಪಂಗಡಗಳಲ್ಲಿ ಒಂದು. ಇವರ ಪ್ರಕಾರ ನಮ್ಮ ದೇವರು ಅಪವಿತ್ರವಾದ ಅಯೋಗ್ಯರ ಸಮೂಹ. ನಿಜ, ಇಲ್ಲಿ ದೇವರ ಬಗ್ಗೆ ನೂರಾರು ಪುರಾಣಾಧಾರಿತ ಕಥೆಗಳಿವೆ. ಹೆಚ್ಚಿನವು ದೇವರನ್ನ ಮಾನವನಿಗಿಂತ ಕೀಳಾಗಿ ಚಿತ್ರಿಸಿವೆ. (ವಿವರಗಳಿಗೆ ಮೂರ್ತಿರಾಯರ ದೇವರು ಪುಸ್ತಕ ಓದಿ.)

ಆದರೆ ಇಂಥ ಅಸಂಬದ್ಧ ಕಥೆಗಳು, ಬುರುಡೆಗಳು, ಆಭಾಸಗಳು ಕ್ರಿಶ್ಚಿಯನ್

ಧರ್ಮದಲ್ಲೂ ಇವೆ ಎಂದು ಡಾಕಿನ್ಸ್ ಹೇಳುತ್ತಾರೆ. ಇವರು ಹೇಳುವಂತೆ ಕ್ರಿಸ್ತನೆಂಬ ವ್ಯಕ್ತಿಯೇ ಇರಲಿಲ್ಲ. ಇದ್ದನೆಂಬುದಕ್ಕೆ ದೃಢವಾದ ಸಾಕ್ಷ್ಯಾಧಾರಗಳಿಲ್ಲ. ಮ್ಯಾಥ್ಯೂ ಹಾಗೂ ಲ್ಯೂಕ್ ಎಂಬ ಕ್ರಿಸ್ತನ ಬಗ್ಗೆ ಹೇಳುತ್ತಿದ್ದ ಪ್ರಚಾರಕರ ತದ್ವಿರುದ್ಧ ಹೇಳಿಕೆಗಳೇ ಲಭ್ಯ ಪುರಾವೆಗಳು.

ಒಂದು ವೇಳೆ ಕ್ರಿಸ್ತ ಇದ್ದನೆಂದು ಒಪ್ಪಿಕೊಂಡರೂ, ಆತ ಒಬ್ಬ ತನ್ನದೇ ಆದ ಕೆಲವು ಅಭಿಪ್ರಾಯಗಳಿದ್ದ ಸರಳ ಮುಗ್ಧ ವ್ಯಕ್ತಿ. ಈತ ತಾನೆಂದೂ ಎಲ್ಲಿಯೂ ನಾನು ದೇವಮಾನವ ಭಗವಂತನ ಮಗ (Son of God) ಎಂದು ಹೇಳಿಕೊಂಡಿಲ್ಲ. ಇವೆಲ್ಲ ನಂತರದ ಮಿಥಕಗಳು, ಅವನ ಶಿಷ್ಯರು ಹುಟ್ಟುಹಾಕಿದ್ದು ಎನ್ನುತ್ತಾರೆ ರಿಚರ್ಡ್ ಡಾಕಿನ್ಸ್. ಜೀಸಸ್ ಕನ್ಯೆಯಾದ ಮೇರಿಯ ಗರ್ಭದಿಂದ ಜನಿಸಿದವ, ಆತ ಜನಿಸಿದಾಗ ರಾಜ ಮಹಾರಾಜರು ಆತನನ್ನು ಕೊಂಡಾಡಿದರು, ಸ್ವರ್ಗದಿಂದ, ಆಕಾಶದಿಂದ ಜಯಘೋಷ ಮಾಡಿದರು, ಶಿಲುಬೆಗೇರಿದ ನಂತರ ಜೀಸಸ್ ಮತ್ತೆ ಎದ್ದು ಬಂದು ಪವಾಡಗಳನ್ನು ಮಾಡಿದನೆಂದು ಹೇಳುವ ಕಥೆಗಳೆಲ್ಲಾ ಅಲ್ಲಿನ ಪೂರ್ವದೇಶಗಳಲ್ಲಿ ಪ್ರಚಲಿತವಿದ್ದ ಹಲ-ವಾರು ಧಾರ್ಮಿಕ ವಿಧಿವಿಧಾನಗಳು, ನಂಬಿಕೆಗಳಿಂದ ಪ್ರೇರಿತರಾಗಿ ಏಸುವಿನ ಶಿಷ್ಯರು ಸೃಷ್ಟಿಸಿದ ಕಥೆಗಳು ಎನ್ನುತ್ತಾರೆ ಡಾಕಿನ್ಸ್. ಡಾಕಿನ್ಸ್‌ರವರ ಪ್ರಕಾರ ಹಳೆಯ ಒಡಂಬಡಿಕೆ, ಒಂದು ಅನಾಗರಿಕ, ಅಮಾನುಷ (barbaric) ಸಿದ್ಧಾಂತಗಳ ಕಂತೆ.

ಬೈಬಲ್‌ನಲ್ಲಿರುವ ಹೆಚ್ಚಿನ ಅಂಶಗಳು ಸುಸಂಸ್ಕೃತ, ನಾಗರಿಕ ಸಮಾಜ ಒಪ್ಪುವ ವಿಷಯಗಳಲ್ಲ. ಏನೇ ಆದರೂ ಇಂಥಾ ವಿಷಯಗಳನ್ನು ಶಾಲೆಯ ಮಕ್ಕಳಿಗೆ ಬೋಧಿಸ ಬಾರದೆಂದು ಡಾಕಿನ್ಸ್ ಪ್ರತಿಪಾದಿಸುತ್ತಾರೆ. ಇಂತಹ ನೂರಾರು ಚಾರಿತ್ರಿಕ ಘಟನೆಗಳನ್ನು ಉದಾಹರಿಸುತ್ತಾ ಡಾಕಿನ್ಸ್ ತಮ್ಮ ಪುಸ್ತಕದಲ್ಲಿ ವಿವರಿಸಿ ಖಂಡಿಸಿ, ಟೀಕಿಸಿದ್ದಾರೆ. ಈ ಪುಸ್ತಕವನ್ನು ನಮ್ಮ ಮತಾಂತರಿಸುವ ಕ್ರಿಸ್ತ ಅನುಯಾಯಿಗಳು ಖಂಡಿತಾ ಓದಲೇಬೇಕು. ಈ ಪುಸ್ತಕ ಈಗಾಗಲೇ ಲಕ್ಷ ಲಕ್ಷ ಸಂಖ್ಯೆಯಲ್ಲಿ ವಿದೇಶಗಳಲ್ಲಿ ಮಾರಾಟವಾಗಿದೆ. ಇಲ್ಲೂ ಮಾರಾಟವಾಗುತ್ತಿದೆ. ಇದೇ ನಮ್ಮ ದೇಶದ ಹಿರಿಮೆ, ಗರಿಮೆ. ಬೇರಾವ ದೇಶ ದಲ್ಲೂ (ಅಮೆರಿಕ, ಬ್ರಿಟನ್ ಹೊರತುಪಡಿಸಿ) ಇಂಥಾ ವೈಚಾರಿಕತೆಯ ಸ್ವಾತಂತ್ರ್ಯವಿಲ್ಲ.

ಇಲ್ಲಿ ಹಿಂದೂಗಳು, ಇತರರೂ ಹಿಂದೂಧರ್ಮದ ವಿರುದ್ಧ ಮಾಧ್ಯಮಗಳಲ್ಲಿ, ಏನನ್ನಾದರೂ ಹೇಗೆ ಬೇಕಾದರೂ ಹೇಳ-ಬರೆಯಬಹುದು. ಮೂರನೇ ದರ್ಜೆ ಚಿತ್ರಗಳ ನಿರ್ದೇಶಕ ರೊಬ್ಬರು ಮತಾಂತರ ಹಿಂದೂಗಳಿಗೆ ಹೊಸದಲ್ಲ. 2500 ವರ್ಷಗಳ ಹಿಂದೆ ಬುದ್ಧ ಈ ಕೆಲಸ ಮಾಡಿದ್ದ ಎಂದು ಹೇಳಿಕೆ ಕೊಟ್ಟಿದ್ದು ಹಾಸ್ಯಾಸ್ಪದವಾದರೂ ವಿಷಾದಕರ. ಆಗಾಗ್ಗೆ ಅಥವಾ ಒಮ್ಮೊಮ್ಮೆ ಭಜರಂಗದಳದಂತಹ ಸಂಘಟನೆಗಳು ನಿದ್ರೆಯಿಂದ ಎದ್ದು ಕಲ್ಲು ಎಸೆಯುವ ಸಾಧ್ಯತೆಗಳಿವೆ. ಭಾರತದಲ್ಲಿ ರಾಷ್ಟ್ರ ವಿಭಜನೆಯ ಸಮಯದಲ್ಲಿ ಬಿಟ್ಟು ಧರ್ಮದ ಹೆಸರಿನಲ್ಲಿ ಸಂಘರ್ಷವಾಗಿಲ್ಲ. ಆದರೆ ಯೂರೋಪ್, ಮಧ್ಯ ಏಷಿಯಾದಲ್ಲಿ ಎರಡು ಧರ್ಮಗಳ ಮಧ್ಯೆ, ಒಳಪಂಗಡಗಳ ಮಧ್ಯೆ ವ್ಯಾಪಕ ರಕ್ತಪಾತ, ಹಿಂಸೆ ನಡೆದಿರುವುದು ಸತ್ಯ.

**ಏನಿದು ಈ ನ್ಯೂಲೈಫ್ ಸಂಸ್ಥೆ?**

ವಿದೇಶಗಳಲ್ಲಿ ಅದರಲ್ಲೂ ಶ್ರೀಮಂತ ಅಮೇರಿಕದಲ್ಲಿ ನೂರಾರು ಕ್ರಿಶ್ಚಿಯನ್ ಪಂಗಡಗಳಿವೆ. ಇವೆಲ್ಲವೂ ಕ್ರಿಸ್ತನ ಹೆಸರಿನಲ್ಲಿ ಹಲವಾರು ಪವಾಡದ ಕಥೆಗಳನ್ನು ಕಟ್ಟಿ ಕ್ರೈಸ್ತ ಧರ್ಮ ಪ್ರಚಾರ ಮಾಡುತ್ತಾ, ಭಾರತದಂತಹ ಬಡದೇಶಗಳಲ್ಲಿ ಮತಾಂತರಕ್ಕೆ ಕೈಹಾಕುತ್ತವೆ. ಈ ಗುಂಪುಗಳಿಗೆ ಹಣದ ಅಭಾವವಿಲ್ಲ. ಅವುಗಳಿಗೆ ಮತಾಂತರ ಮಾಡಲು ಭಾರತವೇ ಸೂಕ್ತ ಸ್ಥಳ. ಬೇರಾವುದೇ ದೇಶಗಳಲ್ಲಿ, ಆಫ್ರಿಕಾ ಚೀನಾದಲ್ಲಾಗಲೀ, ಮುಸ್ಲಿಂ ರಾಷ್ಟ್ರಗಳಲ್ಲಾಗಲೀ ಮತಾಂತರ ಸಾಧ್ಯವಿಲ್ಲ. ಬೆನ್ನಿಹಿನ್ ಎಂಬ ಜಾದೂಗಾರನನ್ನು ನೆನೆಸಿಕೊಳ್ಳಿ. God ಚಾನೆಲ್ ನೋಡಿ. ಇಂಥವರದ್ದೇ ಈ ನ್ಯೂ ಲೈಫ್ ಎಂಬ ಸಂಸ್ಥೆ. ನಮ್ಮ ಕನ್ನಡದ 'ಕಟ್ಟಾಳು' ಸಾಂಗ್ಲಿಯಾನ ಇದರ ಉತ್ತೇಜಕರು. ಈ ಸಂಸ್ಥೆ ಬಡಜನರಿಗೆ ಆಮಿಷಗಳನ್ನು ಒಡ್ಡುತ್ತಾ ಮತಾಂತರ ಮಾಡುತ್ತದೆ. ಅಮೇರಿಕವೂ ನಮ್ಮಂತೆಯೇ ಜಾತ್ಯತೀತ ಸಂವಿಧಾನವನ್ನು ಅಂಗೀಕರಿಸಿದೆ. ಹೀಗಿದ್ದರೂ ಅಲ್ಲಿ ದೇವರು, ಭೂತ, ಸೈತಾನ, ಮಾಟ, ಮಂತ್ರ, ತಂತ್ರ ಬಗ್ಗೆ ವ್ಯಾಪಕ ಮೂಢನಂಬಿಕೆಗಳಿವೆ. ಪ್ರತಿಶತ 23ರಷ್ಟು ಅಮೇರಿಕನ್ನರು ಇಂದೂ ಸೂರ್ಯ ಭೂಮಿಯ ಸುತ್ತ ಸುತ್ತುತ್ತಾನೆ ಎಂದು ನಂಬಿದ್ದಾರೆ. ಪ್ರತಿಶತ 50ರಷ್ಟು ಅಮೇರಿಕನ್ನರು ಜೀಸಸ್ ಮತ್ತೆ ಬರುತ್ತಾನೆ ಎಂದು ಬಲವಾಗಿ ನಂಬಿದ್ದಾರೆ (second coming). ಅದರ ಫಲವೇ ಈ ಎಲ್ಲಾ ಉಪಶಾಖೆಗಳ ವಿಶ್ವ ಪರ್ಯಟನೆ ಉದ್ದೇಶ ಒಂದೇ. ಎಲ್ಲರನ್ನೂ ಕ್ರಿಶ್ಚಿಯನ್ನರಾಗಿ ಮಾಡುವುದು. ಅದೂ ಭಾರತದಲ್ಲಿ ಇದು ಸುಲಭವೆಂದು ಅವರ ನಂಬಿಕೆ. ಅದಕ್ಕೇ ಸಾಂಗ್ಲಿಯಾನ ಅಂತಹವರು ಕೂಡಲೇ ಅಮೇರಿಕದ ರಾಯಭಾರಿಯನ್ನು ಸಂಪರ್ಕಿಸುವುದು.

**ಪಾಕಿಸ್ತಾನದಲ್ಲಿ ಏಕಿಲ್ಲ?**

ಇಸ್ಲಾಂ ಧರ್ಮ ಸಿದ್ಧಾಂತವನ್ನು ಕಾನೂನಾಗಿ ಅಂಗೀಕರಿಸಿರುವ ಪಾಕಿಸ್ತಾನದಲ್ಲಿ ಮತಾಂತರ ಅಪಾಯಕಾರಿ. ಮತಾಂತರಿಗೂ ಮತಾಂತರ ಆದವನಿಗೂ ಅಲ್ಲಿ ಧರ್ಮ ನಿಂದನೆಯ (Blasphemy) ಆರೋಪದಡಿಯಲ್ಲಿ ಮರಣದಂಡನೆ ವಿಧಿಸಲಾಗುತ್ತದೆ. ಈ Blasphemy Law ಎಂಬುದು ಎಲ್ಲಾ ಮುಸ್ಲಿಂ ರಾಷ್ಟ್ರಗಳಲ್ಲಿ ಇಂದೂ ಜಾರಿಯಲ್ಲಿದೆ. ಇಂಗ್ಲೆಂಡ್‌ನಲ್ಲಿ ಇಂದೂ ಕಾನೂನಿನ ಪುಸ್ತಕದಲ್ಲಿ ಈ ಪ್ರಸ್ತಾಪವಿದೆ. ಕ್ರಿಸ್ತನನ್ನು ಒಬ್ಬ ವಿದೂಷಕನೆಂದು ಹೇಳಿದ ವ್ಯಕ್ತಿಗೆ ಅಲ್ಲಿ ಘೋರ ಶಿಕ್ಷೆ ವಿಧಿಸಲಾಗಿದೆ.

ಪ್ರಜಾಪ್ರಭುತ್ವದ ತಾಯ್ನಾಡು ಎಂದು ಹೆಸರಾದ ಇಂಗ್ಲೆಂಡ್‌ನಲ್ಲಿ ಇಂದೂ ರೋಮನ್ ಕ್ಯಾಥೊಲಿಕ್, ಪ್ರಾಟೆಸ್ಟೆಂಟ್‌ರ ನಡುವೆ ಹಿಂಸಾತ್ಮಕ ಕಲಹಗಳು ಪದೇ ಪದೇ ತಲೆ ಎತ್ತುತ್ತಿವೆ.

ಭಾರತದಲ್ಲಿ 'ಬುದ್ಧಿ'ಜೀವಿಗಳು ದೃಶ್ಯ ಮಾಧ್ಯಮಗಳಲ್ಲಿ ಖಂಡತುಂಡವಾಗಿ ಹಿಂದೂಗಳನ್ನು ಹಳಿಯುತ್ತಾ ಪ್ರಚಾರ ಗಿಟ್ಟಿಸಿಕೊಳ್ಳುತ್ತಾರೆ. ಆದರೆ ಹೊರ ಜಗತ್ತಿನಲ್ಲಿ

ಏನು ನಡೆಯುತ್ತಿದೆ ಎಂಬ ಬಗ್ಗೆ ಅವರು ಮೌನವಾಗಿರುತ್ತಾರೆ. ಇಲ್ಲಿ ಹಿಂದೂಗಳು ಇವರ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳುವುದಿಲ್ಲ. ಇದು ಅವರ ಅದೃಷ್ಟ. ಹಿಂದೂಗಳ ಶತಮಾನಗಳ ಸಹನೆ, ಧರ್ಮದ ಬಗ್ಗೆ ಮತಾಂಧತೆಯನ್ನು ಸೇರಿಸಿ ಆಚರಿಸುವ ಪರಿಪಾಠ ಇರಲಿಲ್ಲ. ಈಗಷ್ಟೇ ಇದು ಪ್ರತಿಕ್ರಿಯೆಯಂತೆ ಆರಂಭವಾಗಿರುವುದು. ಆದರೆ ಯಾವುದೇ ಮುಸ್ಲಿಂ ರಾಷ್ಟ್ರದಲ್ಲಿ ಪ್ರವಾದಿ ಮೊಹಮದ್‌ರ ಬಗ್ಗೆ, ಕುರಾನ್ ಬಗ್ಗೆ ರಚನಾತ್ಮಕ ಟೀಕೆಗಳಿಗೂ ಸುತರಾಂ ಅವಕಾಶವಿಲ್ಲ. ಹಾಗೆ ಮಾಡಿ ಬದುಕುಳಿಯಲು ಸಾಧ್ಯವಿಲ್ಲ. ಸಲ್ಮಾನ್ ರಷ್ದಿ, ತಸ್ಲೀಮಾ ನಸ್ರೀನ್ ದುರ್ಗತಿ ನಿಮಗೆ ಜ್ಞಾಪಕವಿರಬಹುದು. ಇವೆಲ್ಲ-ವನ್ನೂ ದೇವರ ಹೆಸರಿನಲ್ಲಿ ದೇವದೂತರ ಹೆಸರಿನಲ್ಲಿ ಸಮರ್ಥಿಸಿಕೊಳ್ಳುತ್ತಾರೆ. ದೇವರು ನನಗೆ ಹೀಗೆ ಹೇಳಿದ್ದಾನೆ. ಹಾಗೆ ಆಜ್ಞೆ ಮಾಡಿದ್ದಾನೆ ಎಂದು ಧರ್ಮಗಳ ಅನುಯಾಯಿಗಳು ಹೇಳುತ್ತಾರೆ. ಇದು ಎಲ್ಲಾ ದೇಶದ ಧರ್ಮಗಳಲ್ಲಿದೆ. ನಮ್ಮಲ್ಲಿಯೂ ಈ ಪ್ರವೃತ್ತಿ ಗುರುತಿಸಬಹುದು. ವಿಜ್ಞಾನ ಯುಗದಲ್ಲಿ ಇದನ್ನು ಒಪ್ಪುವುದು ಕಷ್ಟ.

ಪಾಕಿಸ್ತಾನದಲ್ಲಿ 2001ರಲ್ಲಿ ಒಬ್ಬ ಮುಸ್ಲಿಂ ವೈದ್ಯ ಮೆಡಿಕಲ್ ಕಾಲೇಜಿನಲ್ಲಿ ಪಾಠ ಮಾಡುವಾಗ ಪ್ರವಾದಿ ಮೊಹಮ್ಮದ್‌ರು ಇಸ್ಲಾಂ ಧರ್ಮವನ್ನು ಸ್ಥಾಪಿಸುವ ಮುಂಚೆ ಅವರು ಮುಸ್ಲಿಂರಾಗಿರಲಿಲ್ಲ ಎಂಬ ಅಭಿಪ್ರಾಯ ತಿಳಿಸಿದರು. ಇದನ್ನು ಸರಕಾರ ಧರ್ಮನಿಂದನೆ ಎಂದು ಪರಿಗಣಿಸಿ ಅಲ್ಲಿನ ಕಾನೂನಿನಂತೆ ಆ ವೈದ್ಯನಿಗೆ ಮರಣದಂಡನೆ ವಿಧಿಸಿತು. ಪಾಕಿಸ್ತಾನದಲ್ಲಿ ಧರ್ಮನಿಂದನೆ ಕಾನೂನನ್ನು ಕ್ರಿಶ್ಚಿಯನ್‌ರ ವಿರುದ್ಧವೆ ಮಾಡಲಾಗಿದೆ ಎಂದೆನಿಸುತ್ತದೆ. ಕೆಲ ವರ್ಷಗಳ ಹಿಂದೆ ಕ್ರಿಶ್ಚಿಯನ್ ಯುವಕನೊಬ್ಬ ಮುಸ್ಲಿಂ ಮಹಿಳೆಯನ್ನು ಮದುವೆಯಾಗಲಿಚ್ಛಿಸಿದ. ಅಲ್ಲಿನ ಕಾನೂನು ಅಡ್ಡಿ ಬಂತು. ಮೊಹಮ್ಮದ್‌ರ ಬಗ್ಗೆ ಈತ ಕೇವಲವಾಗಿ ಮಾತನಾಡಿದ್ದಾನೆಂದು ಈತನಿಗೆ ಮರಣದಂಡನೆ ವಿಧಿಸಲಾಯಿತು.

ಇದು ಅಮೆರಿಕದ ಆಪ್ತಮಿತ್ರನಾದ ದೇಶದ ಕಾನೂನು, ನ್ಯೂಲೈಫ್ ಸಂಸ್ಥೆ ಇಲ್ಲಿ ಕಾಲಿಡಲು ಸಾಧ್ಯವೇ? ಅಮೆರಿಕದ ಬೆಂಬಲವಿರುವ, ತಾಲಿಬಾನ್ ಮತಾಂಧತೆಯನ್ನು ನಿಯಂತ್ರಿಸಿರುವ ಈಗಿನ ಅಫ್ಘಾನಿಸ್ತಾನದಲ್ಲಿ ಪರಿಸ್ಥಿತಿ ಬೇರೆ ಇಲ್ಲ. ಮಹಮದೀಯ ನೊಬ್ಬ ಅಲ್ಲಿ ಸ್ವಇಚ್ಛೆಯಿಂದ (Apostasy ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡ. ಧರ್ಮನಿಂದನೆ ಕಾನೂನಿನಡಿ ಆತನನ್ನು ಗಲ್ಲಿಗೇರಿಸಲಾಯಿತು. ಆದರೆ ವಿಶ್ವದ ಒತ್ತಡ ದಿಂದ ಆತ ಒಬ್ಬ ಮಾನಸಿಕರೋಗಿ ಎಂದು ಪರಿಗಣಿಸಿ ಶಿಕ್ಷೆಯನ್ನು ಕಡಿಮೆಗೊಳಿಸಲಾ ಯಿತು. ಮನಃಪರಿವರ್ತನೆ ಎಂಬ ಅಥವಾ ಬೇರೆ ಯಾವುದೇ ಕಾರಣಕ್ಕೆ ಇಸ್ಲಾಂ ಧರ್ಮ ಮತಾಂತರಕ್ಕೆ ಅವಕಾಶ ಕೊಡುವುದಿಲ್ಲ. ಚರ್ಚ್ ನಿಯಂತ್ರಿತ ಇಂಗ್ಲೆಂಡ್‌ನಲ್ಲಿ ನಾಸ್ತಿಕರು ಅಧಿಕ ಸಂಖ್ಯೆಯಲ್ಲಿದ್ದಾರೆ. ರಾಯಲ್ ಸೊಸೈಟಿಯಲ್ಲಿ 2/3 ಭಾಗ ಸದಸ್ಯರು ಸಹ ಅಲ್ಲಿ ನಾಸ್ತಿಕರು. ಆದರೆ ಜಾತ್ಯತೀತ ಸಂವಿಧಾನ ಅಂಗೀಕರಿಸಿರುವ ಅಮೆರಿಕದಲ್ಲಿ ಮತಾಂಧರೇ ಇನ್ನೂ ಮುಂಚೂಣಿಯಲ್ಲಿದ್ದಾರೆ. ಇರಾಕ್ ಮೇಲೆ ದಾಳಿ ಮಾಡಲು ದೇವರು ನನಗೆ

ಆಚ್ಚೆ ಮಾಡಿದ್ದಾನೆ ಎಂದು ಅಧ್ಯಕ್ಷ ಬುಷ್ ಹೇಳಿಲ್ಲವೆ. ಇದೊಂದು ವಿಪರ್ಯಾಸ ಎಂದು ಡಾಕಿನ್ಸ್ ಹೇಳುತ್ತಾರೆ.

**ದೇವರಲ್ಲಿ ನಂಬಿಕೆ ಮತ್ತು ಡಾಕಿನ್ಸ್:**

ಒಬ್ಬ ವ್ಯಕ್ತಿ ಮತಿಭ್ರಮಣೆಯಿಂದ ನರಳುತ್ತಿದ್ದರೆ ಆಧುನಿಕ ಮನಃಶಾಸ್ತ್ರದ ಪ್ರಕಾರ ಆತ ಮಾನಸಿಕ ಸಮಸ್ಯೆಯ ವ್ಯಕ್ತಿ ಎಂದು ಪರಿಗಣಿಸಿ ಚಿಕಿತ್ಸೆಗೆ ಒಳಪಡಿಸುತ್ತೇವೆ. ಆದರೆ ಒಂದು ಗುಂಪು ಯಾ ಒಂದು ಸಮುದಾಯ ಇಂಥ ಭ್ರಮೆಗೆ ಒಳಗಾಗಿದ್ದರೆ ಅದು ಧರ್ಮಾಚರಣೆ ಎಂದಾಗುತ್ತದೆ (Religion). ಹಾಗಾದರೆ ಈ ನಂಬಿಕೆ ಒಂದು ನೈಜ ಮಾನಸಿಕ ಸಮಸ್ಯೆಯೇ? ಹೌದು ಅತೀರೇಕಕ್ಕೆ ಹೋದಾಗ ಎನ್ನುತ್ತಾರೆ ಈ ನಾಸ್ತಿಕ ಜೀವವಿಜ್ಞಾನಿ. ಅದಕ್ಕೆ ಆಧಾರಸಹಿತ ವಿವರಣೆಯನ್ನೂ ನೀಡಿದ್ದಾರೆ.

ಎರಡೂ ಕಪಾಳದ ಮೇಲಿನ ಒಳಭಾಗದಲ್ಲಿರುವ (temporal lobe) ಮಿದುಳಿನಲ್ಲಿ ವಿದ್ಯುತ್ ತರಂಗಗಳು ಏರುಪೇರಾದಾಗ, ಇದು ಸಾಮಾನ್ಯವಾಗಿ ಯೌವನಾವಸ್ಥೆ ತಲುಪುವಾಗ, ವೃದ್ಧಾಪ್ಯದಲ್ಲಿ, ವ್ಯಕ್ತಿ ನಾನಾ ರೀತಿಯ ಭ್ರಮೆಗೆ ಒಳಗಾಗುತ್ತಾನೆ. (delusion, hallucination) ಇದು ಅತಿಯಾದಾಗ ಅದನ್ನು temporal lobe epilepsya) ಎನ್ನುತ್ತಾರೆ. ಈ ಪರಿಸ್ಥಿತಿಯಲ್ಲಿ ವ್ಯಕ್ತಿ ನಾನು ದೇವರನ್ನು ಕಂಡೆ, ಭೂತವನ್ನು ಕಂಡೆ ಎಂದು ಭ್ರಮಿಸಿ ಮಾತನಾಡುತ್ತಾನೆ. ಆದ್ದರಿಂದ ನಮ್ಮ ಈ ಧಾರ್ಮಿಕ ನಂಬಿಕೆಗಳು ಅತಿರೇಕಕ್ಕೆ ಹೋದಾಗ ಸಾಮಾಜಿಕ ಸಮಸ್ಯೆ ಉದ್ಭವವಾಗುತ್ತದೆ. ಈ ಸಮಸ್ಯೆಯೇ ಶತಶತಮಾನಗಳಿಂದ ಮಾನವ ಜನಾಂಗವನ್ನು ಧರ್ಮ, ದೇವರ ಹೆಸರಿನಲ್ಲಿ ಬಡಿದಾಟಕ್ಕೆ ಪ್ರೇರೇಪಿಸುತ್ತಿರುವುದು ಎಂದು ಡಾಕಿನ್ಸ್ ಹೇಳುತ್ತಾರೆ. ಇದಕ್ಕೆ ಮನಃ ಶಾಸ್ತ್ರದ ಆಧಾರವನ್ನು ಅವರು ನೀಡುತ್ತಾರೆ. ಇತಿಹಾಸದ ರಕ್ತಸಿಕ್ತ ಪುಟಗಳೇ ಇದಕ್ಕೆ ಸಾಕ್ಷಿ. ಸುಪ್ರಸಿದ್ಧ ಚಿಂತಕ, ವಿಚಾರವಾದಿ ವಿಜ್ಞಾನಿ ಬರ್ಟ್‌ರೆಂಡ್ ರಸೆಲ್ ಹೇಳಿದ್ದಾರೆ. 'ಧರ್ಮ-ಧರ್ಮಗಳ ನಡುವೆ ನಡೆದ ಯುದ್ಧ, ಸಂಘರ್ಷಗಳು ಮಾನವ ಜನಾಂಗಕ್ಕೆ, ಪ್ರಕೃತಿವಿಕೋಪಗಳಿಗಿಂತ ಹೆಚ್ಚು ಪ್ರಾಣಹಾನಿ ಮಾಡಿದೆ.

ಹಾಗಾದರೆ ದೇವರಲ್ಲಿ ನಂಬಿಕೆ ಸರಿಯಲ್ಲವೇ? ಕಂಬವ್ಹೋ ಬಿಂಬವ್ಹೋ ಬಾಳಿ ಗೊಂದು ನಂಬಿಕೆಯ ಆಸರೆ ಬೇಕು ಎನ್ನುತ್ತಾರೆ ದೈವಭಕ್ತ ಆಧ್ಯಾತ್ಮಿಕ ಕವಿ ಡಿವಿಜಿ ತಮ್ಮ ಮಂಕುತಿಮ್ಮನ ಕಗ್ಗದಲ್ಲಿ. ಆದರೆ ಈ ನಂಬಿಕೆಗಳು ಆವೇಶದಿಂದ ಅತಿಯಾದಾಗ ನಿಜವಾದ ಸಾಮಾಜಿಕ ಸಮಸ್ಯೆ ಉದ್ಭವವಾಗುತ್ತದೆ. ಇದರಿಂದ ಜಾತಿ, ಧರ್ಮಗಳ ಮಧ್ಯೆ ಪರಸ್ಪರ ಸಂಘರ್ಷ ಅನಿವಾರ್ಯವಾಗುತ್ತದೆ, ಆಗಿದೆ ಕೂಡ. ಈ ಆಧುನಿಕ ವಿಜ್ಞಾನ ಯುಗದಲ್ಲಿ ಈ ಬಡಿದಾಟ ಅಗತ್ಯವಿಲ್ಲ. ದೇವರು ಎಂಬುದು ಒಂದು ಕಲ್ಪನೆ. ಆದಿ ಮಾನವನ ಇತಿಹಾಸದಲ್ಲಿ ಆತ ಸುಮಾರು ಲಕ್ಷ ವರ್ಷ ಯಾವುದೇ ದೇವರ ಕಲ್ಪನೆ ಇಲ್ಲದೆ ಕಾಲ ಕಳೆದಿರುವುದು ಗೋಚರಿಸುತ್ತದೆ. ಆದರೆ ಈ ಕಳೆದ 10 ಸಾವಿರ ವರ್ಷದಿಂದ

ಇಂಥ ಭ್ರಮಾಧೀನ ನಂಬಿಕೆಗಳು ಆರಂಭವಾಗಿದೆ ಎನ್ನುತ್ತಾರೆ ವಿಕಾಸವಾದದ ಪ್ರತಿಪಾದ-ಕರು.

ನಾಗರಿಕತೆಯ ಉಗಮವಾಗುತ್ತಿದ್ದಂತೆ ಇಂಥ ನಂಬಿಕೆಗಳು ಕಂತೆ ಕಂತೆಯಾಗಿ ಮನುಷ್ಯ ಪ್ರಾಣಿಯನ್ನು ಕಾಡಿದ್ದು ನಮಗೆ ತಿಳಿದಿದೆ. ಆದರೆ ವಿಜ್ಞಾನಯುಗ ಆರಂಭವಾದ ಮೇಲೆ ಈ ಭ್ರಮೆಗಳು ಕಡಿಮೆಯಾಗಬೇಕಿತ್ತು. ಆದರೆ ಹಾಗಾಗಿಲ್ಲದಿರುವುದೇ ದುರದೃಷ್ಟ-ಕರ. ಮಾನವ ಸಮಾಜದ ಈ ವರ್ತನೆಗೆ ವಿಜ್ಞಾನಿಗಳಲ್ಲಿ ಉತ್ತರವಿಲ್ಲ. ಕೌತುಕವಿದೆ. ಧರ್ಮಾಧಾರಿತ ನಂಬಿಕೆಗಳಿಂದ ಹಾನಿಯ ಜತೆ, ಲಾಭವೂ ಆಗಿದೆ. ಸಾಗರದಷ್ಟು ಆಧ್ಯಾತ್ಮಿಕ ಚಿಂತನೆಯ ಸರಕು ನಮ್ಮ ಮಾರ್ಗದರ್ಶನಕ್ಕೆ ಲಭ್ಯವಿದೆ. ನಮ್ಮ ಬುದ್ಧಿ ವಿವೇಕವನ್ನು ಬಳಸಿ ನಾವು ಇದನ್ನು ಸದುಪಯೋಗಪಡಿಸಿಕೊಳ್ಳಬೇಕು. ಎಲ್ಲಾ ಧರ್ಮಗಳ ಅಂಗವಾಗಿ ಈ ಆಧ್ಯಾತ್ಮಿಕತೆ ಹೊರಹೊಮ್ಮಿದೆ. ಆದರೆ ಭಾರತದಲ್ಲಿ ಇದು ಧರ್ಮವನ್ನು ಸಾತ್ವಿಕಗೊಳಿಸಿ ತತ್ವಜ್ಞಾನದ ಸಿರಿಸಂಪತ್ತನ್ನು ಶ್ರೀಮಂತಗೊಳಿಸಿ ವಿಪುಲ ಸಾಹಿತ್ಯವನ್ನು ನೀಡಿದೆ. ಇದು ಈ ದೇಶದ ವೈಶಿಷ್ಟ್ಯವೆನ್ನಬಹುದು. ವೈದಿಕ ಧರ್ಮದಲ್ಲಿ ಭಗವಂತ ಸರ್ವಾಂತರ್ಯಾಮಿ, ನಿರಾಕಾರ, ನಿರ್ಗುಣ ಪ್ರತಿ ಚರಾಚರವಸ್ತುಗಳಲ್ಲಿ ಅವನಿದ್ದಾನೆ. ಚೈತನ್ಯವೇ ದೇವರು ಎಂಬ ನಂಬಿಕೆ ಇದೆ. ಹೊರಗಿನಿಂದ ಬಂದ ಧರ್ಮಗಳಲ್ಲಿ ದೇವರು ಒಬ್ಬನೇ ಆಕಾಶದಲ್ಲೆಲ್ಲೋ ಇದ್ದು ನಮ್ಮನ್ನು ನಿಯಂತ್ರಿಸಿ, ಆಜ್ಞೆ ಮಾಡುತ್ತಾನೆ. ಅವನ ಪರವಾಗಿ ಪ್ರವಾದಿಗಳು ಆತ ನಿರ್ಮಿಸಿದ ಎನ್ನಲಾದ ಕಾನೂನನ್ನು ಇಲ್ಲಿ ಜಾರಿಗೊಳಿಸು ತ್ತಾರೆ. ಇದು ಆ ಧರ್ಮಗಳ ನಂಬಿಕೆ. ಸಮಸ್ಯೆಯ ಮೂಲ ಇದೇ. ಇದನ್ನು ನಾವು ಈಗ ನೋಡಿ ಅನುಭವಿಸುತ್ತಿದ್ದೇವೆ. ಈ ಎಲ್ಲಾ ಕಲ್ಪನೆಗಳನ್ನು ನಂಬಿಕೆಗಳನ್ನು ಕ್ರೋಢೀಕರಿಸಿ ಈಗ ನಾವು ಒಂದು ತತ್ವವನ್ನು ಆಯ್ಕೆ ಮಾಡಿಕೊಳ್ಳಬೇಕು. ಅದು 'Live and let live' ಬದುಕು ಬದುಕಲು ಬಿಡು ಎನ್ನುವುದು. ಈ ಸಿದ್ಧಾಂತವನ್ನು ನಾವು ಪ್ರಾಣಿ ಸಂಕುಲಕ್ಕೂ ವಿಸ್ತರಿಸಬೇಕು. ದೇವರಿದ್ದಾನೆ ಎನ್ನುವುದಾದರೆ ಇಲ್ಲಿರುವ ಎಲ್ಲಾ ವಸ್ತುಗಳೂ, ಜೀವಿಗಳೂ ಅವನದ್ದೇ. ಎಲ್ಲರೂ ಸಹ ಬಾಳ್ವೆಯಿಂದ ಬಾಳಲು ಅವಕಾಶವಿದೆ. ಆತ ಈಗಾಗಲೇ ನಮಗೆ ನಾವೇ ಪ್ರೋಗ್ರಾಂ ಮಾಡಿಕೊಳ್ಳಬಹುದಾದ ಸಾಫ್ಟ್‌ವೇರನ್ನು ನಮ್ಮ ಮಿದುಳಿನಲ್ಲಿ ಅಳವಡಿಸಿದ್ದಾನೆ. ಅದನ್ನು ಬಳಸಬೇಕಷ್ಟೆ.

ನಮ್ಮ ಉಪನಿಷತ್ತುಗಳು ಈ ಸಂದೇಶವನ್ನು ಸ್ಪಷ್ಟವಾಗಿ ಸಾರಿವೆ. ಇದನ್ನು ನಾವು ಮರೆತು ಏಕದೇವತಾವಾದ, ಬಹುದೇವತಾವಾದ ದೇವದೂತರು ಇತ್ಯಾದಿಗಳನ್ನು ಸೃಷ್ಟಿಸಿ ನನ್ನ ದೇವರು ಸರಿ, ಉತ್ತಮ ನಿನ್ನ ದೇವರು ಸರಿಯಿಲ್ಲ, ಅಧಮ ಎಂದು ತಿಳಿದಾಗ ಬಡಿದಾಟ ಆರಂಭವಾಗುತ್ತದೆ. ಇಂಥ ಬಡಿದಾಟಗಳು ಆಗುತ್ತಲೇ ಇವೆ. ಇಂಥ ಕಲ್ಪನೆಗಳು ವಿವೇಕಯುತವಾದ ಮಾರ್ಗವಲ್ಲ. ನಂಬಿಕೆಗಳು ವೈಯಕ್ತಿಕ. ಅವು ಮನೆಯೊಳಗಿದ್ದರೆ, ಚೆನ್ನ.

ನಾವು ವಿಜ್ಞಾನದ ಯುಗದಲ್ಲಿದ್ದೇವೆ. ನಾವು ಕಾಣುವ ಅನುಭವಿಸುವ ಪ್ರತಿ

ಯೊಂದನ್ನೂ ಪರಾಮರ್ಶಿಸಿ, ಅರ್ಥ ಮಾಡಿಕೊಂಡು ಪ್ರಮಾಣೀಕರಿಸಿಕೊಂಡು ಬದುಕುವು ದನ್ನು ಕಲಿಯಬೇಕು. ಈ ಬದುಕಿಗೆ ದೇವರೆಂಬ ನಂಬಿಕೆಯ ಅಗತ್ಯವಿಲ್ಲ. ನಮಗಿನ್ನು ಪ್ರವಾದಿಗಳು, ದೇವಮಾನವರು ಬೇಡ. ಬರ್ಟ್‌ರೆಂಡ್ ರಸೆಲ್ ಹೇಳುವಂತೆ 'Create no more greatmen, but elevate the Society.'

ನಾವು ಕಂಡ ಅತಿ ಶ್ರೇಷ್ಠ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್. 'ನಾನು ಇದು ಸರಿ, ಅದು ಸರಿಯಲ್ಲ, ಇದನ್ನು ನೀವು ಮಾಡು ಅದನ್ನು ಮಾಡಬೇಡ ಎಂದು ಹೇಳುವ ವೈಯಕ್ತಿಕ ದೇವರನ್ನು ನಂಬುವುದಿಲ್ಲ. ಈಗ ನನಗಿರುವ ಜ್ಞಾನದಿಂದ ಈ ಭವ್ಯ ಸೃಷ್ಟಿಯ ವೈಚಿತ್ರಗಳನ್ನು ಆನಂದಿಸಿದರೇ ಸಾಕು...' ಎಂದು ಹೇಳಿದ್ದಾರೆ.

ಧೂಳಿನ ಕಣಗಳಷ್ಟೇ ನಕ್ಷತ್ರಗಳಿರಬಹುದು ಎಂದು ಆಧುನಿಕ ಆಕಾಶ, ಅಂತರಿಕ್ಷ ವಿಜ್ಞಾನ ಹೇಳುತ್ತದೆ. ಈ ಅಗಾಧವಾದ, ಕಲ್ಪನೆಗೂ ಮೀರಿದ ಬ್ರಹ್ಮಾಂಡದಲ್ಲಿ ನಮ್ಮ ಸೂರ್ಯ ಒಂದು ಸಣ್ಣ ಕಣ. ಹಾಗಾದರೆ ಇಂಥ ಅದ್ಭುತ ಸೃಷ್ಟಿಗೆ ಕಾರಣನಾದವನು ಯಾರು? ಎಲ್ಲಿದ್ದಾನೆ? ಆತ 'ಅಲ್ಲಾನೇ' 'ಯೇಸುವೇ', 'ರಾಮನೇ' ಇಂಥ ಪ್ರಶ್ನೆ ಮೂರ್ಖತನದ್ದು. ಉತ್ತರವೂ ಹಾಸ್ಯಾಸ್ಪದ. ಹುಟ್ಟು ಆಕಸ್ಮಿಕ, ಸಾವು ನಿಶ್ಚಿತ. ಇದರ ಮಧ್ಯದ ಬದುಕು ಸರಳವಾಗಿ ನೆಮ್ಮದಿಯಾಗಿರಬೇಕು. ಇದು ನಮ್ಮ ವಿವೇಕಕ್ಕೆ ಬಿಟ್ಟದ್ದು.



# ಕ್ರಿಸ್ತನ ಮಾರ್ಗವೇ ಬೇರೆ, ಚರ್ಚಿನ ಗುರಿಯೇ ಬೇರೆ

*- ಸಚ್ಚಿದಾನಂದ ಹೆಗಡೆ*

---

ಡಾ. ಎಸ್.ಎಲ್. ಭೈರಪ್ಪ ಲೇಖನಕ್ಕೆ ಪ್ರತಿಕ್ರಿಯೆ ಕಳಿಸಿದ ಹಲವರು ಮತಾಂತರಕ್ಕೆ ಅಸ್ಪೃಶ್ಯತೆಯೇ ಕಾರಣ ಎಂದು ಪ್ರತಿಪಾದಿಸಿದರೆ. ಜತೆಗೆ ಎಂದಿನಂತೆ ಹಿಂದೂ ಧರ್ಮವನ್ನು ವಾಚಾಮ ಗೋಚರ ಬೈದಿದ್ದಾರೆ. ಅವರಾರೂ ಡಾ. ಭೈರಪ್ಪ ಮಂಡಿಸಿರುವ ಇತಿಹಾಸದ ಘಟನೆಗಳನ್ನು, ವರ್ತಮಾನದ ಸಾಕ್ಷ್ಯಗಳನ್ನು ಅಲ್ಲಗಳೆದಿಲ್ಲ. ಬೈಗಳು ಹಾಗೂ ಪೂರ್ವ ಗ್ರಹಪೀಡಿತ ದೂಷಣೆಗಳು ಆಪಾದನೆಯನ್ನು ಸಾಬೀತುಗೊಳಿಸುತ್ತವೆ ವಿನಾ ನಿರಾಕರಿಸುವು ದಿಲ್ಲ. ಆ ಅರ್ಥದಲ್ಲಿ ಈ ಮಹನೀಯರು ಡಾ. ಭೈರಪ್ಪನವರನ್ನು ದೂಷಿಸುವ ಮೂಲಕ ಅವರು ಮಾಡಿರುವ ಆಪಾದನೆಗಳನ್ನು ಸಾಬೀತುಗೊಳಿಸಿದಂತಾಗಿದೆ.

ಅಸ್ಪೃಶ್ಯತೆಯೇ ಮತಾಂತರಕ್ಕೆ ಕಾರಣ ಎಂಬ ಅವರ ಪ್ರತಿಪಾದನೆ ಕೂಡ ತುಂಬ ದುರ್ಬಲವಾದದ್ದು. ಅಸ್ಪೃಶ್ಯತೆಯಿಂದಾಗಿ ಮತಾಂತರವಾಗಿಲ್ಲ ಎಂದು ನಾನು ಹೇಳುತ್ತಿಲ್ಲ. ಆದರೆ ಅಂಥ ಪ್ರಕರಣಗಳು ಬಹಳ ಕಡಿಮೆ. ಅಸ್ಪೃಶ್ಯತೆಯೇ ಇಲ್ಲದ, ಮೇಲ್ಜಾತಿ-ಕೆಳಜಾತಿ ತಾರತಮ್ಯ ಇಲ್ಲದ ಪ್ರದೇಶಗಳಲ್ಲಿ ಬಹಳ ದೊಡ್ಡ ಪ್ರಮಾಣದ ಮತಾಂತರ ನಡೆದಿದೆ. ನಾನು ಕಳೆದ 15 ವರ್ಷಗಳಿಂದ ಗಿರಿಜನರ ಮಧ್ಯೆ ಕೆಲಸ ಮಾಡುತ್ತಿದ್ದೇನೆ. ನಮ್ಮ ದೇಶದ ಗಿರಿ-ಕಾನನಗಳಲ್ಲಿ ವಾಸ ಮಾಡುತ್ತಿರುವ ಹಲವು ವನವಾಸಿ-ಗಿರಿಜನ ಸಮುದಾಯಗಳಿವೆ. ನಾನು ನೋಡಿರುವ ಅಂಥ ಎಷ್ಟೋ ಪ್ರದೇಶಗಳಲ್ಲಿ ಮೇಲ್ಜಾತಿ ಸಮುದಾಯಗಳೇ ಇಲ್ಲ. ಅಲ್ಲಿ ಜಾತಿ ತಾರತಮ್ಯ ಇಲ್ಲ. ಆದರೂ ಅಲ್ಲಿ ಮತಾಂತರ ಪ್ರತಿದಿನ ಎಂಬಂತೆ ನಡೆಯುತ್ತದೆ. ಈ ರೀತಿ ಮತಾಂತರ ನಡೆಯುತ್ತಿರುವ ಅನೇಕ ವನವಾಸಿ ಹಾಡಿ-ವಾಡಾಗಳ ಹೆಸರುಗಳನ್ನು ನಾನು ಪಟ್ಟಿ ಮಾಡಬಲ್ಲೆ. ಆದ್ದರಿಂದ ಅಸ್ಪೃಶ್ಯ ತೆಯೇ ಮತಾಂತರಕ್ಕೆ ಕಾರಣ ಎಂಬ ವಾದ ಪೊಳ್ಳುತನದ್ದು. ಹಾಗೆಂದು ನಾನೇನೂ ಅಸ್ಪೃಶ್ಯತೆಯನ್ನು ಸಮರ್ಥಿಸುವುದಿಲ್ಲ. ಅದೊಂದು ಮಹಾಪಾಪ ಎಂದು ನನ್ನ ಪ್ರಾಮಾಣಿಕ ನಂಬಿಕೆ.

ಮತಾಂತರದ ಬಗ್ಗೆ ಸೈದ್ಧಾಂತಿಕ ವಾದ ಮಂಡಿಸುವ ಬಹಳಷ್ಟು ಜನ ಲೇಖಕರು ತಳಮಟ್ಟದ ವಸ್ತುಸ್ಥಿತಿಯ ಅಧ್ಯಯನ ನಡೆಸಿರುವುದಿಲ್ಲ ಎನ್ನುವುದು ನನ್ನ ಅನುಭವ. ಮತಾಂತರ ನಡೆದ ಪ್ರದೇಶಗಳಲ್ಲಿ ಈ ಮಂದಿ ಹೋಗಿ ಪ್ರತ್ಯಕ್ಷ ಅಲ್ಲಿನ ಸ್ಥಿತಿಯನ್ನು ನೋಡಿರುವುದಿಲ್ಲ. ನಾನು ಕೆಲಸ ಮಾಡುತ್ತಿರುವ ವನವಾಸಿ ಕ್ಷೇತ್ರದಲ್ಲಿ ಯಾವ ಯಾವ ಮಾಧ್ಯಮ ಪ್ರತಿನಿಧಿಗಳು-ಲೇಖಕರು ಬಂದಿದ್ದಾರೆ ಅಥವಾ ಬರಲಿಲ್ಲ ಎಂಬ ಬಗ್ಗೆ ನನ್ನ ಬಳಿ ಮಾಹಿತಿ ಇದೆ. ಬಂದು ನೋಡಿದವರು ವಾಸ್ತವ ಸ್ಥಿತಿ ಬರೆದಿದ್ದಾರೆ. ಬರದಿದ್ದ ವರು ಕುಳಿತಲ್ಲಿಯೇ ತಮ್ಮ ಮೂಗಿನ ನೇರಕ್ಕೆ ಬರೆದಿದ್ದಾರೆ.

ಡಾ. ಎಸ್.ಎಲ್. ಭೈರಪ್ಪ ಮತಾಂತರ ಒಂದು ಆಧ್ಯಾತ್ಮಿಕ ದಾರಿಯ ಬದಲಾವಣೆ ಅಲ್ಲ, ಬದಲಿಗೆ ಅದೊಂದು ರಾಜಕೀಯ ಉದ್ದೇಶಗಳುಳ್ಳ ಹುನ್ನಾರ ಎಂಬುದನ್ನು ಸಾಕ್ಷ್ಯಾಧಾರಗಳ ಸಮೇತ ಸಾಬೀತುಪಡಿಸಿದ್ದಾರೆ. ಮತ ಎನ್ನುವುದು ದೇವರನ್ನು ದರ್ಶಿಸುವ ಒಂದು ದಾರಿ. ಆ ದಾರಿ ಸರಿ ಇಲ್ಲ ಎಂದಾದರೆ ಇನ್ನೂ ಉತ್ತಮ ದಾರಿ ಯಾವುದಿದೆ ಎಂದು ಹುಡುಕಾಟ ನಡೆಸಿ, ಅದು ಸಿಕ್ಕರೆ ತನ್ನ ಮೂಲ ದಾರಿಯನ್ನು ಬಿಟ್ಟು ಹೊಸ ದಾರಿಯನ್ನು ಆಯ್ಕೆ ಮಾಡಿಕೊಳ್ಳುವುದೇ ಮತಾಂತರ.

ಕ್ರೈಸ್ತ ಮತ ಪ್ರಸಾರದಲ್ಲಿ ತೊಡಗಿರುವ ಪಾದ್ರಿಗಳು ಮತ್ತು ಮಿಷನರಿಗಳು ಮೊದಲು ನಿಜವಾದ ಕ್ರೈಸ್ತ ದರ್ಶನವನ್ನು ಅರ್ಥ ಮಾಡಿಕೊಳ್ಳಬೇಕು. ಕ್ರಿಶ್ಚಿಯಾನಿಟಿ ಮತ್ತು ಚರ್ಚಿಯಾನಿಟಿ ಇವುಗಳ ಮಧ್ಯದ ಅಂತರವನ್ನು ತಿಳಿದುಕೊಳ್ಳಬೇಕು. ಮತಾಂತರ ಹಾಗೂ ಹೃದಯದ ವಿಕಾಸ ಇವುಗಳ ವ್ಯತ್ಯಾಸದ ಅರಿವಿರಬೇಕು. ಮತ ವಿಸ್ತರಣೆ ಹಾಗೂ ಆಧ್ಯಾತ್ಮಿಕ ಸಾಧನೆ ಇವು ಒಂದೆಯೇ ಅಥವಾ ಬೇರೆ ಬೇರೆಯೇ ಎಂಬುದನ್ನು ಸ್ಪಷ್ಟಪಡಿಸಿ ಕೊಳ್ಳಬೇಕು. ಹಾಗಿಲ್ಲದಿದ್ದರೆ ಅವರು ಯಾವುದೋ ಒಂದು ರಾಜಕೀಯ ಹುನ್ನಾರದ ಭಾಗವಾಗಿ ಕೆಲಸ ಮಾಡುತ್ತಿದ್ದಾರೆ ಎಂದು ಹೇಳಲಡ್ಡಿಯಿಲ್ಲ.

ಜೀವನದ ಪರಮ ಸತ್ಯವನ್ನು ಅರ್ಥ ಮಾಡಿಕೊಳ್ಳುವುದೇ ಆಧ್ಯಾತ್ಮ ವಿದ್ಯೆ ಎಂದು ನಾನು ಭಾವಿಸಿದ್ದೇನೆ. ಅದು ಯಾವುದೇ ಒಂದು ಮತಕ್ಕೆ ಸೀಮಿತವಾದದ್ದಲ್ಲ. ಎಲ್ಲ ಮತಗಳಲ್ಲಿಯೂ ಆಧ್ಯಾತ್ಮಿಕ ಸಾಧಕರು ಇರುವುದು ನಿಜ. ಕ್ರೈಸ್ತ ಮತವನ್ನನುಸರಿಸುವ ಕೆಲವು ಮಹಾನ್ ಆಧ್ಯಾತ್ಮಿಕ ಸಾಧಕರ ಬಗ್ಗೆ ಸ್ವಾಮಿ ರಾಮ ಬರೆದ 'ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ' ಎಂಬ ಗ್ರಂಥದಲ್ಲಿ ಉಲ್ಲೇಖಗಳಿವೆ. ಸ್ವಾಮಿ ರಾಮ ಉಲ್ಲೇಖಿ ಸಿದ ಕ್ರೈಸ್ತ ಸಾಧುಗಳು ಮತಾಂತರದಲ್ಲಿ ತೊಡಗಿದವರಲ್ಲ. ಬಡತನದ ಬೇಗೆಯಲ್ಲಿ ಬೇಯುತ್ತಿರುವ ಅಸಹಾಯಕ ಮುಗ್ಧರಿಗೆ ನಾನಾ ಆಮಿಷಗಳನ್ನೊಡ್ಡಿ ಅವರನ್ನು ತಮ್ಮ ಮತಕ್ಕೆ ಸೆಳೆದವರಲ್ಲ. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಆಧಾರಸ್ತಂಭಗಳಾಗಿ ಕೆಲಸ ಮಾಡಿದವರಲ್ಲ. ಕ್ರಿಶ್ಚಿಯನ್ನರ ಜನಸಂಖ್ಯೆಯನ್ನು ಹೆಚ್ಚಿಸುವ ಮೂಲಕ ಈ ಜಗತ್ತನ್ನು ಕ್ರೈಸ್ತಮಯಗೊಳಿಸಿ ರಾಜಕೀಯ ಬಲ ಗಳಿಸುವ ಹುನ್ನಾರವುಳ್ಳವರಾಗಿರಲಿಲ್ಲ.

ಆದರೆ ಆ ಕ್ರೈಸ್ತ ಸಾಧುಗಳೆಲ್ಲ ಭಗವಂತನನ್ನು ಕ್ರಿಸ್ತನ ರೂಪದಲ್ಲಿ ಸಾಕ್ಷಾತ್ಕರಿಸಿ ಕೊಂಡವರಾಗಿದ್ದರು.

ಸ್ವಾಮಿ ರಾಮ ಸಾಧು ಸುಂದರಸಿಂಹ ಅವರ ಬಗ್ಗೆ ಬರೆದಿದ್ದಾರೆ. ಹುಟ್ಟಿನಿಂದ ಸಿಖ್ಖರಾಗಿದ್ದ ಅವರು ಪಂಜಾಬಿನ ಅಮೃತಸರದವರು. ಚಿಕ್ಕವರಿದ್ದಾಗ ಅವರಿಗೆ ಒಂದು ಸ್ವಪ್ನ ದರ್ಶನವಾಗಿತ್ತು. ಅದು ಪ್ರತಿ ರಾತ್ರಿಯೂ ಪುನರಾವರ್ತನೆಯಾಯಿತು. ಅದೊಂದು ಕನಸೋ, ಮಾರ್ಗದರ್ಶನ ನೀಡುವ ಬೆಳಕೋ ಅಥವಾ ಅಪಾಯದ ಸೂಚಕವೋ ಎಂಬುದು ಅವರಿಗೆ ಅರ್ಥವಾಗಲಿಲ್ಲ. ಯಾರೋ ಇವರನ್ನು ಕಂಡು 'ಏಳು, ಹಿಮಾಲಯದತ್ತ ಹೊರಡು' ಎಂದು ಹೇಳುತ್ತಿರುವುದನ್ನು ಕಂಡರು. ಸುಂದರಸಿಂಹ ಅವರು ನಿದ್ದೆ ಮಾಡುವುದನ್ನೇ ತಪ್ಪಿಸಲು ಪ್ರಯತ್ನಿಸಿದರಾದರೂ ಆಯಾಸವಾದಾಗ ಅಪ್ರಯತ್ನಪೂರ್ವಕವಾಗಿ ಕಣ್ಣು ಮುಚ್ಚುತ್ತಿದ್ದರು. ಆಗ ಈ ಸ್ವಪ್ನ ಅವರಿಗೆ ಮತ್ತೆ ಮತ್ತೆ ಕಾಣುತ್ತಿತ್ತು. 'ನನ್ನ ಮಾತು ಕೇಳಲು ಸಿದ್ಧನಿದ್ದೀಯೇನು? ನಾನು ನಿನ್ನ ರಕ್ಷಕ. ನಿನಗೆ ಅನ್ಯ ಮಾರ್ಗವೇ ಇಲ್ಲ' ಎಂದು ಹೇಳುವ ಧ್ವನಿಯೂ ಕೇಳಿಬರುತ್ತಿತ್ತು. ಕನಸಿನಲ್ಲಿ ಬರುತ್ತಿದ್ದಾತ ಯಾರೆಂಬುದು ಅವರಿಗೆ ತಿಳಿಯಲಿಲ್ಲ. ಅವರಿವರ ಬಳಿ ಕೇಳಿದರಾದರೂ ಉತ್ತರ ಸ್ಪಷ್ಟವಾಗಲಿಲ್ಲ. ಒಮ್ಮೆ ಕ್ರಿಸ್ತನ ಚಿತ್ರವನ್ನು ಅವರು ನೋಡಿದಾಗ ಕನಸಿನಲ್ಲಿ ಬಂದು ಕರೆಯುತ್ತಿದ್ದವ ಈತನೇ ಎಂಬುದು ಸ್ಪಷ್ಟವಾಯಿತು. ಮತ್ತೆ ಮತ್ತೆ ಕ್ರಿಸ್ತನು ಕನಸುಗಳ ಮೂಲಕ ಕಾಣಿಸಿಕೊಂಡು 'ಮಗೂ, ವಿಳಂಬ ಯಾಕೆ?' ಎಂದು ಕೇಳುತ್ತಿದ್ದ. ಕೊನೆಗೊಮ್ಮೆ ಸುಂದರಸಿಂಹರು ಮನೆಬಿಟ್ಟು ಯಾರಿಗೂ ಹೇಳದೇ ಹಿಮಾಲಯಕ್ಕೆ ಹೋಗಿ ಅಲ್ಲಿ ಸಾಧನೆಗೈದರು. ಅಂತಿಮವಾಗಿ ಅವರು ಕ್ರಿಸ್ತನನ್ನು ಸಾಕ್ಷಾತ್ಕರಿಸಿಕೊಂಡರು.

ಸಾಧು ಸುಂದರಸಿಂಹ ಸ್ವಾಮಿ ರಾಮ ಅವರೊಂದಿಗೆ ಅವರ ಗುಹಾ ಗುರುಕುಲದಲ್ಲಿ ಹಲವಾರು ವರ್ಷ ಇದ್ದರು. ಒಮ್ಮೆ ಸ್ವಾಮಿ ರಾಮ ಅವರು ಸುಂದರಸಿಂಹರನ್ನು ಕೇಳಿದರಂತೆ: 'ನೀವು ದೇವರನ್ನು ಕಂಡಿದ್ದೀರೇನು?' ಅದಕ್ಕೆ ಸುಂದರಸಿಂಹ ಉತ್ತರಿಸಿದರು: 'ಸದಾಕಾಲ ನಾನು ದೇವರನ್ನು ಕಾಣುತ್ತಿದ್ದೇನೆ. ಕೇವಲ ಒಂದು ಸಲ, ಎರಡು ಸಲ ಅಥವಾ ಮೂರು ಸಲವಷ್ಟೇ ನಾನು ದೇವರನ್ನು ಕಂಡಿರುವುದು ಎಂದು ಭಾವಿಸಿದ್ದೀರೇನು? ಹಾಗಲ್ಲ, ಸದಾಕಾಲ ನಾನು ನನ್ನ ಒಡೆಯನ ಜತೆಯಲ್ಲೇ ಇದ್ದೇನೆ. ನಾನು ಅವರ ಜತೆಯಲ್ಲಿ ಇರುವುದಕ್ಕೆ ಆಗದಿದ್ದಾಗ ಅವನು ನನ್ನ ಜತೆ ಇರುತ್ತಾನೆ'.

ಸಾಧು ಸುಂದರಸಿಂಹ ಅವರು ಕ್ರಿಸ್ತಮಾರ್ಗದಲ್ಲಿ ಸಾಧನೆ ಮಾಡಿದ ಹಾಗೆ ಬೌದ್ಧಮತ, ವೇದಗಳು, ಉಪನಿಷತ್‌ಗಳು ಮುಂತಾದವುಗಳನ್ನೂ ಆಳವಾಗಿ ಅಧ್ಯಯನ ಮಾಡಿದ್ದರು. ಅಂತಿಮವಾಗಿ ಇವೆಲ್ಲವೂ ಸತ್ಯವನ್ನು ಕಂಡುಹಿಡಿಯುವ ವಿವಿಧ ಮಾರ್ಗಗಳು ಎಂಬುದನ್ನು ಅವರು ಹೇಳುತ್ತಿದ್ದರು.

ಸ್ವಾಮಿ ರಾಮ ಇನ್ನೋರ್ವ ಜೆಸ್ಯೂಯಿಟ್ ಸಾಧುವಿನ ಬಗ್ಗೆ ಬರೆದಿದ್ದಾರೆ. ಈ ಜೆಸ್ಯೂಯಿಟ್ ಸಾಧು ಕವಿ ಉಡುಪನ್ನು ತೊಟ್ಟು, ಕೊರಳಲ್ಲಿ ಶಿಲುಬೆ ಧರಿಸಿದ್ದರು.

ಸಂಸ್ಕೃತ, ಇಂಗ್ಲಿಷ್ ಹಾಗೂ ಬಹುತೇಕ ದಕ್ಷಿಣ ಭಾರತದ ಭಾಷೆಗಳನ್ನು ತಿಳಿದಿದ್ದ ಇವರು ಹಿಂದೂ ಸ್ವಾಮಿಗಳ ಹಾಗೇ ಇರುತ್ತಿದ್ದರು. ಅವರು ತಾವು ಕ್ರಿಸ್ತನೊಡನೆ ನಡೆದಾಡುವ ಬಗ್ಗೆ ಸ್ವಾಮಿ ರಾಮ ಅವರ ಬಳಿ ಹೇಳಿದ್ದರು. ಸ್ವಾಮಿ ರಾಮ ಅವರು ಆಶ್ಚರ್ಯದಿಂದ ಪ್ರಶ್ನಿಸಿದರು: 'ಎರಡು ಸಾವಿರ ವರ್ಷಗಳ ಹಿಂದೆ ಬದುಕಿದ್ದವರೊಬ್ಬರ ಜತೆಯಲ್ಲಿ ಹೇಗೆ ನಡೆದಾಡಬಲ್ಲಿರಿ?' ಅದಕ್ಕೆ ಈ ಜೆಸ್ಯೂಯಿಟ್ ಸಾಧು ನಕ್ಕು ಹೇಳಿದರು: 'ಏಸುವು ಪರಿಪೂರ್ಣತೆಯ, ಸತ್ಯದ ಒಂದು ಸ್ಥಿತಿ. ಅದು ಅವಿನಾಶಿಯಾದದ್ದು. ನಾನು ಕ್ರಿಸ್ತಪ್ರಜ್ಞೆಯಲ್ಲಿ ಬದುಕುತ್ತೇವೆ. ಅವರ ಹೆಜ್ಜೆ ಗುರುತುಗಳನ್ನು ಅನುಸರಿಸುತ್ತೇನೆ. ನಾನು ಹೋದ ಕಡೆಗಳಲ್ಲೆಲ್ಲ, ನಾನು ಚಲಿಸಿದ ದಿಕ್ಕುಗಳಲ್ಲೆಲ್ಲ ಏಸು ನನಗೆ ಮಾರ್ಗದರ್ಶನ ನೀಡುವುದನ್ನು ನಾನು ಕಾಣುತ್ತೇನೆ'.

ಇನ್ನೊಮ್ಮೆ 1947ರಲ್ಲಿ ಶಿಲ್ಲಾಂಗ್‌ನಲ್ಲಿ ಸ್ವಾಮಿ ರಾಮ ಅವರಿಗೆ ಮತ್ತೋರ್ವ ಕ್ರೈಸ್ತ ಸಾಧಕನ ಭೇಟಿಯಾಯಿತು. ಆ ಮನುಷ್ಯ 'ನಾನು ಕ್ರಿಶ್ಚಿಯಾನಿಟಿಯನ್ನು ಪ್ರೀತಿಸುತ್ತೇನೆ, ಚರ್ಚಿಯಾನಿಟಿಯನ್ನಲ್ಲ' ಎಂದು ಹೇಳುತ್ತಿದ್ದರು. ಆ ಕ್ರಿಶ್ಚಿಯನ್ ಯೋಗಿಯೊಡನೆ ಸ್ವಾಮಿ ರಾಮ ಅವರು ನಾಲ್ಕು ತಿಂಗಳ ಕಾಲ ಉಳಿದಿದ್ದರು. ಆ ಯೋಗಿ ಗೀತೆಯ ತತ್ವ ಹಾಗೂ ಬೈಬಲ್ಲಿನ ಬೋಧನೆಗಳನ್ನು ಅವೆರಡರ ಅಂತಿಮ ಪರಿಣಾಮದ ಸಮೇತವಾಗಿ ತುಲನೆ ಮಾಡಬಲ್ಲವರಾಗಿದ್ದರು ಎಂದು ಸ್ವಾಮಿ ರಾಮ ಹೇಳುತ್ತಾರೆ. 'ವಿಶ್ವದ ಧರ್ಮಗಳ ಸ್ಥಾಪಕರು ಹಾಗೂ ಮಹಾನ್ ಸಂದೇಶವಾಹಕರುಗಳೆಲ್ಲ ಕೇವಲ ನಿರೂಪಕರು ಮಾತ್ರ. ಆದರೆ ವಾಸ್ತವವಾಗಿ ಋಷಿಗಳೇ ಪವಿತ್ರ ಸತ್ಯಗಳ ಸಂಸ್ಥಾಪಕರು, ಅವತಾರ ಪುರುಷರಲ್ಲ. ಋಷಿಗಳಿಂದ ನೀಡಲ್ಪಟ್ಟ ಸಂದೇಶವು ಅವತಾರಗಳಿಂದ ಕೇವಲ ರೂಪಾಂತರ ಹೊಂದಿತು. ಅವತಾರಿಗಳು ಋಷಿಗಳ ಸಂದೇಶವಾಹಕರು. ಅವರು ಕೇವಲ ಬುಟ್ಟಿಗಳನ್ನು ಬದಲಾಯಿಸುತ್ತಾರೆ, ಒಳಗಿನ ಮೊಟ್ಟೆಗಳು ಅವೇ' ಎಂದು ಆ ಕ್ರೈಸ್ತ ಸಾಧು ಹೇಳುತ್ತಿದ್ದುದನ್ನು ಸ್ವಾಮಿ ರಾಮ ಉಲ್ಲೇಖಿಸಿದ್ದಾರೆ.

ಸ್ವಾಮಿ ರಾಮ ಅವರು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ ಕ್ರಿಸ್ತ ಮಾರ್ಗದ ಮುಮುಕ್ಷುಗಳು ಇಂದು ಮತಾಂತರದಲ್ಲಿ ತೊಡಗಿರುವ ಪಾದ್ರಿಗಳ ಹಾಗೆ ಬೇರೆ ಮತ-ಪಂಥಗಳನ್ನು ಅವಹೇಳನ ಮಾಡಲಿಲ್ಲ. ಪ್ರಾಚೀನ ಭಾರತೀಯ ಋಷಿ-ಮುನಿಗಳನ್ನು ಅಶ್ಲೀಲ-ಅವಾಚ್ಯ ಶಬ್ದಗಳಲ್ಲಿ ಬೈಯ್ಯುವ, ವರ್ಣಿಸುವ 'ಸತ್ಯದರ್ಶಿನಿ'ಯಂಥ ಪುಸ್ತಕಗಳನ್ನು ಮುದ್ರಿಸಿ ಹಂಚಲಿಲ್ಲ. ಬೆನ್ನಿಹಿನ್ ಮಾದರಿಯಲ್ಲಿ ರೋಗಿಗಳನ್ನು ಗುಣಪಡಿಸುವ ನಕಲಿ ನಾಟಕಗಳನ್ನಾಡಲಿಲ್ಲ. 19ನೇ ಶತಮಾನದ ಆದಿ ಭಾಗದ ಖ್ಯಾತ ಸಮಾಜ ಸುಧಾರಕರಾಗಿದ್ದ ರಾಜಾ ರಾಮಮೋಹನ ರಾಯ್ ಅಮೆರಿಕದ ಪಾದ್ರಿ ರೆ. ಹೆನ್ರಿವೇರ್‌ಗೆ ಬರೆದ ಪತ್ರದಲ್ಲಿ ನಿರೂಪಿಸಿದ ಹಾಗೆ ಹಿಂದೂ ಧರ್ಮವನ್ನು ಬಿಟ್ಟು ಹೊಸದಾಗಿ ಕ್ರೈಸ್ತರಾಗುವವರಿಗೆ ಹೆಣ್ಣಿನ ಆಮಿಷ ತೋರಿಸುವಂಥ ಯಾವ ಹೊಲಸು ಕೃತ್ಯವನ್ನೂ ಸ್ವಾಮಿ ರಾಮ ಅವರು ಉಲ್ಲೇಖಿಸಿದ ಕ್ರೈಸ್ತ ಸಾಧುಗಳು ಮಾಡಲಿಲ್ಲ. ಮತಾಂತರಿತ

ಹಿಂದುಗಳಿಗೆ 'ನೀವೆಲ್ಲ ಭಾರತೀಯರಲ್ಲ' ಎಂದು ಅವರು ಹೇಳಿಲ್ಲ. ಹಾಗೆ ನೋಡಿದರೆ ಅವರು ಮತಾಂತರ ಮಾಡಿದ ಒಂದೇ ಒಂದು ಘಟನೆ 'ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ' ಗ್ರಂಥದಲ್ಲಿ ಬರುವುದಿಲ್ಲ.

ಕ್ರಿಸ್ತ ದರ್ಶನದ ಬಗ್ಗೆ ಆ ಸಾಧುಗಳಿಗೆಲ್ಲ ಅಚಲವಾದ ಹಾಗೂ ಅಖಂಡವಾದ ನಿಷ್ಠೆಯಿತ್ತು. ಆ ನಿಷ್ಠೆಯ ಮೆಟ್ಟಿಲುಗಳ ಮೇಲೆಯೇ ಅವರೆಲ್ಲ ತಮ್ಮ ಆಧ್ಯಾತ್ಮಿಕ ಔನ್ನತ್ಯವನ್ನು ಕಂಡುಕೊಂಡರು. ತಾವು ದರ್ಶಿಸಿದ ಸತ್ಯವನ್ನು ಅವರು ಇತರರೊಂದಿಗೆ ಖಂಡಿತವಾಗಿಯೂ ಹಂಚಿಕೊಂಡಿದ್ದರು. ಆದರೆ ಹಾಗೆ ಮಾಡುವಾಗ ಇತರ ಮತಗಳನ್ನು ಅವರು ತಿರಸ್ಕರಿಸಲಿಲ್ಲ. ಇತರ ಮತಗಳೂ ಸಹ ದೇವರನ್ನು ದರ್ಶಿಸುವ ಬೇರೆ ಬೇರೆ ಮಾರ್ಗಗಳೆಂಬ ಸತ್ಯವನ್ನು ಅವರು ಮನವರಿಕೆ ಮಾಡಿಕೊಂಡಿದ್ದರು. ಆ ಕಾರಣಕ್ಕಾಗಿಯೇ ಅವರು ಮತಾಂತರಕ್ಕೆ ತೊಡಗಲಿಲ್ಲ.

ಆದರೆ ಇಂದು ಮತಾಂತರದಲ್ಲಿ ತೊಡಗಿರುವ ಪಾದ್ರಿಗಳಿಗೆ ಇಂತಹ ಆಧ್ಯಾತ್ಮಿಕ ಮಾರ್ಗ ಬೇಕಾಗಿಲ್ಲ. ಇವರಿಗೆ ಬೇಕಾಗಿರುವುದು ಕ್ರಿಶ್ಚಿಯನ್ನರ ಸಂಖ್ಯಾ ಬಾಹುಳ್ಯ. ಆ ಮೂಲಕ ಲೋಕದ ಮೇಲೆ ರಾಜಕೀಯ ಹಿಡಿತ ಮತ್ತು ಸುಖ-ವೈಭೋಗಗಳ ಅನುಭೋಗ. ಮತಾಂತರದಲ್ಲಿ ತೊಡಗಿರುವ ಪಾದ್ರಿಗಳು ಕ್ರಿಸ್ತಮಾರ್ಗವನ್ನು ಪ್ರಚುರಪಡಿಸುತ್ತಿಲ್ಲ. ಅವರು ಪ್ರಸಾರ ಮಾಡುತ್ತಿರುವುದು ಚರ್ಚಿಯಾನಿಟಿಯನ್ನು, ಕ್ರಿಶ್ಚಿಯಾನಿಟಿಯನ್ನಲ್ಲ. **ಕ್ರಿಸ್ತನ ಮಾರ್ಗವೇ ಬೇರೆ, ಚರ್ಚಿನ ಗುರಿಯೇ ಬೇರೆ.**



# ಧರ್ಮಗಳೆಲ್ಲಾ ಒಂದೇ ಎನ್ನುವುದು ಪೊಳ್ಳು, ಅದನ್ನು ಪುನರಾವರ್ತಿಸಬೇಡಿ

*-ಡೇವಿಡ್ ಫ್ರಾಲಿ (ವಾಮದೇವ ಶಾಸ್ತ್ರಿ)*
*ಅನುವಾದ: ವಿದ್ಯಾಸಾಗರ ಶರ್ಮ*

---

ಡೇವಿಡ್ ಫ್ರಾಲಿ (ವಾಮದೇವ ಶಾಸ್ತ್ರಿ) ಅವರು ಅಮೆರಿಕದ ವಿಸ್ಕಾನ್‌ಸಿನ್‌ನ ಲಾ ಕ್ರಾಸಿ ಎಂಬಲ್ಲಿ ಕ್ಯಾಥೋಲಿಕ್ ಕುಟುಂಬದಲ್ಲಿ 1950ರಲ್ಲಿ ಜನಿಸಿದರು. ಹಿಂದುತ್ವ, ಯೋಗ ಮತ್ತು ಆಯುರ್ವೇದ ಮತ್ತು ನಾನು ಹೇಗೆ ಹಿಂದುವಾದೆ ಎಂಬ ಎರಡು ಪುಸ್ತಕಗಳನ್ನು ಬರೆದಿದ್ದಾರೆ.

ಹಿಂದುತ್ವ, ಯೋಗ ಮತ್ತು ಆಯುರ್ವೇದ ಕುರಿತು ತರಬೇತಿ ಶಿಬಿರಗಳನ್ನು ಏರ್ಪಡಿಸುವ, ನ್ಯೂ ಮೆಕ್ಸಿಕೋದ ಸಾಂಟಾ ಫೇಯಲ್ಲಿರುವ ಅಮೆರಿಕದ ವೇದಾಧ್ಯಯನ ಸಂಸ್ಥೆಯ ಸ್ಥಾಪಕ ನಿರ್ದೇಶಕ ಮತ್ತು ಅಂತಾರಾಷ್ಟ್ರೀಯ ವೇದಿಕ್ ಹಿಂದೂ ವಿಶ್ವವಿದ್ಯಾಲಯದಲ್ಲಿ ವೇದಿಕ್, ಜ್ಯೋತಿಷ್ಯಶಾಸ್ತ್ರ ಮತ್ತು ಆಯುರ್ವೇದ ವಿಷಯಗಳ ಪ್ರೊಫೆಸರ್.

ಫ್ರಾಲಿ ಅವರನ್ನು ಅಮೆರಿಕದ ಹಿಂದು ಹಾಗೂ ಪಶ್ಚಿಮದ ಬಹುಮುಖ್ಯ ವೇದಾಚಾರ್ಯ ಎಂದು ಗುರುತಿಸಲಾಗುತ್ತದೆ. ಕ್ಯಾಥೋಲಿಕ್ ಕುಟುಂಬದಲ್ಲಿ ಹುಟ್ಟಿದ ಅವರು ಹಿಂದುವಾಗಿ ಮತಾಂತರ ಆದದ್ದರ ನಡುವಿನ ಆಧ್ಯಾತ್ಮಿಕ ಪಯಣ ಅವರ *ನಾನ್ಹೇಗೆ ಹಿಂದುವಾದೆ* ಪುಸ್ತಕದಲ್ಲಿ ಚಿತ್ರಿತವಾಗಿದೆ. ಸಂಸ್ಕೃತ ಮತ್ತು ವೇದಗಳನ್ನು ಅಭ್ಯಾಸ ಮಾಡಿದ್ದಾರೆ. ಪ್ರಾಚೀನ ಬೌದ್ಧಿಕತೆಯ ಉಪನ್ಯಾಸಕರೂ ಆಗಿರುವ ಫ್ರಾಲಿ, ಭಾರತದಲ್ಲಿ ಬೃಹತ್ ಮಟ್ಟದಲ್ಲಿ ಉಪನ್ಯಾಸ ಶಿಬಿರ ನಡೆಸಲು ಪ್ರತಿ ವರ್ಷ ಪ್ರವಾಸ ಕೈಗೊಳ್ಳುತ್ತಾರೆ. ವಿಶ್ವವಿದ್ಯಾಲಯಗಳು ಮತ್ತು ಹಿಂದೂ ಸಮಾವೇಶಗಳಲ್ಲಿ ನೀಡುವ ವಿದ್ವತ್‌ಪೂರ್ಣ ಉಪನ್ಯಾಸಗಳಿಂದ ಪ್ರಸಿದ್ಧರಾಗಿದ್ದಾರೆ. ಡಾ. ಡೇವಿಡ್ ಫ್ರಾಲಿ ಪಶ್ಚಿಮ ದೇಶಗಳಲ್ಲಿ ಹಿಂದೂ ಧರ್ಮ, ಯೋಗ, ಆಯುರ್ವೇದದ ಅಧಿಕೃತ ವಕ್ತಾರ ಎಂದೇ ಹೇಳಬಹುದು. ಅಮೆರಿಕ ವೇದಾಧ್ಯಯನ ಸಂಸ್ಥೆಯ ಸಂಸ್ಥಾಪಕ ನಿರ್ದೇಶಕರಾಗಿರುವ ಫ್ರಾಲಿ, ವೇದಪಾರಂಗತ ಮಾತ್ರವಲ್ಲ ಜ್ಯೋತಿಷಿಯೂ ಹೌದು. ಹುಟ್ಟಿನಿಂದ ಕ್ಯಾಥೋಲಿಕ್; ಈಗ ವಾಮದೇವ ಶಾಸ್ತ್ರಿ, 'ಹೌ ಐ ಬಿಕೇಮ್ ಎ ಹಿಂದೂ' ಹೆಸರಿನ ಪುಸ್ತಕ ಅವರ ಆಧ್ಯಾತ್ಮ ಯಾತ್ರೆಯ ಚಿತ್ರಣ ನೀಡುವ ಬಹುಚರ್ಚಿತ ಕೃತಿ. ಅಮೆರಿಕದಲ್ಲಿ ನೆಲೆಸಿರುವ ವಿದ್ಯಾಸಾಗರ ಶರ್ಮ ಫ್ರಾಲಿ ಅವರನ್ನು ಸಂದರ್ಶಿಸಿದ್ದಾರೆ.

ಅಮೆರಿಕದ ಪಶ್ಚಿಮ ಒರಟು, ಬರಡು; ಸಾಹಸಿಗಳಿಗೆ ಮಾತ್ರ ಒಗ್ಗುವ ಸೊಕ್ಕಿನ ನೆಲ. ಜನವಿರಳ ವಿಶಾಲ ಬಯಲು, ಕಣಿವೆಗಳ ಗುಚ್ಛೆಲ್ಲ ಘನೀಕರಿಸಿದಂತೆ ತಲೆಯೆತ್ತಿ ನಿಂತ ರಾಕಿ ಪರ್ವತ ಶ್ರೇಣಿ. ನಡುವೆ ಮೈಚೆಲ್ಲಿದ ಸ್ಯಾಂಟಫೆ ಪಟ್ಟಣದ ಪುಟ್ಟ ಬೆಟ್ಟವೊಂದರ ಮೇಲೆ ನೆಲೆ ನಿಂತ ಈತ ಎಲ್ಲ ಅಮೆರಿಕನ್ನರಂಥಲ್ಲ. ಕಾಂಚಾಣ, ಕಾರು, ಮಹಲುಗಳ ಕಡಾಯಿಯಲ್ಲಿ ನಿತ್ಯ ಬೇಯುವ ಬದಲು ಎದೆಯಾಳದ ಕುದಿತಕ್ಕೆ ಉತ್ತರ ಹುಡುಕುವಾತ. ವೇದ, ಉಪನಿಷತ್ತುಗಳ ವಿಚಾರಧಾರೆಗೆ, ಯೋಗ, ಅಧ್ಯಾತ್ಮಿಕ ಸಾಧನೆಯ ಕಠಿಣ ಸವಾಲಿಗೆ ಒಡ್ಡಿಕೊಂಡ ಗಟ್ಟಿಗ. ಭಾರತಕ್ಕೆ ಬಂದು ಸಂಸ್ಕೃತ ಕಲಿತು ನಮ್ಮ ಪ್ರಾಚೀನ ಜ್ಞಾನಭಂಡಾರದಲ್ಲಿ ಮುಳುಗು ಹಾಕಿದ ಮಹಾಯಾತ್ರಿ. ಭೋಗಾಸಕ್ತ ಪಶ್ಚಿಮದಲ್ಲಿ ಪರಬ್ರಹ್ಮ ತತ್ವದ ಪತಾಕೆ ಹಾರಿಸುವ ಛಲಗಾರ ಈ ಸ್ಯಾಂಟಫೆಯ ಸಂತ!

ಕ್ರೈಸ್ತನಾಗಿ ಹುಟ್ಟಿ ಹಿಂದೂ ಧರ್ಮವನ್ನು ಆದರದಿಂದ ಅಂಗೀಕರಿಸಿದ ಡಾ. ಡೇವಿಡ್ ಫ್ರಾಲಿ ಬಾಯಾರಿ ಬಿರಿದ ನೆಲದಲ್ಲಿ ಪೌರ್ವಾತ್ಯ ಚಿಂತನೆಯ ಬೆಳೆ ತೆಗೆಯ ಹೊರಟ ಸಾಹಸಿ. ಅವರ ಮನೆ ಮಾದರಿ ಹಿಂದೂ ಮನೆ. ಪುಟ್ಟ ಕಿಟಕಿಯ ಮೇಲೆ ನಟರಾಜ, ಕಪಾಟಿನ ಮೇಲೆ ಕಾಳಿಂಗಮರ್ದನ ಕೃಷ್ಣ. ವಿಶಾಲ ಪಡಸಾಲೆಯ ದೇವರ ಗೂಡಿನಲ್ಲಿ ಮಣ್ಣಿನಿಂದ ಮಾಡಿದ ಶ್ರೀಚಕ್ರ. ಮಲಗುವ ಕೋಣೆಯಲ್ಲಿ ಶಿವ, ಪಾರ್ವತಿ, ದಿಂಬಿನ ಮೇಲೆ ಓಂಕಾರದ ಕಸೂತಿ. ಅಡುಗೆ ಕೋಣೆಯ ಹೂಕುಂಡ, ಉದ್ಯಾನದ ನಡುವಿನ ಗೂಡುಗಳಲ್ಲಿ ಕಂಚಿನ ದೇವತಾಮೂರ್ತಿಗಳು. ಧ್ಯಾನಕ್ಕೆಂದು ಗಾಜು ಮಾಡಿನ ಸುಂದರ ಕೊಠಡಿ. 'ದೇವರಿಲ್ಲದ ತಾಣ' ಹುಡುಕುವುದು ಅವರ ಮನೆಯಲ್ಲಿ ಕಷ್ಟದ ಮಾತು.

ಕ್ಯಾಥೊಲಿಕ್ಕರಾಗಿ ಜನ್ಮತಳೆದ ಡಾ. ಫ್ರಾಲಿ ಅವರನ್ನು ಹಿಂದೂ ಧರ್ಮದತ್ತ ಸೆಳೆದದ್ದು 'ತತ್ವಮಸಿ (ತತ್ ತ್ವಂ ಅಸಿ)' ಎಂಬ ಉಪನಿಷತ್ತುಗಳ ಧೀರೋದಾತ್ತ ಕರೆ. ಬಾಲ್ಯದಲ್ಲಿ ಬರಸೆಳೆದ ಚರ್ಚ್, ಬೆಳೆವ ವಯಸಿನ ಹಸಿವನ್ನು ಇಂಗಿಸುವಲ್ಲಿ ವಿಫಲ. ಆಗ ಹೃದಯತುಂಬಿದ್ದು ಅರವಿಂದ, ರಮಣ ಮಹರ್ಷಿ, ವಿವೇಕಾನಂದರ ವಿಚಾರ. ಅರವತ್ತರ ದಶಕದಲ್ಲಿ ಶುಷ್ಕ ಎಡಪಂಥೀಯತೆ, ವೇದಾಂತದ ಮಧ್ಯೆ ತುಯ್ಯುತ್ತಿದ್ದ ಮನಸ್ಸು ಕೊನೆಗೆ ಆರಿಸಿಕೊಂಡದ್ದು ಸನಾತನ ಧರ್ಮ. ಹುಡುಗಾಟದ ವಯಸ್ಸಿನಲ್ಲಿ ತನ್ನತನದ ಹುಡುಕಾಟ ಆರಂಭಿಸಿದ ಡಾ. ಫ್ರಾಲಿ, ಹಿಂದೂ ತತ್ವಗಳಲ್ಲಿ ಭಾರತೀಯ ವಿದ್ವಾಂಸರೂ ಅಚ್ಚರಿ ಪಡುವಷ್ಟು ಪ್ರಾವೀಣ್ಯ ಸಾಧಿಸಿದರು. ಪಶ್ಚಿಮದ ಕ್ರೈಸ್ತ ಕಡಲಿನ ಮಧ್ಯೆ ವೇದಾಂತದ ದೀಪಸ್ತಂಭವಾಗಿ ಬೆಳೆದು ನಿಂತರು.

ಕ್ರೈಸ್ತ ಧರ್ಮ ತ್ಯಜಿಸಿ ಮನಸು, ಬುದ್ಧಿ, ಒಪ್ಪಿದ ಹಿಂದೂ ವಿಚಾರಗಳನ್ನು ಅಪ್ಪಿ ವಾಮದೇವ ಶಾಸ್ತ್ರಿ ಎಂದು ಹೆಸರು ಬದಲಿಸಿಕೊಂಡ ಡಾ. ಫ್ರಾಲಿ ವೇದ, ಉಪನಿಷತ್, ಯೋಗಗಳಲ್ಲಿ ಪಂಡಿತ. ಹಿಂದೂ ವಿಚಾರಗಳ ಬಗ್ಗೆ ವಿಶ್ವಾಸಪೂರ್ಣವಾಗಿ, ನಿರರ್ಗಳ

ವಾಗಿ ಮಾತಾಡಬಲ್ಲ ವಕ್ತಾರ. ಈಚೆಗೆ ಭಾರತದಲ್ಲಿ ಅವಾಂತರ ಎಬ್ಬಿಸಿರುವ ಮತಾಂತರದ ಬಗ್ಗೆ ಅವರು ಏನೆನ್ನುತ್ತಾರೆ ಎಂಬ ಕುತೂಹಲ ಮನ ಹೊಕ್ಕಿತ್ತು. ಅಮೆರಿಕಕ್ಕೆ ಭೇಟಿ ನೀಡಿರುವ ಗದಗದ ರಾಮಕೃಷ್ಣ ವಿವೇಕಾನಂದ ಆಶ್ರಮದ ಸ್ವಾಮಿ ನಿರ್ಭಯಾನಂದರು ಡಾ. ಫ್ರಾಲಿ ಅವರನ್ನು ಭೇಟಿಯಾಗುವ ಉತ್ಸಾಹ ತೋರಿದಾಗ ಕುತೂಹಲಕ್ಕೆ ರೆಕ್ಕೆ ಬಂತು. ಡೆನ್ವರ್‌ನಿಂದ ಸ್ಯಾಂಟಫೆಗೆ ಪಯಣಿಸುತ್ತಿದ್ದಂತೆ ಭಾರತದಿಂದ ನುಗ್ಗಿಬಂದ ಮತಾಂತರದ ಸುದ್ದಿ ಮುಸ್ಸಂಜೆಯ ಬೆಟ್ಟಸಾಲಿನ ನೆರಳಿನಂತೆ ಸುತ್ತ ಆವರಿಸುತ್ತಿತ್ತು.

ಡಾ. ಫ್ರಾಲಿ ಅವರೊಡನೆ ಎರಡು ತಾಸಿಗೂ ಹೆಚ್ಚು ಕಾಲ ಅನೌಪಚಾರಿಕವಾಗಿ ಮಾತನಾಡಿದಾಗ ಹಿಂದೂ ಧರ್ಮದ ಬಗೆಗಿನ ನೈಜ ಶ್ರದ್ಧೆ, ಕಾಳಜಿ ಬೆರಗು ಹುಟ್ಟಿಸಿತು. ಈ ಸಂದರ್ಶನ ಅವರ ವಿಚಾರಧಾರೆಯ ಹೊಳಹು.

## ಸಂದರ್ಶನ

*ಪ್ರಶ್ನೆ:* ಹುಟ್ಟಿನಿಂದ ಕ್ರೈಸ್ತನಾಗಿ, ಮತಾಂತರಿತ ಹಿಂದೂವಾಗಿ ಈಚೆಗೆ ಭಾರತದಲ್ಲಿ ಎದ್ದಿರುವ ಮತಾಂತರ ವಿವಾದದ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?

*ಡಾ. ಫ್ರಾಲಿ:* (ಒಂದರೆಕ್ಷಣ ಯೋಚಿಸುತ್ತಾ) ಭಾರತದಲ್ಲಿ ಏನಾಗುತ್ತಿದೆ ಎಂಬುದು ನನಗೆ ಸಂಪೂರ್ಣ ಗೊತ್ತು ಎನ್ನಲಾರೆ. ಭಾರತಕ್ಕೆ ಹೋಗಿ ಒಂದೆರಡು ವರ್ಷಗಳೇ ಆಗಿವೆ. ಆದರೆ ಭಾರತದ ಮಾಧ್ಯಮಗಳು ತುಂಬ ಕ್ರೈಸ್ತರ ಪರ ಎಂಬುದನ್ನು ಬಲ್ಲೆ. ಕ್ರೈಸ್ತ ಮತಪ್ರಚಾರಕರು ಹೋದಲ್ಲೆಲ್ಲ ಬೈಬಲ್ ಹಾಗೂ ಬಿಕ್ಕಟ್ಟು ಅವರನ್ನು ಹಿಂಬಾಲಿಸುತ್ತವೆ. ಈ ಮತಪ್ರಚಾರಕರು ಸ್ಥಳೀಯ ಸಂಸ್ಕೃತಿಯನ್ನು ಗೌರವಿಸುವುದಿಲ್ಲ; ಅವಹೇಳನ ಮಾಡುತ್ತಾರೆ. ಕ್ರೈಸ್ತರು ಮಾತ್ರ ಸ್ವರ್ಗಕ್ಕೆ, ಇತರರೆಲ್ಲ ನರಕಕ್ಕೆ ಎಂಬ ಅವರ ಬೋಧನೆ ಸಮಾಜದಲ್ಲಿ ಸಹಜವಾಗಿಯೇ ಬಿರುಕೆಬ್ಬಿಸುತ್ತದೆ. ಆಫ್ರಿಕಾ, ಅಮೆರಿಕಗಳಲ್ಲಿ ಹಿಂದೆ ಆದದ್ದೂ ಅದೇ. ಆಫ್ರಿಕದ ನಾನಾ ಬುಡಕಟ್ಟುಗಳ ನಡುವೆ ಇಂದು ಕಾಣುವ ವೈಷಮ್ಯಕ್ಕೆ ಈ ಕ್ರೈಸ್ತ ಮಿಷನರಿಗಳ ಚಟುವಟಿಕೆಗಳೇ ಕಾರಣ.

ಮತಾಂತರಕ್ಕಾಗಿ ಮಿಶನರಿಗಳು ವಿಪರೀತ ಹಣದೊಡನೆ ಬಡ ದೇಶಗಳಿಗೆ ಹೋದಾಗ ಭ್ರಷ್ಟಾಚಾರ ಅನಿವಾರ್ಯ. ಅವರ ಕೆಲಸಗಳ ಮೇಲೆ, ಸ್ಥಳೀಯರ ಜತೆಗಿನ ಅವರ ವರ್ತನೆಯ ಬಗ್ಗೆ ನಿಗಾ ಅವಶ್ಯ. ಕೆಲವು ವರ್ಷಗಳ ಹಿಂದೆ ಮೇಘಾಲಯಕ್ಕೆ ಹೋದಾಗ ಅಲ್ಲಿನ ಪುಟ್ಟ ಬೆಟ್ಟವೊಂದರ ಮೇಲೆ ಭಾರೀ ಚರ್ಚ್ ಕಂಡೆ. ಅಲ್ಲಿ ಭಾರೀ ಸಂಖ್ಯೆಯಲ್ಲಿ

ಕ್ರೈಸ್ತರು ಇರಬಹುದು ಎಂದೆಣಿಸಿ ಸ್ಥಳೀಯ ಗಿರಿಜನ ಹಿಂದೂಗಳನ್ನು ಪ್ರಶ್ನಿಸಿದಾಗ ಅವರು ಹೇಳಿದ್ದಿದು- 'ಇಲ್ಲಿ ಕ್ರೈಸ್ತರ ಸಂಖ್ಯೆ ಬೆರಳೆಣಿಕೆ ಯಷ್ಟು. ಆದರೆ ವಿದೇಶಗಳಿಂದ ಅವರಿಗೆ ವಿಪರೀತ ಹಣ ಬರುತ್ತದೆ. ಎಲ್ಲೆಂದರಲ್ಲಿ ಭಾರೀ ಚರ್ಚ್ ಕಟ್ಟುತ್ತಾರೆ'. ಸ್ಥಳೀಯರಲ್ಲಿ ತಮ್ಮ ಪರಿಸರ ವನ್ನು ಕಲಕಿದ ಮಿಷನರಿಗಳ ಬಗ್ಗೆ ಅಸಮಾಧಾನ ಹೊಗೆಯಾಡುತ್ತಿತ್ತು.

ಪ್ರ: ಮತಾಂತರದ ವಿರುದ್ಧ ಪ್ರತಿಭಟನೆ, ಚರ್ಚ್‌ಗಳ ಮೇಲಿನ ದಾಳಿಯ ಮೂಲಕ ಹಿಂಸೆಗೆ ತಿರುಗಿರುವುದು ಸರಿಯೇ?

ಉ: ಹಿಂದೂಗಳು ಎಂದಿಗೂ ಹಿಂಸೆಯ ವಿರುದ್ಧ. ಹಾಗಂತ ಅವರು ಮತ್ತೊಂದು ಧರ್ಮದಿಂದ ಆಗುವ ಅನ್ಯಾಯಗಳ ವಿರುದ್ಧ ಪ್ರತಿಭಟಿಸಬಾರದು ಎಂದಲ್ಲ. ಹಿಂಸೆಗೆ ಕಾರಣ ಹಲವು. ಮೂಲತಃ ಹಿಂಸೆಗೆ ಬಲವಂತ ಮತಾಂತರದ ಯತ್ನಗಳೇ ಕಾರಣ. ಈ ವಿಷಯವನ್ನು ಹಲವು ಕ್ರೈಸ್ತರೂ ಒಪ್ಪಿದ್ದಾರೆ. ಹಿಂದೂಗಳು ಹಿಂಸೆಗೆ ಇಳಿಯಬಾರದು; ಆದರೆ ಇತರರು ತಮ್ಮ ಧರ್ಮದ ಅವಹೇಳನ ಮಾಡುವುದನ್ನು, ತಮ್ಮ ಧರ್ಮದ ಮೇಲೆ ಆಕ್ರಮಣ ಮಾಡುವುದನ್ನು ಅಹಿಂಸೆಯ ಹೆಸರಿನಲ್ಲಿ ಸಹಿಸಬಾರದು. ಹಾಗೆ ನೋಡಿದರೆ ಅಮೆರಿಕದಲ್ಲಿ ಜನಾಂಗೀಯ ಘರ್ಷಣೆಗಳಲ್ಲಿ ಬಿಳಿಯ ಜನರ ದಾಳಿಯಿಂದ ಸುಟ್ಟುಹೋದ ಕಪ್ಪು ಜನರ ಚರ್ಚ್‌ಗಳ ಸಂಖ್ಯೆ ಭಾರತದಲ್ಲಿ ದಾಳಿಗೊಳಗಾದ ಚರ್ಚ್‌ಗಳ ಸಂಖ್ಯೆಗಿಂತ ಅಧಿಕ. ಆದರೆ ಅದನ್ನಾರೂ ಗಮನಿಸುವುದಿಲ್ಲ. ಪಶ್ಚಿಮದ ಪತ್ರಿಕೆ, ಟಿವಿಗಳಲ್ಲಿ ಚರ್ಚ್ ದಾಳಿಯ ಸುದ್ದಿ ಬರುತ್ತದೆ; ಆದರೆ ಸ್ವಾಮಿ ಲಕ್ಷ್ಮಣಾನಂದ ಸರಸ್ವತಿಗಳ ಹತ್ಯೆಯ ಪ್ರಸ್ತಾಪವೇ ಇರುವುದಿಲ್ಲ.

ಯಾವುದೇ ವಿವಾದ ಹಿಂಸೆಗೆ ತಿರುಗಿದ ತಕ್ಷಣ ಹಿಂದೂಗಳು ಮುದುಡಿ ಕೊಳ್ಳುತ್ತಾರೆ; ಮೌನಕ್ಕೆ ಮೊರೆ ಹೋಗುತ್ತಾರೆ. ತಮ್ಮ ಮೇಲೆ ಹಿಂಸೆಯ ಆಪಾದನೆ ಬಂದರಂತೂ ಸೋಲೊಪ್ಪಿದಂತೆ ಹಿಂದೆಗೆದು ಅನ್ಯರಿಗೆ ಶರಣಾಗು ತ್ತಾರೆ. ಈ ಮನೋವೃತ್ತಿಯ ಪರಿಣಾಮ ಪುನಃ ಪುನಃ ಹಿಂದೂಗಳ ಮೇಲೆ ಆಕ್ರಮಣವಾಗುತ್ತದೆ. ಹಾಗಾಗಿ ಹಿಂದೂಗಳ ಮೇಲೆ ಹಿಂಸೆಯ ಆರೋಪ ಹೊರಿಸುವುದು ಒಂದು ಬಗೆಯಲ್ಲಿ ಅವರನ್ನು ಹಿಮ್ಮೆಟ್ಟಿಸುವ ತಂತ್ರ. ಹಿಂದೂ ಸಮುದಾಯ ತನಗಾಗುತ್ತಿರುವ ಅನ್ಯಾಯದ ವಿರುದ್ಧ ದನಿ ಎತ್ತಿದ ಕೂಡಲೇ ಮುಸಲ್ಮಾನರು ಗಾಂಧೀಜಿ ಸಂದೇಶಗಳ ಸ್ಮರಣೆ ಆರಂಭಿಸುತ್ತಾರೆ; ಆದರೆ ಇತರ ಸಂದರ್ಭಗಳಲ್ಲಿ

ಮುಸ್ಲಿಮರು, ಕ್ರೈಸ್ತರು ಗಾಂಧೀಜಿಯನ್ನು ಏಕೆ ಸ್ಮರಿಸುವುದಿಲ್ಲ? ಅವರ ಅಹಿಂಸಾ ಸಂದೇಶವನ್ನು ತಾವೇ ಏಕೆ ಪಾಲಿಸುವುದಿಲ್ಲ?

ಪ್ರ : ಕ್ರೈಸ್ತ ಮತಪ್ರಚಾರ ಭಾರತದಲ್ಲಿ ಹೊಸದೇನಲ್ಲ. ಆದರೆ ಹಿಂದಿನ ಪೋಪ್ ಜಾನ್‌ಪಾಲ್ ಅವರ ಬಹಿರಂಗ ಕರೆಯ ನಂತರ ಮತಪ್ರಚಾರದ ಬಿರುಸು ಹೆಚ್ಚಿದೆ. ವಿದೇಶಿಗಳಿಂದ ಬರುವ ಹಣ, ಮಿಷನರಿಗಳ ಸಂಖ್ಯೆಯೂ ಬಹಳ ಹೆಚ್ಚಿರುವ ದೂರುಗಳಿವೆ. ಈ ಬಗ್ಗೆ ನೀವೇನು ಹೇಳುತ್ತೀರಿ?

ಉ: ಕ್ರೈಸ್ತ ಮತ ಪ್ರಚಾರಕರಿಗೆ ಪ್ರವೇಶ ನೀಡುವ, ಮತಾಂತರಿಸಲು ಅವಕಾಶ ನೀಡುವ ಏಕೈಕ ಬೃಹತ್ ರಾಷ್ಟ್ರ ಭಾರತ. ಚೀನಾದೊಳಕ್ಕೆ ಇವರು ಕಾಲಿಡು ವಂತಿಲ್ಲ. ಸ್ವತಃ ಕ್ಯಾಥೋಲಿಕ್ ದೇಶವಾದ ರಷ್ಯಾ ಕೂಡ ಪೋಪ್‌ರನ್ನು ಒಳ ಬರಗೊಡುವುದಿಲ್ಲ. ಪ್ರಪಂಚದ ಯಾವ ಮುಸ್ಲಿಮ್ ದೇಶವೂ ಕ್ರೈಸ್ತ ಮತಪ್ರಚಾರಕರನ್ನು ಒಳಗೆ ಸೇರಿಸಿಕೊಳ್ಳುವುದಿಲ್ಲ.

ಭಾರತ ತಮಗೆ ಪ್ರವೇಶ ನೀಡಿರುವುದಕ್ಕೆ ಕೃತಜ್ಞರಾಗಿರುವ ಬದಲು ಕ್ರೈಸ್ತ ಮತಪ್ರಚಾರಕರು ಮತಾಂತರದಲ್ಲಿ ತೊಡಗಿ ಗಲಭೆ, ಗಲಾಟೆ ಎಬ್ಬಿಸಿ ತಮಗೇನೊ ಅನ್ಯಾಯವಾಗಿದೆ ಎಂಬಂತೆ ಹುಯಿಲೆಬ್ಬಿಸುತ್ತಿದ್ದಾರೆ. ಇವರೆಲ್ಲ ಚೀನಾಗೆ ಹೋಗಿ ತಮಗೆಂತ ಸ್ವಾಗತ ಸಿಕ್ಕೀತು? ನೋಡಲಿ. ಇಂಡೋನೇಷಿಯಾ, ಪಾಕಿಸ್ತಾನ, ಸೌದಿ ಅರೇಬಿಯಾಗಳಿಗೆ ಹೋಗಿ ಮತಾಂತರ ಮಾಡಲಿ ನೋಡೋಣ. ಒಲವು ಯಾರ ಸ್ವತ್ತು?

ಪ್ರ: ಮತಾಂತರ ದೇವರ ಕಾರ್ಯ, ತಾವು ದೇವರ ಪ್ರೀತಿಯ ವಾಹಕರು ಎಂದು ಈ ಮತಪ್ರಚಾರಕರು ಹೇಳುತ್ತಾರಲ್ಲ?

ಉ: ದೇವರ ಒಲವು ಯಾರ ಸ್ವತ್ತೂ ಅಲ್ಲ. ದೇವರು ಜಗತ್ತನ್ನು ಸೃಷ್ಟಿಸಿದ ಎಂದು ಕ್ರೈಸ್ತರು ಹೇಳುತ್ತಾರೆ; ದೇವರು ಬೇರೆ, ಬೇರೆ ಧರ್ಮಗಳ ಜನರನ್ನು ಸೃಷ್ಟಿಸಿದ ತಾನೇ? ತನ್ನ ಸೃಷ್ಟಿಯ ಸಮಸ್ತರನ್ನೂ ದೇವರು ಪ್ರೀತಿಸುತ್ತಾನೆ ಎಂದಲ್ಲವೇ ಅದರರ್ಥ? ಹಿಂದೂಗಳಿಗೆ ದೇವರ ಪ್ರೀತಿ ಅಲಭ್ಯ ಎಂದು ಮಿಷನರಿಗಳು ಹೇಗೆ ಹೇಳುತ್ತಾರೆ? ಅಮೆರಿಕ, ಯುರೋಪ್, ದಕ್ಷಿಣ ಅಮೆರಿಕ, ಮತ್ತಿತರ ದೇಶಗಳಲ್ಲಿನ ಕ್ರೈಸ್ತರಲ್ಲಿ ಬಡತನ, ರೋಗ, ಮಾದಕ ವಸ್ತು ವ್ಯಸನ ಇತ್ಯಾದಿ ಪೀಡೆಗಳು ವ್ಯಾಪಕವಾಗಿವೆ. ಈ ಮಿಷನರಿಗಳು ತಮ್ಮವರೇ ಆದ ಈ ಜನರ ನಡುವೆ ಹೋಗಿ ಅವರಿಗೆ ಸಹಾಯ ಮಾಡು ವುದಿಲ್ಲ ಏಕೆ? ಹಿಂದೂಗಳನ್ನು ಬಲಾತ್ಕಾರದಿಂದ ಮತಾಂತರ ಮಾಡುವು ದೇಕೆ?

ಮಿಷನರಿಗಳು ಎಂದಾದರೂ ಹಿಂದೂ, ಬೌದ್ಧ ಧರ್ಮಗಳ ಅಧ್ಯಯನ ಮಾಡಿದ್ದಾರೆಯೆ? ಅವುಗಳ ಸಿದ್ಧಾಂತ, ಬೋಧನೆ ಏನೆಂಬುದು ಅವರಿಗೆ ತಿಳಿದಿದೆಯೆ? ಮೊದಲು ಹಿಂದೂ ಹಾಗೂ ಇತರ ಪೌರ್ವಾತ್ಯ ಧರ್ಮಗಳ ಆಚಾರ, ವಿಚಾರಗಳನ್ನು ಇವರು ಅರ್ಥ ಮಾಡಿಕೊಳ್ಳಲಿ. ತಮ್ಮ ನಂಬಿಕೆ, ಧರ್ಮಗಳನ್ನು ಹಿಂದೂಗಳ ಮೇಲೆ ಹೇರುವುದು ಬೇಡ. 'ನಿಮಗಿಂತ ನಾವು ಉತ್ತಮ. ನಿಮ್ಮಲ್ಲಿರುವುದಕ್ಕಿಂತ ಅಮೂಲ್ಯವಾದದ್ದನ್ನೇನೋ ಕೊಡುತ್ತೇವೆ' ಎಂದು ಹಿಂದೂಗಳಿಗೆ ಹೇಳುವುದು ದುರಹಂಕಾರ. ಇತರರ ಧರ್ಮಗಳನ್ನು ಬುಡಮೇಲು ಮಾಡಲು ಹೊರಡುವ ಮುನ್ನ ಕ್ರೈಸ್ತ ಮತ ಪ್ರಚಾರಕರು ಇತರರ ಧರ್ಮ, ವಿಚಾರಗಳನ್ನು ಅರಿತು ಗೌರವ ಕೊಡಲಿ.

ಪ್ರ: ಮತಾಂತರದಿಂದಾಗಿ ಭಾರತದ ಸ್ವರೂಪವೇ ಬದಲಾಗುತ್ತಿದೆ. ಜಿಹಾದಿ ಭಯೋತ್ಪಾದಕತೆ ಹಾಗೂ ಬಲಾತ್ಕಾರದ ಮತಾಂತರ ಭಾರತ ಹಾಗೂ ಹಿಂದೂ ಧರ್ಮಕ್ಕೆ ಒದಗಿರುವ ದೊಡ್ಡ ವಿಪತ್ತುಗಳು ಎಂಬ ಭಾವನೆ ಹಲವರಲ್ಲಿದೆಯಲ್ಲಾ?

ಉ: ಜಗತ್ತಿನ ಹಲವು ದೇಶಗಳು ಮತಾಂತರವನ್ನು ಒಂದು ಆಪತ್ತು ಎಂದೇ ಭಾವಿಸುತ್ತವೆ. ರಷ್ಯಾ, ಯೂರೋಪ್, ಅಮೆರಿಕ ಎಲ್ಲೆಡೆ ಮತಾಂತರದ ಬಗ್ಗೆ ಆತಂಕವಿದೆ. ಅಮೆರಿಕದಲ್ಲಿ ಬೈಬಲ್ ಮೂಲದ್ದಲ್ಲದ ಧರ್ಮಗಳ ಮೇಲೆ ಹೆಚ್ಚಿನ ಕಟ್ಟುಪಾಡುಗಳಿವೆ. ವಿಭಿನ್ನಮತ, ಸಂಪ್ರದಾಯಗಳನ್ನು ಪುರಸ್ಕರಿಸುವ ಭಾರತದಂತಹ ಉದಾರ, ಬಹುಪಂಥೀಯ ದೇಶಕ್ಕೆ ಒಂದು 'ನಮ್ಮ ಧರ್ಮವೊಂದೇ ಸತ್ಯ, ಮಿಕ್ಕದ್ದೆಲ್ಲ ಮಿಥ್ಯ' ಎನ್ನುವುದು ಭಾರತದ ಮೂಲ ತತ್ತ್ವಕ್ಕೇ ದ್ರೋಹ ಬಗೆದಂತೆ. ದೇವರನ್ನು ತಲುಪಲು ದಾರಿ ಹಲವು ಎನ್ನುವ ಭಾರತೀಯ ಪರಂಪರೆಗಳು ಕ್ರೈಸ್ತರು ಮತಾಂತರದಲ್ಲಿ ತೊಡಗುವುದರಿಂದ ಆತಂಕ ಪಡುವುದು, ಭೀತರಾಗುವುದು ಸಹಜ. ಇಷ್ಟೇ ಅಲ್ಲ, ಅನ್ಯ ಧರ್ಮಗಳ ಜನರಲ್ಲಿ ತಮ್ಮ ಸಂಖ್ಯೆ ಬೆಳೆದಂತೆ ಪ್ರತ್ಯೇಕ ದೇಶ ಕೇಳುವ ಪ್ರವೃತ್ತಿ ಇದೆ. ಧರ್ಮದ ಆಧಾರದ ಮೇಲೆಯೇ ಈ ಹಿಂದೆ ಭಾರತದ ವಿಭಜನೆಯೂ ಆಗಿದೆ. ಇನ್ನು ಭಯೋತ್ಪಾದನೆಯ ವಿಷಯಕ್ಕೆ ಬಂದರೆ ಬಹುತೇಕ ಭಯೋತ್ಪಾದಕರು ಒಂದೇ ದರ್ಮಕ್ಕೆ ಸೇರಿದವರು ಎಂಬುದೂ ಗಮನಾರ್ಹ. ಈ ಭಯೋತ್ಪಾದಕರು ಆ ಧರ್ಮದ ಪ್ರತಿನಿಧಿಗಳು ಹೌದೋ ಅಲ್ಲವೋ ಎಂಬುದು ಬೇರೆ ಪ್ರಶ್ನೆ. ಆ ಬಗ್ಗೆ ಚರ್ಚೆ ನಡೆಯಲಿ. ಆದರೆ ಬಹುತೇಕ ಭಯೋತ್ಪಾದಕರು ಒಂದು ನಿರ್ದಿಷ್ಟ ಧರ್ಮಕ್ಕೆ ಸೇರಿದವರೆಂಬುದಂತೂ ನಿಜ ತಾನೇ?

ಪ್ರ: ಹಾಗಾದರೆ ಮತಾಂತರ ಭಾರತದ ಸಮಗ್ರತೆ ಮತ್ತು ಏಕತೆಗೆ ಕುತ್ತು ತಂದೊಡ್ಡುತ್ತಿದೆ ಎಂಬ ವಾದದಲ್ಲಿ ಹುರುಳಿದೆ ಎನ್ನುತ್ತೀರಾ?

ಉ: ಭಾರತದ ಸಂಸ್ಕೃತಿ, ಸಂಪ್ರದಾಯ ಮತ್ತು ಇತಿಹಾಸಕ್ಕೆ ಮತಾಂತರದಿಂದ ಆಪತ್ತು ಎದುರಾಗಿರುವುದು ನಿಜ. ವ್ಯಕ್ತಿಯ ಧರ್ಮಕ್ಕೂ ದೇಶದ ಸಮಗ್ರತೆಗೂ ಸಂಬಂಧವಿಲ್ಲ ಎಂದು ಕೆಲವರು ವಾದಿಸಬಹುದು. ಆದರೆ ರಾಷ್ಟ್ರವಿರೋಧಿ ಭಾವನೆ ಕೆಲವು ಧರ್ಮಕ್ಕೆ ಸೇರಿದ ಜನರಲ್ಲಿ ಹೆಚ್ಚು. ಪಾಕಿಸ್ತಾನ ಆ ಭಾವನೆಯ ಫಲ. ಇದು ಹೀಗೇ ಮುಂದುವರಿದರೆ ಹಲವು ಪುಟ್ಟ ಪುಟ್ಟ ಪಾಕಿಸ್ತಾನಗಳು ಹುಟ್ಟಿಕೊಳ್ಳುತ್ತವೆ ಎಂಬ ಭಯ ಬಹಳ ಜನರಲ್ಲಿದೆ. ಮುಸಲ್ಮಾನರನ್ನು ಭಾರತದಲ್ಲಿ ಬಹಳ ಚೆನ್ನಾಗಿ ನೋಡಿ ಕೊಳ್ಳಲಾಗುತ್ತದೆ ಎಂದೇನು ನಾನು ಹೇಳಲಾರೆ. ಆದರೆ ದೇಶದ ವಿಭಜನೆಯ ನಂತರ ಅವರ ಸಂಖ್ಯೆ ಹೆಚ್ಚಿದೆ. ಆದರೆ ಪಾಕಿಸ್ತಾನ, ಬಾಂಗ್ಲಾ ದೇಶಗಳಲ್ಲಿ ಹಿಂದೂಗಳು ನಾಮಾವಶೇಷರಾಗಿದ್ದಾರೆ. ದೇಶ ಮುಸ್ಲಿಮರ ಆಳ್ವಿಕೆಗೆ ಒಳಪಟ್ಟಾಗ ಹಿಂದೂಗಳ ಸರ್ವನಾಶ ಖಚಿತ; ಆಗ ಅವರಿಗಿರು ವುದು ಎರಡೇ ದಾರಿ. ಮತಾಂತರ, ಇಲ್ಲವೆ ದೇಶ ಬಿಟ್ಟು ಪಲಾಯನ. ಈ ಹಿನ್ನೆಲೆಯಲ್ಲಿ ಮತಾಂತರ ಮತ್ತು ಭಯೋತ್ಪಾದನೆ ಭಾರತದ ಏಕತೆಗೆ ಮತ್ತು ಹಿಂದೂಧರ್ಮದ ಉಳಿವಿಗೆ ವಿಪತ್ತು ಒಡ್ಡಿವೆ ಎಂಬ ಭಾವನೆ ಮೂಡುವುದು ಸಹಜ.

ಪ್ರ : ಹಿಂದೂಗಳು ಮತಾಂತರವನ್ನು ತಡೆಯುವುದು ಹೇಗೆ?

ಉ: ಹಲವು ವಿಧಗಳಿಂದ. ಮೊದಲನೆಯದಾಗಿ ಮತಾಂತರದಲ್ಲಿ ತೊಡಗುವ ಕ್ರೈಸ್ತ ಮಿಷನರಿಗಳ ಹಿನ್ನೆಲೆ, ಕಾರ್ಯ ವಿಧಾನವನ್ನು ಹಿಂದೂಗಳು ಅರ್ಥ ಮಾಡಿಕೊಳ್ಳಬೇಕು. ಅವರ ಬೋಧೆಯನ್ನು ಅರ್ಥ ಮಾಡಿಕೊಂಡು ಅದಕ್ಕೆ ತಿರುಗೇಟು ಕೊಡಬೇಕು. ಕ್ರೈಸ್ತ ಮತಪ್ರಚಾರಕರ ಬೋಧೆಯ ಸಾರಾಂಶ ಇಷ್ಟು; 'ಕ್ರೈಸ್ತ ಮತವೊಂದೇ ಸತ್ಯ; ಬೈಬಲ್ ಒಂದೇ ಪವಿತ್ರ ಗ್ರಂಥ; ಕ್ರೈಸ್ತ ಮತವೊಂದೇ ಸ್ವರ್ಗಕ್ಕೆ ಸೋಪಾನ'. ಈ ಬೋಧೆಯ ಪೊಳ್ಳುತನ ವನ್ನು ನಾವು ಜನರಿಗೆ ಮನವರಿಕೆ ಮಾಡಿಕೊಡಬೇಕು. ಕ್ರೈಸ್ತ ಮತಪ್ರಚಾರಕ ರಿಗೆ ಮತಾಂತರಕ್ಕೆಂದೇ ಭಾರೀ ಪ್ರಮಾಣದಲ್ಲಿ ಹಣ ಹರಿದು ಬರುತ್ತದೆ. ಸರಕಾರದ ಮಟ್ಟದಲ್ಲಿ, ವಿದೇಶಗಳಿಂದ ನುಗ್ಗಿ ಬರುವ ಈ ಹಣವನ್ನು ತಡೆಗಟ್ಟಬೇಕು. ಹಿಂದೂಗಳನ್ನು ಅಲಕ್ಷಿಸಿ ಅಲ್ಪಸಂಖ್ಯಾತರೆಂಬ ಹೆಸರಿನಲ್ಲಿ ಸದಾ ಕ್ರೈಸ್ತರು, ಮುಸ್ಲಿಮರಿಗೇ ಬೆಂಬಲ ಕೊಡುವ ರಾಜಕಾರಣಿಗಳ ಬದಲು ತಮ್ಮ ಭಾವನೆ, ಆಶಯಗಳಿಗೆ ಸ್ಪಂದಿಸುವ ಪಕ್ಷ, ವ್ಯಕ್ತಿಗಳಿಗೆ

ಹಿಂದೂಗಳು ಮತ ಹಾಕಬೇಕು. ಉದಾಹರಣೆಗೆ ಹಜ್ ಯಾತ್ರೆಗೆ ಹೋಗುವ ಮುಸ್ಲಿಮರಿಗೆ ಸಹಾಯಧನ ನೀಡುವ ಪ್ರಪಂಚದ ಏಕೈಕ ದೇಶ ಭಾರತ. ಹಿಂದೂ ದೇಗುಲಗಳಿಗೆ ಬರುವ ಕಾಣಿಕೆ ಹಣವೂ ಇದಕ್ಕೆ ವ್ಯಯವಾಗುತ್ತದೆ ಎಂಬ ದೂರುಗಳೂ ಇವೆ. ಯಾವ ಕ್ರೈಸ್ತ ಅಥವಾ ಮುಸ್ಲಿಮ್ ದೇಶವೂ ಈ ನೆರವು ಕೊಡುವುದಿಲ್ಲ. ಭಾರತ ಮಾತ್ರ ಏಕೆ ಕೊಡಬೇಕು?

ಚರ್ಚ್ ಉತ್ತಮ ಶಿಕ್ಷಣ ಒದಗಿಸುತ್ತದೆ ಎಂಬ ವಾದವಿದೆ. ಹಿಂದೂಗಳು ಇದಕ್ಕೆ ಪ್ರತಿಯಾಗಿ ತಮ್ಮದೇ ಆದ ಶ್ರೇಷ್ಠ ಶಿಕ್ಷಣ ಸಂಸ್ಥೆಗಳನ್ನು ಕಟ್ಟಬೇಕು; ಸರಕಾರದ ಶಾಲೆಗಳು ಉತ್ತಮ ಶಿಕ್ಷಣ ನೀಡುವಂತೆ ನೋಡಿಕೊಳ್ಳಬೇಕು. ಯಾವ ದೇಶವೂ ತನ್ನ ದೇಶದ ಅಲ್ಪಸಂಖ್ಯಾತರ ಊರುಗೋಲನ್ನು ಆಧರಿಸಿ ಏಳ್ಗೆಗೆ ಬರುವುದು ಅಸಾಧ್ಯ. ಏಷ್ಯಾದ ಅತ್ಯಂತ ಹಳೆಯ ಕ್ರೈಸ್ತ ದೇಶ ಫಿಲಿಪ್ಪೀನ್ಸ್ ಅತ್ಯಂತ ಬಡ ದೇಶ ಕೂಡಾ ಎಂಬುದನ್ನು ಎಲ್ಲ ಹಿಂದೂಗಳಿಗೆ ಮನವರಿಕೆ ಮಾಡಿಕೊಡಬೇಕು. ಜಪಾನ್ ದೇಶದ ಆರ್ಥಿಕ ಪ್ರಗತಿಗೆ ಅದರ ಶಕ್ತ ಅರ್ಥ ನೀತಿ ಕಾರಣ. ಧರ್ಮಕ್ಕೂ, ದೇಶದ ಆರ್ಥಿಕ ಸ್ಥಿತಿಗೂ ಸಂಬಂಧವಿಲ್ಲ.

ಪ್ರ: ಮತಾಂತರ ತಡೆಯುವಲ್ಲಿ ಅನಿವಾಸಿ ಹಿಂದೂಗಳ ಪಾತ್ರ ಏನು?

ಉ: ಮತಾಂತರಕ್ಕೆ ಕ್ರೈಸ್ತರು ಬಳಸುವ ಮುಖ್ಯ ತಂತ್ರ 'ಹಿಂದೂ ಧರ್ಮ ಹಿಂದುಳಿದದ್ದು; ಕ್ರೈಸ್ತರಾಗುವ ಮೂಲಕ ನೀವು ಹೆಚ್ಚು ಹಣ ಗಳಿಸಬಹುದು' ಎಂಬ ಅಪಪ್ರಚಾರ. ಆದರೆ ವಿದೇಶಗಳಲ್ಲಿ ನೆಲೆಸಿರುವ ಹಿಂದೂಗಳು ಯಶಸ್ಸಿನ ಶಿಖರ ಮುಟ್ಟಿದ್ದಾರೆ. ಅಮೆರಿಕ, ಇಂಗ್ಲೆಂಡ್ ಹಾಗೂ ಕೆನಡಾ ದೇಶಗಳ ಹಿಂದೂಗಳು ಅಲ್ಲಿನ ಅತ್ಯಂತ ಶ್ರೀಮಂತ ಜನಸಮುದಾಯ. ಸ್ಥಳೀಯ ಕ್ರೈಸ್ತರಿಗಿಂತ ಅವರು ಹಣವಂತರು, ಸುಶಿಕ್ಷಿತರು. ಆರ್ಥಿಕ ಪ್ರಗತಿ, ಅವನತಿಗೆ ಧರ್ಮ ಕಾರಣವಲ್ಲ ಎಂಬುದನ್ನು ಸಾಗರದಾಚೆಯ ಹಿಂದೂಗಳು ಸಾಧಿಸಿ ತೋರಿಸಿದ್ದಾರೆ. ಆರ್ಥಿಕ ಯಶಸ್ಸು ಗಳಿಸಿರುವ ಅನಿವಾಸಿ ಹಿಂದೂಗಳು ಭಾರತದಲ್ಲಿನ ಹಿಂದೂಗಳ ಶೈಕ್ಷಣಿಕ, ಆರ್ಥಿಕ ಪ್ರಗತಿಗೆ ನೆರವಾಗಬೇಕು. ಅದು ಅವರ ಬಹು ದೊಡ್ಡ ಕೊಡುಗೆ ಆದೀತು.

ಪ್ರ: ಮತಾಂತರಕ್ಕೆ ಕ್ರೈಸ್ತರು ಅನುಸರಿಸುವ ದಾರಿಗಳ ಬಗ್ಗೆ ಭಾರತದಲ್ಲಿ ಬಹಳ ದೂರುಗಳಿವೆ. ಹಣ, ಉಚಿತ ಶಿಕ್ಷಣ, ಚಿಕಿತ್ಸೆ, ಭೂಮಿ, ಉದ್ಯೋಗಗಳ ಆಮಿಷ, ಅಮಾಯಕರಿಗೆ ವಂಚನೆ, ಬೆದರಿಕೆ ಹೀಗೆ ಮತಾಂತರಕ್ಕೆ ಎಲ್ಲ

ನಡೆಯುತ್ತವೆ ಎಂಬ ದೂರು ಕೇಳುತ್ತದೆ. ಇವೆಲ್ಲಾ ನಿಮಗೆ ಸುಳ್ಳು ಅಥವಾ ಉತ್ಪ್ರೇಕ್ಷೆ ಎನಿಸುತ್ತವೆಯೇ?

ಉ : ಖಂಡಿತ ಇಲ್ಲ. ಬೇರೆ ಸಮಯ, ದೇಶಗಳಲ್ಲಿ ಕ್ರೈಸ್ತ ಮತ ಪ್ರಚಾರಕರು ಅನುಸರಿಸಿರುವ ದಾರಿಗಳೇ ಇವು. ಮತಾಂತರಕ್ಕೆ ಒಪ್ಪದ ಅಮೆರಿಕ ಮೂಲ ನಿವಾಸಿಗಳ ಮೇಲೆ ಚಿತ್ರಹಿಂಸೆ, ಕಗ್ಗೊಲೆ ನಡೆದಿವೆ. ಚರ್ಚ್ ಒಳಹೋಗ ದವರನ್ನು ಕೊಂದ, ಪ್ರಾರ್ಥನೆಯಲ್ಲಿ ಕೈ ಜೋಡಿಸದವರ ಕೈ ಕತ್ತರಿಸಿದ ಉದಾಹರಣೆಗಳು ಹಲವು. ಕೇವಲ 30 ವರ್ಷ ಹಿಂದೆ ಹವಾಯಿ ದ್ವೀಪದ ಜನರಿಗೆ ತಮ್ಮ ಧರ್ಮ ಆಚರಿಸುವ ಸ್ವಾತಂತ್ರ್ಯ ಇರಲಿಲ್ಲ. ಈಗ ಮತಾಂತ ರಕ್ಕೆ ಆಮಿಷ, ವಂಚನೆ, ಬೆದರಿಕೆಯ ದಾರಿ ಅನುಸರಿಸುವುದಿಲ್ಲ ಎಂದು ಕ್ರೈಸ್ತ ಮತಪ್ರಚಾರಕರು ಹೇಳಿಕೊಳ್ಳುತ್ತಾರೆ; ಆದರೆ ಅವರ ಮಾತುಗಳ ಬಗ್ಗೆ ನನಗೆ ಸಂದೇಹಗಳಿವೆ.

ಮತಾಂತರಕ್ಕೆಂದು ಏನೋ ಆಮಿಷ ತೋರಿದ, ಮತ್ತೇನೋ ಕರಾಮತ್ತು ನಡೆಸಿದ ಪ್ರಕರಣಗಳು ಆಗಾಗ್ಗೆ ಬಯಲಿಗೆ ಬರುತ್ತವೆ. ವಾದಕ್ಕೆ ಮಿಷನರಿಗಳು ಈಗ ಇಂತಹ ಕೆಲಸ ಮಾಡುತ್ತಿಲ್ಲ ಎಂದು ನಂಬೋಣ. ಆದರೆ ಈವರೆಗಿನ ತಮ್ಮ ವರ್ತನೆಗೆ ಕ್ರೈಸ್ತ ಮತೀಯರು ಜಗತ್ತಿನ ವಿವಿಧ ವರ್ಗಗಳ ಕ್ಷಮೆ ಕೋರಿದ್ದಾರೆಯೆ? ಪೋಪ್ ಅಮೆರಿಕದ ಮೂಲನಿವಾಸಿ ಗಳ ಕ್ಷಮೆ ಕೋರಿದ್ದು ನಿಜ; ಆದರೆ ಅವರಿಂದ ಕಿತ್ತುಕೊಂಡ ಭೂಮಿ, ಧರ್ಮವನ್ನು ಮಾತ್ರ ಹಿಂದಿರುಗಿ ಕೊಡಲಿಲ್ಲ (ಕಿರುನಗು). ಅವರ ಧರ್ಮ ವನ್ನು ಗೌರವಿಸುವ ಮಾತೂ ಪೋಪರಿಂದ ಬರಲಿಲ್ಲ!

ಪ್ರ : ಜಾತೀಯತೆ ಮತ್ತು ಇತರ ಹಿಂದೂ ಸಮಾಜದ ದೌರ್ಬಲ್ಯಗಳೇ ಮತಾಂತರಕ್ಕೆ ಕಾರಣ ಎಂದು ಕೆಲವರು ಮತಾಂತರವನ್ನು, ಆ ಮೂಲಕ ಕ್ರೈಸ್ತ ಮತ ವಿಸ್ತಾರಕರನ್ನು ಬೆಂಬಲಿಸುತ್ತಾರೆ. ಆ ಬಗ್ಗೆ ನಿಮ್ಮ ನಿಲುವು?

ಉ : ಬಡ ಜನರಲ್ಲಿ ಹೋಗಿ 'ಮತ ಬದಲಿಸಿ, ದುಡ್ಡೋ, ಇನ್ನೇನೋ ಕೊಡು ತ್ತೇವೆ' ಎಂದು ಆಸೆ ಒಡ್ಡಿದರೆ ಕೆಲವರಾದರೂ ಆಮಿಷಕ್ಕೆ ಬಲಿಯಾಗು ತ್ತಾರೆ. ಎಲ್ಲ ದೇಶ, ಧರ್ಮಗಳಲ್ಲೂ ಕೆಲ ದೋಷಗಳಿರುತ್ತವೆ. ಅಮೆರಿಕ ದಲ್ಲೂ ಅಂತಹ ದೋಷಗಳಿವೆ. ಜಾತಿಪದ್ಧತಿ ಮತಾಂತರಕ್ಕೆ ದಾರಿ ಮಾಡಿ ಕೊಡುತ್ತಿದೆ ಎಂಬುದು ನಿಜ. ಆದರೆ ಮನೆ ಅಭದ್ರ ಎಂಬ ಕಾರಣಕ್ಕೆ ಅದರ ದರೋಡೆ ಮಾಡಿ ಕೊಳ್ಳೆ ಹೊಡೆಯುವುದು ಸರಿಯೇ? ನಿಮ್ಮ ಮನೆಯ ಸುರಕ್ಷಾ ವ್ಯವಸ್ಥೆ ಇನ್ನಷ್ಟು ಗಟ್ಟಿ ಇರಬೇಕು, ಒಪ್ಪೋಣ.

ಆದರೆ ಕೊಳ್ಳೆ ಹೊಡೆವ ಕಳ್ಳ ನಿಮಗೇನೋ ಉಪಕಾರ ಮಾಡುತ್ತಿದ್ದಾನೆ ಎಂಬಂತೆ ಮಾತಾಡುವುದು ಹಾಸ್ಯಾಸ್ಪದ.

*ಪ್ರ :* ಜಾತ್ಯತೀತತೆ ಭಾರತದ ಸಂವಿಧಾನದ ಒಂದು ಮೂಲಭೂತ ತತ್ತ್ವ. ಆದರೆ ಹಲವು ಹಿಂದೂ ಸಂಘಟನೆಗಳ ಮೇಲಿನ ಆರೋಪ 'ಅವು ಜಾತ್ಯತೀತತೆಯನ್ನು ಬುಡಮೇಲು ಮಾಡುತ್ತಿವೆ' ಎಂಬುದು. ನಿಮ್ಮ ಪ್ರತಿಕ್ರಿಯೆ?

*ಉ :* (ನಗುತ್ತಾ) ಜಾತ್ಯತೀತತೆ ಎಂದರೇನು? ಅದು ಪಶ್ಚಿಮದ ತತ್ತ್ವ. ರಾಜಕೀಯ ಹಾಗೂ ಕಾನೂನು ವ್ಯವಸ್ಥೆಯಲ್ಲಿ ಧರ್ಮದ ಹಸ್ತಕ್ಷೇಪ ಇರಬಾರದು ಎಂದರ್ಥ. ಹಿಂದೂಗಳಿಗೆ ಸತ್ಯ ಮುಖ್ಯ; ಸಿದ್ಧಾಂತವಲ್ಲ. ಕಾನೂನಿನ ದೃಷ್ಟಿಯಿಂದ ಎಲ್ಲರೂ ಸಮಾನರೇ. ಹಾಗಿರುವಾಗ ಇತರರು ಹಿಂದೂ ಧರ್ಮವನ್ನು ಟೀಕಿಸಬಹುದು; ಆದರೆ ಹಿಂದೂ ನಾಯಕರು ಬೇರೆ ಧರ್ಮದವರ ಬಗ್ಗೆ ಮಾತನಾಡುವಂತಿಲ್ಲ ಎಂದರೆ ಹೇಗೆ? ತಮ್ಮ ವಿಚಾರಗಳನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯ ಇತರರಂತೆಯೇ ಹಿಂದೂಗಳಿಗೂ ಅವಶ್ಯ. ಜಾತ್ಯತೀತತೆ ಅಂದರೆ ಮತಕ್ಕೆ ಅಂಟದೇ ಇರುವುದೋ ಅಥವಾ ಅಲ್ಪಸಂಖ್ಯಾತರ ತುಷ್ಟೀಕರಣವೋ?

ಭಾರತದಲ್ಲಿ ಜಾತ್ಯತೀತತೆ ಎಂದರೆ ಎಲ್ಲ ಧರ್ಮಗಳ ಪ್ರತಿನಿಧಿ ಎಂದು ಹೇಳಿಕೊಳ್ಳಬೇಕು ಅಥವಾ ಅಲ್ಪಸಂಖ್ಯಾತರನ್ನು ಪ್ರತಿನಿಧಿಸಬೇಕು. ಯಾರೂ ಹಿಂದೂ ಎಂದು ಹೇಳಿಕೊಳ್ಳುವಂತಿಲ್ಲ. ಕ್ರೈಸ್ತರಿಗೆ, ಮುಸ್ಲಿಮರಿಗೆ ತಮ್ಮ ಪಂಥದ ಹಿತಾಸಕ್ತಿಗಳನ್ನು ಚರ್ಚಿಸುವ, ತಮ್ಮ ಹಿತರಕ್ಷಣೆಗೆ ಬೇಕಾದ ನಿರ್ಧಾರ ಕೈಗೊಳ್ಳುವ ಸ್ವಾತಂತ್ರ್ಯವಿದೆ. ಆದರೆ ಹಿಂದೂಗಳಿಗೆ ಈ ಸ್ವಾತಂತ್ರ್ಯವನ್ನು ನಿರಾಕರಿಸುವುದೇಕೆ? ಕ್ರೈಸ್ತ, ಮುಸ್ಲಿಂ ಮತಗಳ ಬಲಾತ್ಕಾರದ ಮತಾಂತರ ಪ್ರವೃತ್ತಿಯಿಂದ ಅವಕ್ಕಿಂತ ಪ್ರಾಚೀನವಾದ ಜಗತ್ತಿನ ಅನೇಕ ಮೂಲನಿವಾಸಿಗಳ ಪರಂಪರೆಗಳು ನಾಶವಾಗಿವೆ. ಈ ಎಲ್ಲ ಪರಂಪರೆಗಳಲ್ಲಿಯೂ ಹಲವು ಸಮಾನ ಗುಣಗಳಿವೆ. ಪರಧರ್ಮ ಸಹಿಷ್ಣುತೆ, ಬಹುಪಂಥೀಯತೆ, ವಿಗ್ರಹಾರಾಧನೆ, ಕೆಲವು ಮುಖ್ಯ ಸಾಮ್ಯಗಳು. ಪಶ್ಚಿಮದ ತತ್ತ್ವಜ್ಞಾನ, ಪ್ರಜಾಪ್ರಭುತ್ವ, ವೈದ್ಯ ಪದ್ಧತಿ ಇವೆಲ್ಲ ಕ್ರೈಸ್ತರು 'ಪಾಗನ್' ಎಂದು ಕರೆಯುವ ಕ್ರಿಸ್ತಪೂರ್ವ ಧರ್ಮಗಳಿಂದ ಬಂದದ್ದು. ವಿಜ್ಞಾನ ಪಾಗನ್ನರ ಕೊಡುಗೆ ಎಂಬುದೂ ಚರ್ಚ್ ನೂರಾರು ವರ್ಷ ವಿಜ್ಞಾನದ ಬೆಳವಣಿಗೆಯನ್ನು ವಿರೋಧಿಸುತ್ತಲೇ ಬಂದಿದ್ದಕ್ಕೆ ಕಾರಣ. ಜಗತ್ತಿಗೆ ಕ್ರೈಸ್ತ ಧರ್ಮದ ಕೊಡುಗೆ, ಅವರ ಪಂಥದ ಧಾರ್ಮಿಕ

ಸಿದ್ಧಾಂತ ಮಾತ್ರ. ಪಶ್ಚಿಮದಲ್ಲಿ ವಿಜ್ಞಾನ ಬೆಳೆದದ್ದು ಚರ್ಚಿನ ಪ್ರಬಲ ವಿರೋಧ, ಅಡ್ಡಿಗಳನ್ನು ಎದುರಿಸಿಯೇ.

ಪ್ರ : ಯೋಗ, ಪುನರ್ಜನ್ಮದಲ್ಲಿ ನಂಬಿಕೆ, ಸಸ್ಯಾಹಾರ, ಆತ್ಮದ ಅಸ್ತಿತ್ವ ಮುಂತಾದ ಹಿಂದೂ ನಂಬಿಕೆಗಳಿಗೆ ಅಮೆರಿಕದ ಜನಮಾನಸದಲ್ಲಿ ಮುಕ್ತ ಸ್ವಾಗತ ಸಿಗುತ್ತಿರುವಂತಿದೆ. ಪಶ್ಚಿಮದಲ್ಲಿ ಹಿಂದೂ ಧರ್ಮ ಪ್ರಬಲ ವಾಗುತ್ತಿರುವುದರ ಸೂಚನೆಯೆ ಇದು?

ಉ : ಇದು ಖಂಡಿತಾ ಸನಾತನ ಧರ್ಮಕ್ಕೆ ಪಶ್ಚಿಮ ಬಾಗಿಲು ತೆರೆಯುತ್ತಿರುವುದರ ಸೂಚನೆ. ಪಶ್ಚಿಮದಲ್ಲಿ ಜನರಿಗೆ ಹಿಂದೂ ಧರ್ಮದ ಸ್ಪಷ್ಟ ಕಲ್ಪನೆಯೇ ಇಲ್ಲ. ಸನಾತನ ಧರ್ಮದ ಮೂಲ ತತ್ತ್ವಗಳನ್ನು ಸಂತೋಷದಿಂದ ಒಪ್ಪುವ ಮಂದಿ ನೀವು ಹಿಂದೂನೆ ಎಂದು ಕೇಳಿದರೆ ಅಲ್ಲ ಎನ್ನುತ್ತಾರೆ. ಇದಕ್ಕೆ ಮುಖ್ಯ ಕಾರಣ, ಹಿಂದೂ ಧರ್ಮ ಎಂದರೆ ಜಾತಿ, ಸಾಮಾಜಿಕ ಕಂದಾಚಾರ ಎಂಬ ಕ್ರೈಸ್ತರ ಅಪಪ್ರಚಾರ. ಪಶ್ಚಿಮದಲ್ಲಿ ಜನ ಹಿಂದೂ ಧರ್ಮವನ್ನು ಪುನಃ ಸಮರ್ಪಕವಾಗಿ ಅರ್ಥ ಮಾಡಿಕೊಳ್ಳಬೇಕು. ಅದಕ್ಕೆ ಹಿಂದೂ ಸಮಾಜದಲ್ಲಿ ಕೆಲವು ಮಾರ್ಪಾಡುಗಳು ಅವಶ್ಯ; ಧರ್ಮದ ಸಾರವನ್ನು ಜನರಿಗೆ ಸರಿಯಾಗಿ ತಿಳಿಹೇಳುವುದೂ ಅವಶ್ಯ.

ಪ್ರ : ಸ್ವಾಮಿ ವಿವೇಕಾನಂದರು ಅಮೆರಿಕಕ್ಕೆ ಭೇಟಿ ನೀಡಿದಾಗ ಹಲವರಿಗೆ ಹಿಂದೂ ಧರ್ಮದ ಪರಿಚಯ ಆಯ್ತು. ಹಲವರು ಹಿಂದೂ ವಿಚಾರ ಗಳಿಂದ ಆಕರ್ಷಿತರಾದರು. ಆದರೆ ಕಳೆದ 100-150 ವರ್ಷಗಳಲ್ಲಿ ಪಶ್ಚಿಮದಲ್ಲಿ ಹಿಂದೂ ಧರ್ಮ ನಿಶ್ಚಲವಾಗಿರುವಂತಿದೆಯಲ್ಲ?

ಉ : ಹಿಂದೂ ಧರ್ಮ ಪಶ್ಚಿಮದಲ್ಲಿ ಭಾರೀ ಹೆಸರು ಮಾಡದೇ ಇರಬಹುದು. ಆದರೆ ಅದರ ಹಲವು ವಿಚಾರಗಳು ಇಲ್ಲಿನ ಸಮಾಜಗಳ ಮೇಲೆ ಬಹಳ ಪ್ರಭಾವ ಬೀರಿವೆ. ಆಯುರ್ವೇದ, ಯೋಗ, ವೇದಾಂತ, ಸಂಸ್ಕೃತ ಎಲ್ಲ ಜನಪ್ರಿಯವಾಗುತ್ತಿವೆ. ಹಿಂದೂ ಧರ್ಮ ಕ್ರೈಸ್ತ ಪಂಥದಂತೆ ಕೇವಲ ನಂಬಿಕೆ ಆಧರಿಸಿದ್ದಲ್ಲ; ತುಂಬ ವಿಸ್ತೃತ ತಳಹದಿಯ, ವೈಯಕ್ತಿಕ ಸಾಧನೆ ಆಧರಿಸಿದ ಆಧ್ಯಾತ್ಮಿಕ ವ್ಯವಸ್ಥೆ. ಒಂದು ಪುಟದಲ್ಲಿ ವಿವರಿಸಲು ಬರುವಂಥ ದಲ್ಲ ಹಿಂದೂ ಧರ್ಮ. 'ಕ್ರಿಸ್ತನನ್ನು ನಂಬಿ; ನಿಮ್ಮ ಉದ್ಧಾರ ಆಗುತ್ತದೆ' ಎನ್ನುತ್ತಾರೆ ಕ್ರೈಸ್ತರು. ಆದರೆ ಹಿಂದೂ ಧರ್ಮ ಅದಕ್ಕಿಂತ ತುಂಬ ಆಳ, ವಿಶಾಲ. ಹಿಂದುಗಳೆಂದು ತಮ್ಮನ್ನು ತಾವು ಕರೆದುಕೊಳ್ಳದಿದ್ದರೂ ಅಮೆರಿಕ ಮತ್ತು ಇತರ ಪಶ್ಚಿಮದ ದೇಶಗಳಲ್ಲಿ ಹಲವು ಜನ ಹಿಂದೂ ಗುರುಗಳ

ಶಿಷ್ಯರಾಗಿದ್ದಾರೆ; ಹಿಂದೂ ಜೀವನ ಶೈಲಿಯನ್ನು ಅನುಸರಿಸುತ್ತಿದ್ದಾರೆ. ಹಿಂದೂ ಧರ್ಮದಲ್ಲಿ ಆಚಾರ, ಬದುಕಿನ ರೀತಿಗೆ ಆದ್ಯತೆ. ಜಗತ್ತಿನ ಹಲವು ಜನ ಹಿಂದೂ ಜೀವನ ಪದ್ಧತಿಯನ್ನು ಒಪ್ಪಿ ಹಾಗೆ ಬದುಕುತ್ತಿದ್ದಾರೆ. ಅದರರ್ಥ ಹಿಂದೂ ಧರ್ಮ ಜಗತ್ತಿನ ಹಲವೆಡೆ ಪಸರಿಸಿದೆ. ಆದರೆ ಅಸಂಖ್ಯ ಉದಾತ್ತ ವಿಚಾರಗಳ ಮೂಲಸ್ರೋತವಾದ ಹಿಂದೂ ಧರ್ಮವನ್ನು ಈ ಜನ ಗುರುತಿಸಿ, ಗೌರವಿಸುವುದೂ ಅವಶ್ಯ.

ಪ್ರ : ಪಶ್ಚಿಮದ ರಾಷ್ಟ್ರಗಳು ಹಲವು ಸಾಮಾಜಿಕ ಸಮಸ್ಯೆಗಳಿಂದ ಸಂಕಟ ಪಡುತ್ತಿವೆ. ನಿತ್ಯ ಬೇಗುದಿಗೆ ಬಿದ್ದಂತೆ ತೋರುತ್ತವೆ. ಇದೇನು ವಿಪರ್ಯಾಸ?

ಉ : ಪಶ್ಚಿಮದ ಸಂಸ್ಕೃತಿ, ವಿಚಾರಗಳ ರಫ್ತಿನ ಹಿಂದೆ ಆರ್ಥಿಕ, ರಾಜಕೀಯ ಕಾರಣಗಳಿವೆ. ಯಾವ ವಿಚಾರ ಹರಡುವುದೂ ಮಾಧ್ಯಮ ಹಾಗೂ ಸೈನಿಕ ಶಕ್ತಿಯ ಫಲವಾಗಿ. ಯಾರಲ್ಲಿ ಹಣ, ಸೈನ್ಯ, ಮಾಧ್ಯಮ ಬಲ ಇದೆಯೋ, ಯಾರಿಗೆ ಜಗತ್ತಿನ ಇಂಧನ ಸಂಪನ್ಮೂಲಗಳ ಮೇಲೆ ಹಿಡಿತ ಇದೆಯೋ ಅವರ 'ವಿಚಾರಗಳಿಗೆ' ಜಗತ್ತಿನಲ್ಲಿ ಮನ್ನಣೆ. ಮಾಧ್ಯಮಗಳಲ್ಲಿ ಬರುವುದನ್ನು ಜನ ನಂಬುತ್ತಾರೆ. ಹಿಂದೂಗಳು ತಮ್ಮ ಸುತ್ತ ಕೋಟೆ ಕಟ್ಟಿಕೊಳ್ಳೋದು ತಪ್ಪು. ಹಿಂದೂಗಳು ತಮ್ಮದೇ ಮಾಧ್ಯಮಗಳನ್ನು ಸೃಷ್ಟಿಸಬೇಕು. ಜಗತ್ತಿನ ಮಾಧ್ಯಮಗಳ ಮೇಲೆ ತಮ್ಮ ಸ್ಪಷ್ಟ ಗುರುತು ಮೂಡಿಸಬೇಕು. ಧರ್ಮದ ಮೂಲ ಗುರಿ ಸತ್ಯ ಸಾಕ್ಷಾತ್ಕಾರ. ಸತ್ಯ ಹಿಂದು, ಕ್ರೈಸ್ತ, ಮುಸ್ಲಿಂ ಎಲ್ಲರಿಗೂ ಒಂದೇ. ನಮ್ಮ ಧರ್ಮ ಶ್ರೇಷ್ಠ ಎಂದು ಭಾವಿಸಿದ ಮಾತ್ರಕ್ಕೆ ನಾವು ಜಗತ್ತಿನ ಇತರ ಧರ್ಮಗಳನ್ನೆಲ್ಲ ನಾಶ ಮಾಡಬೇಕಿಲ್ಲ. ಪಶ್ಚಿಮದಲ್ಲಿ ಧರ್ಮದ ಪರಂಪರೆ ಹೇಳಿಕೊಳ್ಳುವಂಥದ್ದೇನೂ ಅಲ್ಲ. ಭಾರತ ನೂರು ವರ್ಷಗಳಲ್ಲಿ ಕೊಟ್ಟಷ್ಟು ಸಾಧು, ಸಂತರನ್ನು ಯುರೋಪ್ ತನ್ನ ಇತಿಹಾಸದಲ್ಲೇ ಸೃಷ್ಟಿಸಿಲ್ಲ. ಪಶ್ಚಿಮ ದೇಶಗಳ ಪರಂಪರೆಯಲ್ಲಿ ಧರ್ಮದ ಕಲ್ಪನೆಯೇ ಭಿನ್ನ. ಇಲ್ಲಿ ಧರ್ಮವೆಂದರೆ ಚರ್ಚ್ ಭೇಟಿಗೆ ಸೀಮಿತ. ಧ್ಯಾನ, ಯೋಗ, ಪ್ರಾಣಾಯಾಮ, ವೈಯಕ್ತಿಕ ಆಧ್ಯಾತ್ಮಿಕ ಸಾಧನೆ ಯಾವುವೂ ಇಲ್ಲ. ತನ್ನ ಆಧ್ಯಾತ್ಮಿಕ ಸಾಧನೆಯ ಮೂಲಕ ವ್ಯಕ್ತಿ ಆನಂದ, ಮುಕ್ತಿ ಹೊಂದುವುದು ಹಿಂದೂ, ಬೌದ್ಧ ಮತ್ತಿತರ ಪೌರ್ವಾತ್ಯ ಧರ್ಮಗಳ ಬೋಧೆಯ ತಿರುಳು. ತಮ್ಮದೊಂದೇ ನಿಜ ಧರ್ಮ ಎಂದು ಹೇಳಿಕೊಳ್ಳುವ ಕ್ರೈಸ್ತ ಧರ್ಮಕ್ಕೆ ಆಧ್ಯಾತ್ಮಿಕ ಸಾಧನೆ ಬೇಕಿಲ್ಲ. 'ಒಬ್ಬ ದೇವದೂತ, ಒಂದು ಪುಸ್ತಕ, ಒಂದು ನಂಬಿಕೆ' ಇಷ್ಟೇ ಅವರ ಮೋಕ್ಷದ

ಕಲ್ಪನೆ. ಮನುಜ ಜೀವನವನ್ನು ಉನ್ನತ ಸ್ತರಕ್ಕೇರಿಸುವ ಆಧ್ಯಾತ್ಮಿಕ ಸಾಧನೆ, ತಿಳಿವಿನ ದಾರಿಯಿಂದ ಅವರು ದೂರ. ಗಿಳಿಪಾಠ ಬೇಡ; ವಿವೇಚನೆ ಬೇಕು.

ಪ್ರ : ಜಾಗತೀಕರಣ ಹಿಂದೂ ಧರ್ಮಕ್ಕೆ ಬಂದಿರುವ ವಿಪತ್ತೇ? ಹಿಂದುಗಳು ಜಾಗತೀಕರಣದ ಸವಾಲು ಸ್ವೀಕರಿಸಲು ಸಿದ್ಧರೆ?

ಉ : ಜಾಗತೀಕರಣ ಭೂಮಿಗಂತೂ ದೊಡ್ಡ ವಿಪತ್ತಿನಂತೆ ಕಾಣುತ್ತಿದೆ (ವಿಷಾದದ ನಗು). ಜಗತ್ತಿನ ಮೂಲೆ, ಮೂಲೆ ಮುಟ್ಟುವ ಸಮರ್ಥ ಸಂವಹನ ಅದರಿಂದ ಸಾಧ್ಯ. ಉದಾಹರಣೆಗೆ, ಜಗತ್ತಿನ ಯಾವುದೋ ಮೂಲೆಯಲ್ಲಿ ಕುಳಿತ ವ್ಯಕ್ತಿ ಸ್ವಂತ ಆಸಕ್ತಿಯಿಂದ ಹಿಂದೂ ಧರ್ಮದ ಅಧ್ಯಯನ ಮಾಡಬಲ್ಲ. ಆದರೆ ಜಾಗತೀಕರಣದ ಫಲವಾಗಿ ಎಲ್ಲೆಡೆ ಹರಡುತ್ತಿರುವ ಅತಿ ಬಳಕೆ ಪ್ರವೃತ್ತಿ ಭೂಮಿಯ ಮಿತ ಸಂಪನ್ಮೂಲಗಳಿಗೆ ಮಾರಕ. ಬಹುರಾಷ್ಟ್ರೀಯ ಧರ್ಮ, ಕಂಪನಿಗಳ ಮುಷ್ಟಿಯಲ್ಲಿ ಜಗತ್ತು ಸಿಕ್ಕಿ ಕೊಂಡರೆ ಅದಿನ್ನೂ ಭಯಾನಕ. ಸಿದ್ಧರಿರಲಿ, ಬಿಡಲಿ, ಜಾಗತೀಕರಣ ವನ್ನು ಹಿಂದೂಗಳು ಎದುರಿಸುವುದು ಅನಿವಾರ್ಯ. ಆ ಸವಾಲು ಸ್ವೀಕರಿಸಲು ಬೇಕಾದ ಬೌದ್ಧಿಕ ತಾಕತ್ತು ನಮಗಿದೆ; ಆದರೆ ಅಧ್ಯಯನ ಸಾಲದು. ಹಲವು ಹಿಂದೂಗಳು 'ಎಲ್ಲ ಧರ್ಮಗಳೂ ಒಂದೇ' ಎಂಬ ಗಿಳಿಪಾಠ ಒಪ್ಪಿಸುತ್ತಾರೆ. ಹಾಗೆ ಹೇಳುವ ಮೊದಲು ಕುರಾನ್, ಬೈಬಲ್ ಓದಿ ನೋಡಿ. ಕೇವಲ ಒಂದೆರಡು ವಾಕ್ಯವಲ್ಲ; ಇಡೀ ಗ್ರಂಥವನ್ನು ಓದಿ. ಅದು ನಿಮಗೆ ಒಪ್ಪಿಗೆಯೇ? ಹೇಳಿ. ಚರ್ಚ್ ಹೇಳುವುದೇನು? ಮಾಡುತ್ತಿರುವುದೇನು? ಗಮನಿಸಿ; ಅವರ ಸಿದ್ಧಾಂತವನ್ನು ಗಮನವಿಟ್ಟು ಕೇಳಿ. ತಮ್ಮ ಧರ್ಮವೇ ಶ್ರೇಷ್ಠ; ಮಿಕ್ಕಿದ್ದೆಲ್ಲ ಸುಳ್ಳು ಎನ್ನುವ ಅವರ ಸಿದ್ಧಾಂತವನ್ನು ಒಪ್ಪುವುದು ಹೇಗೆ? ತಮ್ಮ ಧರ್ಮವೇ ಪರಮೋಚ್ಚ ಎಂದು ಇಸ್ಲಾಂ, ಕ್ರೈಸ್ತ ಮತಗಳೆರಡೂ ಹೇಳುತ್ತವೆ. ಹಾಗಿದ್ದರೆ ನೀವು ಎರಡೂ ಮತಗಳ ಹೇಳಿಕೆಯನ್ನು ಒಪ್ಪುತ್ತೀರೇನು? (ಮುಗುಳ್ನಗು). ಬದುಕಿನಲ್ಲಿ ವಿವೇಚನೆ ತುಂಬ ಅವಶ್ಯ. ಕುಡಿಯುವ ನೀರಿನ ಬಗ್ಗೆ ವಿವೇಚನೆ ಬೇಕಲ್ಲವೇ? ಯಾರು ಏನು ಕೊಟ್ಟರೂ ಕುಡಿಯುತ್ತೀರಾ? ತರಕಾರಿ ಅಂಗಡಿಗೆ ಹೋದಾಗ ಒಳ್ಳೆಯದನ್ನೇ ಹೆಕ್ಕಿ ತೆಗೆದು ಕೊಳ್ಳುವು ದಿಲ್ಲವೆ? ನಿಮ್ಮ ಜೀವನ ಸಂಗಾತಿಯನ್ನು, ಉದ್ಯೋಗವನ್ನು ಜೋಪಾನ ದಿಂದ ಆರಿಸುವುದಿಲ್ಲವೇ? ಹಾಗಿರುವಾಗ ಧರ್ಮದ ವಿಷಯ ಬಂದಾಗ

ಎಲ್ಲ ಧರ್ಮಗಳೂ ಒಂದೇ ಎಂಬುದು ಹೇಗೆ ಸಾಧ್ಯ? ಎಲ್ಲ ಮತಗಳ ಎಲ್ಲ ವಿಚಾರಗಳಲ್ಲೂ ನಂಬಿಕೆ ಇಡಲಾದೀತೇ? ವೇದಗಳಲ್ಲಿ ಒಂದು ಮಾತು ಬರುತ್ತದೆ: 'ನೀರೆಲ್ಲ ಒಂದೇ ನಿಜ. ಆದರೆ ಎಲ್ಲ ನೀರೂ ಕುಡಿಯಲು ಯೋಗ್ಯವಲ್ಲ.' ವಿವೇಚನೆ ಅಗತ್ಯ ಎಂದಾಗ ನಾನಾ ಧರ್ಮಗಳ ಸಾಮ್ಯಗಳನ್ನು ಉಪೇಕ್ಷಿಸಿ ಎಂದು ನಾನು ಹೇಳುತ್ತಿಲ್ಲ. ಆದರೆ ವಿಜ್ಞಾನ ದಂತೆಯೇ ಧರ್ಮ ಕೂಡಾ ಮಾನವ ನಿರ್ಮಿತ. ಕಾಲಕಾಲಕ್ಕೆ ಬರುವ ಎಲ್ಲ ವೈಜ್ಞಾನಿಕ ನಿಯಮಗಳೂ ಒಂದೇ. ಅವೆಲ್ಲವೂ ಸತ್ಯ, ಎಲ್ಲ ರಾಜಕಾರಣಿಗಳೂ ಒಂದೇ, ಎಲ್ಲರೂ ಸಜ್ಜನರೇ, ಎಲ್ಲ ಕಾನೂನೂ ಉತ್ತಮ ಎನ್ನುವುದು ಸಾಧ್ಯವೇ, ಸಾಧುವೇ? 'ಎಲ್ಲ ಧರ್ಮಗಳೂ ಒಂದೇ' ಎಂಬುದು ಪೊಳ್ಳು. ಸುಮ್ಮನೇ ಅದನ್ನೇ ಪುನರಾವರ್ತಿಸುವುದನ್ನು ಹಿಂದೂಗಳು ಬಿಡಬೇಕು.

ಪ್ರ : ಜಗತ್ತಿನಲ್ಲಿ ಏನೇ ಆಗಲಿ, ಸನಾತನ ಧರ್ಮ ಉಳಿದೇ ಉಳಿಯುತ್ತದೆ; ಅದಕ್ಕೆ ಯಾವ ಅಪಾಯವೂ ಒದಗದು ಎಂಬ ನಂಬಿಕೆ ಹಲವರಲ್ಲಿದೆ. ಈ ಪ್ರವೃತ್ತಿ ಆತ್ಮಘಾತಕವಲ್ಲವೆ?

ಉ : ಹಿಂದೂ ಧರ್ಮದಲ್ಲಿ ಕರ್ತವ್ಯ ಮತ್ತು ಕರ್ಮದ ಪರಿಕಲ್ಪನೆಯಿದೆ. ಪ್ರತಿ ವ್ಯಕ್ತಿಗೂ ಒಂದಿಷ್ಟು ಕರ್ತವ್ಯಗಳಿವೆ. ನಮ್ಮ ಕರ್ತವ್ಯವನ್ನು ನಾವು ನಿರ್ವಹಿಸದೇ ಇದ್ದರೆ ಜಗತ್ತು ಹೇಗೆ ಉತ್ತಮ ಆದೀತು? 'ನಾನು ಏನೂ ಮಾಡದೇ ಸುಮ್ಮನೇ ಕೂರುತ್ತೇನೆ. ಆಗೋದೆಲ್ಲ ಆಗಲಿ' ಎಂದರಾಗದು. ಮಹಾಭಾರತದ ಸಂದೇಶ ಏನು? ಪಾಂಡವರು ಧರ್ಮದ ರಕ್ಷಣೆಗಾಗಿ ಯುದ್ಧ ಮಾಡಿದರು; ಮನೇಲಿ ಕೂರಲಿಲ್ಲ. ಬಹಳ ಹಿಂದೂಗಳು ದುಡಿಮೆ ಗಷ್ಟೇ ಗಮನ ಕೊಡುತ್ತಿದ್ದಾರೆ. ಅದನ್ನು ಮೀರಿ ಸಮಾಜದ ಪ್ರಗತಿಗೆ ಅವರು ಗಮನ ಕೊಡಬೇಕು. ಹಿಂದೂ ವಿಚಾರಗಳಿಗೆ ಬೆಂಬಲ ನೀಡಬೇಕು. ಪಶ್ಚಿಮದಲ್ಲಿರುವ ಹಿಂದೂಗಳು ಹಾರ್ವರ್ಡ್, ರೆಡ್ ಕ್ರಾಸ್ ರೀತಿಯ ಸಂಸ್ಥೆಗಳಿಗೆ ಹಣ ನೀಡುವ ಬದಲು ಹಿಂದೂಗಳಿಗೆ ಉತ್ತಮ ಶಿಕ್ಷಣ, ಆಸ್ಪತ್ರೆ, ಮತ್ತಿತರ ಸೌಲಭ್ಯ ಒದಗಿಸಲು ಮುಂದಾಗಬೇಕು.

ಅಮೆರಿಕದ ಪ್ರತಿ ವಿಶ್ವವಿದ್ಯಾಲಯದಲ್ಲೂ ಧರ್ಮಬೋಧೆಗೆ ಪ್ರತ್ಯೇಕ ಶೈಕ್ಷಣಿಕ ವಿಭಾಗ ಇರುತ್ತದೆ. ಆದರೆ ಭಾರತದಲ್ಲಿ ಹಿಂದೂ ಧರ್ಮವನ್ನು ಬೋಧಿಸುವ ವಿಶ್ವವಿದ್ಯಾಲಯಗಳಲ್ಲಿ ವೇದ, ಉಪನಿಷತ್ ಆಧಾರಿತ ಹಿಂದೂ ಧರ್ಮದ ಅಧ್ಯಯನಕ್ಕೆ ಒತ್ತು ನೀಡಬೇಕು. ಕೇವಲ ಆಚಾರ,

ಪೂಜಾ ವಿಧಾನಗಳನ್ನು ಹೇಳಿಕೊಡುವ ಬದಲು ಹಿಂದೂ ದರ್ಶನ, ವೇದಾಂತಗಳಲ್ಲಿ ಸಂಶೋಧನೆ, ಉನ್ನತ ವ್ಯಾಸಂಗ, ಪದವಿ ಗಳಿಕೆಗೆ ಆಸ್ಪದ ಕಲ್ಪಿಸಬೇಕು.

ಡಾ. ಫ್ರಾಲಿ ಅವರೊಡನೆ ಮಾತನಾಡುವುದು ಬಹಳವಿತ್ತು. ಅವರೂ ಉತ್ಸುಕರಾಗಿದ್ದರು. ಆದರೆ ಸಂಜೆ ಬೆಳಕು, ಪಯಣದ ಮುಂದಿನ ಗುರಿಯಾಗಿದ್ದ ಟಾವ್ರೊಸ್‌ನ ಹನುಮನ ಗುಡಿ ನಮ್ಮನ್ನು ಮತ್ತೆ ರಸ್ತೆಗೆ ಹಚ್ಚಿದವು. ಸ್ಥಳೀಯ ಬಿಳಿ ಅಮೆರಿಕನ್ ಹಿಂದೂಗಳು ನಡೆಸುವ ಹನುಮನ ಗುಡಿ ಬಂಡೆಯ ಬಿರುಕಲ್ಲಿ ಟಿಸಿಲೊಡೆವ ಗರಿಕೆಯಂತೆ ಸನಾತನ ಧರ್ಮದ ಚೈತನ್ಯದ ಸೂಚಿ. ಸ್ಕಾಂಟಿಫೆ ಬಿಟ್ಟಂತೆ ಅಸ್ಪೃಶ್ಯತೆ, ಎಡಪಂಥೀಯತೆ, ಮೆಕಾಲೆ ಶಿಕ್ಷಣ, ಅಲ್ಪಸಂಖ್ಯಾತರ ಓಲೈಕೆ, ಈ ಎಲ್ಲ ಮತಾಂತರ ಗುಮ್ಮನ ಕೈ ಹಿಡಿದು ನರ್ತನ ಆರಂಭಿಸಿದವು. ಸೇವೆ, ಸಮಾನತೆ, ವೇದಾಂತದ ನೆಲೆಗಟ್ಟಿನಲ್ಲಿ ಹಿಂದೂ ಸಮಾಜವನ್ನು ಮತ್ತೆ ಕಟ್ಟುವ ವಿವೇಕಾನಂದರ ಕರೆಗೆ ನಾವು ಓಗೊಟ್ಟಾಗ ಮಾತ್ರ ಮತಾಂತರದ ಈ ರಕ್ಕಸ ಕುಣಿತ ನಿಂತೀತು.



# ನಮ್ಮ ಸುಧಾರಕರೂ ಸ್ವಮತ ವಿಮರ್ಶಿಸಿ, ಪರಮತ ಹುಳುಕನ್ನು ತೋರಿಸಿದ್ದಾರೆ

*- ಡಾ. ಎಸ್.ಎಲ್. ಭೈರಪ್ಪ*

---

ನನ್ನ 16.10.2008ರ ವಿಜಯ ಕರ್ನಾಟಕದ ಲೇಖನಕ್ಕೆ ವ್ಯಾಪಕ ಪ್ರತಿಕ್ರಿಯೆಗಳು ಬಂದು ವಿಷಯದ ಹಲವು ಮಗ್ಗುಲುಗಳು ಚರ್ಚೆಯಾಗಿರುವುದು ನನಗೆ ಸಂತೋಷ ಕೊಟ್ಟಿದೆ. ಕನ್ನಡ ಓದುಗರು ಇಂಥ ಚರ್ಚೆಯಲ್ಲಿ ಭಾಗವಹಿಸುವಷ್ಟು ಎಂದೋ ಪ್ರಬುದ್ಧರಾಗಿದ್ದರು. ತನ್ನದೇ ಯಾವ ಸೈದ್ಧಾಂತಿಕ ಸಂಕೋಲೆಗೂ ಒಳಪಡದೆ 'ವಿಜಯ ಕರ್ನಾಟಕ'ವು ಮುಕ್ತ ಅವಕಾಶವನ್ನು ಕೊಟ್ಟಿದ್ದರಿಂದ ಚರ್ಚೆಯೂ ಸಮಗ್ರವಾಯಿತು. ಪತ್ರಿಕೆಯ ವಸ್ತುನಿಷ್ಠತೆ ಮತ್ತು ಪ್ರಾಮಾಣಿಕತೆಯೂ ದೃಢಪಟ್ಟು, ಕನ್ನಡದ ಸ್ವತಂತ್ರ ಚಿಂತಕರಿಗೆ ವೇದಿಕೆಯ ಭರವಸೆ ಮೂಡಿಸಿತು. ನನ್ನ ಲೇಖನದ ಓದುಗರು, ಪ್ರತಿಕ್ರಿಯೆಗೈದವರು ಮತ್ತು ಪತ್ರಿಕೆ-ಎಲ್ಲರನ್ನೂ ನಾನು ಅಭಿನಂದಿಸುತ್ತೇನೆ.

ನನ್ನ ಲೇಖನದ ಫಲಿತಾಂಶವೇನು? ಸಾವಿರಾರು ಓದುಗರು ಪ್ರತಿಕ್ರಿಯೆಗೈದಿದ್ದಾರೆ. ಎಂ. ಚಿದಾನಂದಮೂರ್ತಿ, ನವರತ್ನ ರಾಜಾರಾಂ, ಶತಾವಧಾನಿ ಗಣೇಶ್, ರಾಮಚಂದ್ರ ಶೆಣೈ, ಅಜಕ್ಕಳ ಗಿರೀಶ್ ಭಟ್, ನ್ಯಾಯವಾದಿ ಪಿ.ಪಿ. ಹೆಗ್ಡೆ, ಎ. ಶ್ರೀನಿವಾಸಮೂರ್ತಿ, ಸುಮತೀಂದ್ರ ನಾಡಿಗ ಮೊದಲಾದವರು ನಾನು ಹೇಳಿರುವುದಕ್ಕಿಂತ ಹೆಚ್ಚಿನ ಸಂಗತಿಗಳನ್ನು ಸಂಶೋಧನೆ ಮತ್ತು ಅಧ್ಯಯನಗಳಿಂದ ಹೊರತೆಗೆದು ಬರೆದಿದ್ದಾರೆ. ಉಳಿದವರು ನನ್ನ ವಿಚಾರಗಳಿಗೆ ಅಂಗುಲ ಅಂಗುಲಕ್ಕೂ ಕತ್ತರಿ ಹಾಕುವುದೇ ಸಂಶೋಧನೆ ಎಂಬ ಗ್ರಹಿಕೆಯಲ್ಲಿ ಉತ್ತರಿಸಿದ್ದಾರೆ. ಅವರ ಆಕ್ಷೇಪಗಳಿಗೆ ಸ್ಥೂಲವಾಗಿ ಉತ್ತರಿಸಲು ನಾನು ಇಲ್ಲಿ ಪ್ರಯತ್ನಿಸಿದ್ದೇನೆ. ಒಟ್ಟಿನಲ್ಲಿ ನನ್ನ ಮನೆಗೆ ಕಳ್ಳರು ನುಗ್ಗಿ ದೋಚಿದ್ದಾರೆಂದು ದೂರು ಕೊಟ್ಟರೆ, ನಿನ್ನ ಮನೆಯ ಕಿಟಕಿ ಬಾಗಿಲು ಸೂರು ಗೋಡೆಗಳನ್ನು ಗಟ್ಟಿಯಾಗಿ ಕಟ್ಟಿಕೊಂಡಿದ್ದರೆ ಕಳ್ಳನು ಹೇಗೆ ನುಗ್ಗುತ್ತಿದ್ದ? ನಿನ್ನದೇ ತಪ್ಪು ಎಂದು ದೂರು ಕೊಟ್ಟವನನ್ನೇ ಹಿಡಿದು ಒಳಗೆ ಹಾಕುವ ನಮ್ಮ ಪೊಲೀಸರಂತೆ ಬುದ್ಧಿಜೀವಿಗಳು, ಪ್ರಗತಿಪರರು ವಾದ ಮಾಡಿದ್ದಾರೆ. ಹೀಗಾಗಿ ಇಂಥ ಒಂದು ಚರ್ಚೆಯನ್ನು ತತ್ತ್ವದ ಮಟ್ಟದಲ್ಲಾಗಲಿ, ರಾಜ

ಕೀಯ ಮಟ್ಟದಲ್ಲಾಗಲಿ ಆರಂಭಿಸಿದರೆ ಚರ್ಚೆಯ ಉದ್ದೇಶವನ್ನೇ ಮರೆಯಾಗಿಸುವಂತೆ ನಮ್ಮ ಕ್ರೋಧಜೀವಿಗಳು, ವಿರೋಧ ತಜ್ಞರು ಉಜ್ಜುಗಿಸಿ ರಾಡಿ ಎಬ್ಬಿಸುತ್ತಾರೆ. ಈ ಇಡೀ ಚರ್ಚೆಯಲ್ಲಿ ಯಾವ ಮಿಷನರಿಯೂ ಬಾಯಿ ಹಾಕಿಲ್ಲ. 'ನಿಮ್ಮ ಪಾಡಿಗೆ ನೀವು ಕಚ್ಚಾಡಿಕೊಂಡಿರಿ, ನಿಮ್ಮ ಯೋಗ್ಯತೆಯನ್ನು ನಾವು ಮೊದಲಿನಿಂದ ಬಲ್ಲೆವು. ಆದ್ದರಿಂದ ನಮ್ಮ ಕೆಲಸ ನಾವು ಸುಲಭವಾಗಿ ಮಾಡುತ್ತೇವೆ' ಎಂದು ಅವರು ಇನ್ನೂ ಹೆಚ್ಚು ಉತ್ಸಾಹದಿಂದ ಮತಾಂತರ ಕೃತ್ಯದಲ್ಲಿ ತೊಡಗಿದ್ದಾರೆ.

ಇಂಥ ಘಟನೆ ಬೇರೆ ಯಾವ ದೇಶದಲ್ಲಿ ನಡೆದೀತು? ಅವ್ಯಾಹತ ಕ್ರಿಸ್ತೀಕರಣ: ಪ್ರಗತಿಪರರ ಜಾಣಮೌನ. ಆನುಷಂಗಿಕವಾಗಿ ಇಸ್ಲಾಮೀಕರಣವನ್ನೂ ತರಲೇ ಬೇಕಾಯಿತು. ಏಕೆಂದರೆ ಅವೆರಡೂ ವಿಸ್ತರೀಕರಣವನ್ನೇ ಮೂಲ ಗುಣವನ್ನಾಗುಳ್ಳ ಒಂದೇ ಬೇರಿನ ಎರಡು ಕೊಂಬೆಗಳು. ಸಾಕಷ್ಟು ಅಂಕಿ-ಅಂಶಗಳನ್ನು ಕೊಟ್ಟು ಈ ಮತಗಳು ಮತ್ತು ಭಾರತದ ಧರ್ಮಗಳ ನಡುವಿನ ಮುಖ್ಯ ವ್ಯತ್ಯಾಸವನ್ನು ವಿವರಿಸಿ, ಈ ವ್ಯತ್ಯಾಸವೇ ಭಾರತದಲ್ಲೂ ಈ ಬೇಟೆಗಾರ ಮತಗಳ ತಡೆ ಇಲ್ಲದ ವಿಸ್ತರಣೆಗೆ ಹೇಗೆ ಕಾರಣವಾಗಿದೆ, ಜತೆಗೆ ನಮ್ಮ ರಾಜಕಾರಣಿಗಳ ಭ್ರಷ್ಟತನವು ಹೇಗೆ ಈ ಹಾವಳಿಗೆ ಕುಮ್ಮಕ್ಕಾಗಿದೆ ಎಂಬುದನ್ನು ತೋರಿಸಿದೆ. ಪ್ರತಿಕ್ರಿಯೆಗೈದ ಬಹುಜನರು ವಿಷಯವನ್ನು ಒಳಹೊಕ್ಕು ಶೋಧಿಸಿದ್ದಾರೆ. ಇನ್ನು ಕೆಲವರು ನಿರೀಕ್ಷಿಸಿದಂತೆ ವಿಷಯಾಂತರಿಸಿದ್ದಾರೆ. ವಿಷಯಾಂತರವು ಒಂದೇ ಆಗಿದ್ದರೂ ಅದನ್ನು ಮಾಡುವವರು ಎರಡು ಗುಂಪಿನವರು. ಈ ಮತಾಂತರವಾಗಿರುವವರು, ಆಗುತ್ತಿರುವವರು ಹಿಂದೂ ಧರ್ಮದಲ್ಲಿರುವ ಅಸ್ಪೃಶ್ಯತೆ ಮತ್ತು ಜಾತಿ ಪದ್ಧತಿಗಳಿಂದ ರೋಸಿ, ಸ್ವಾತಂತ್ರ್ಯ ಸಮಾನತೆ ಭ್ರಾತೃತ್ವಗಳನ್ನರಸಿ ಹೊರ ಹೋಗುತ್ತಿದ್ದಾರೆ. ಇದರ ತಪ್ಪೆಲ್ಲವೂ ಹಿಂದೂ ಧರ್ಮದ್ದೇ; ವರ್ಣ ಪದ್ಧತಿಯದೇ. ಇವರನ್ನು ತೆರೆದ ತೋಳಿನಿಂದ ಮಿಷನರಿಗಳು ಬರ ಮಾಡಿಕೊಂಡರೆ ತಪ್ಪೇನು? ಈ ವಾದವನ್ನು ಕಮ್ಯುನಿಸ್ಟ್ ವಿಚಾರಗಳಿಂದ ಪ್ರೇರಿತರಾದ 'ಪ್ರಗತಿ'ಪರರು, ಬಂಡಾಯಗಾರರು ಎತ್ತಿ ಹಿಡಿಯುತ್ತಾರೆ. ದಲಿತರೂ ಇದನ್ನೇ ಮುಂದು ಮಾಡುತ್ತಾರೆ. ಇವರಿಬ್ಬರೂ ಹಿಂದೂ ಧರ್ಮವನ್ನು ಮನುವಾದವೆಂದು ಸಾರಾಸಗಟು ಧಿಕ್ಕರಿಸುತ್ತಾರೆ. ಆದರೆ ವರ್ಣ ಪದ್ಧತಿಯು ಇಲ್ಲದ ಈಶಾನ್ಯ ಭಾರತದ ಗಿರಿಜನ ಮತ್ತು ಬುಡಕಟ್ಟು ಜನಾಂಗಗಳು ಹೇಗೆ ಬಹುತೇಕ ಮತಾಂತರಗೊಂಡವು? ಅವರಿಗೆ ತಮ್ಮವೆನ್ನುವ ಪ್ರೌಢ ಧರ್ಮವಿರಲಿಲ್ಲ. ಆದ್ದರಿಂದ ಕ್ರೈಸ್ತರಾದರು ಎಂಬ ಕಥೆಯನ್ನು ಈ ಕಮ್ಯುನಿಸ್ಟ್ ಮತ್ತು ದಲಿತವಾದಿಗಳು ಕಟ್ಟಬೇಕಾಗುತ್ತದೆ. ಜಾತಿ ಪದ್ಧತಿಯೇ ಇಲ್ಲದ ಆಫ್ರಿಕಾ ಮತ್ತು ದಕ್ಷಿಣ ಅಮೆರಿಕ ಖಂಡಗಳ ಬುಡಕಟ್ಟುಗಳನ್ನು ಯಾಕೆ ಮತ್ತು ಹೇಗೆ ಮಿಷನರಿಗಳು ಮತಾಂತರಿಸಿದರು ಎಂಬುದಕ್ಕೆ ಯಾವ ಕತೆ ಕಟ್ಟುತ್ತಾರೆ? ಪಾಪ, ಅವರೆಲ್ಲ ನರಕಕ್ಕೆ ಹೋಗುತ್ತಿದ್ದರು; ಅವರಿಗೆ ಸ್ವರ್ಗ ಕರುಣಿಸಲು ಮಿಷನರಿಗಳು ಹಾಗೆ ಮಾಡಿದರು ಎಂಬ ವಾದವನ್ನು ಒಪ್ಪುತ್ತಾರೆಯೇ?

ಕುಯುಕ್ತಿ, ಕುತರ್ಕಗಳಲ್ಲಿ ನಿಪುಣರಾದ ಕಮ್ಯುನಿಸ್ಟರು ಮತ್ತು ಅವರಿಂದ ಪ್ರಣೀತ

ರಾದ ಪ್ರಗತಿಪರರು ಮತ್ತು ಬಂಡಾಯಗಾರರ ಮಾತು ಬೇಡ. ದಲಿತ ಚಿಂತಕರು ಒಂದು ಅಂಶವನ್ನು ಮರೆಯಬಾರದು. ಮನುಪ್ರಣೀತ ಅಮಾನವೀಯ ಅಸ್ಪೃಶ್ಯತೆಯು ಸಾವಿರಾರು ವರ್ಷಗಳಿಂದ ನಮ್ಮ ಸಮಾಜದಲ್ಲಿ ಆಚರಣೆಯಲ್ಲಿತ್ತು. ಅದರ ವಿರುದ್ಧವಾಗಿ ಮಧ್ಯಯುಗ ದಿಂದಲೂ ಎಷ್ಟೋ ಸಮಾಜ ಸುಧಾರಕರು ಕಾರ್ಯೋನ್ಮುಖರಾದರೂ ಅದನ್ನು ನಿರ್ಮೂಲ ಮಾಡಲು ಸಾಧ್ಯವಾಗಿರಲಿಲ್ಲ. ಮುಸಲ್ಮಾನರ ಆಳ್ವಿಕೆಯಲ್ಲಿ ಎಷ್ಟೋ ಜನ ಕ್ಷತ್ರಿಯರು, ರೈತರು ಅಸ್ಪೃಶ್ಯರಾದರು. ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಇಡೀ ರಾಷ್ಟ್ರವು ಸ್ವಾತಂತ್ರ್ಯ ಚಳವಳಿಯ ಅಂಶವಾಗಿಯೇ ನಿರ್ಧರಿಸಿತು. ಮಹಾತ್ಮಾ ಗಾಂಧಿಯ ವರ ಚಳವಳಿಯು ಇದಕ್ಕೊಂದು ನಿದರ್ಶನ. ಬಾಬು ರಾಜೇಂದ್ರ ಪ್ರಸಾದರ ಅಧ್ಯಕ್ಷತೆ ಯಲ್ಲಿ ರಚಿತವಾಗಿ ಇಡೀ ರಾಷ್ಟ್ರವು ಸ್ವೀಕರಿಸಿ ಅಳವಡಿಸಿಕೊಂಡ ಸಂವಿಧಾನವು ಅಸ್ಪೃಶ್ಯತೆ ಯನ್ನು ಅಪರಾಧವೆಂದು ಪರಿಗಣಿಸಿದ್ದು ಮಾತ್ರವಲ್ಲದೆ ದಲಿತರು ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಇತರರ ಸಮಾನ ಬರುವಂತೆ ಮೀಸಲಾತಿಯನ್ನು ಸರ್ವಾನುಮತದಿಂದ ಅಳವಡಿಸಿತು. ಈ ಸಂವಿಧಾನ ವಿಧಾಯಕ ಸಭೆಯಲ್ಲಿ ಭಾಗವಹಿಸಿದ್ದವರು ಮೇಲುಜಾತಿ ಎಂದು ಪರಿಗಣಿತರಾದವರೇ.

ಸರ್ದಾರ್ ಪಟೇಲ್, ರಾಜಾಜಿ, ಎಚ್.ಸಿ. ಮುಖರ್ಜಿ, ಕೆ.ಎಂ. ಮುನ್ಷಿ, ಪಟ್ಟಾಭಿ ಸೀತಾರಾಮಯ್ಯ, ದುರ್ಗಾಬಾಯಿ, ಠಾಕುರ್‌ದಾಸ್ ಭಾರ್ಗವ, ಬಿ.ವಿ. ಕೇಸ್ಕರ್, ಟಿ.ಟಿ. ಕೃಷ್ಣಮಾಚಾರಿ, ಅನಂತಶಯನಂ ಅಯ್ಯಂಗಾರ್, ಕೆ. ಸಂತಾನಂ, ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್, ಪಂಡಿತ ಗೋವಿಂದವಲ್ಲಭ ಪಂತ್, ಸರ್ದಾರ್ ಪಣಿಕ್ಕರ್, ಕೆ. ಹನುಮಂತಯ್ಯ, ಆಚಾರ್ಯ ಕೃಪಲಾನಿ, ಜೈರಾಮ್‌ದಾಸ್ ದೌಲತ್‌ರಾಮ್, ಮೀನು ಮಸಾನಿ, ಹಂಸಾ ಮೆಹ್ತಾ, ರಾಜಕುಮಾರಿ ಅಮೃತಾ ಕೌರ್..... ಹೀಗೆ ಸಾಗುತ್ತದೆ ಸಂವಿಧಾನ ವಿಧೇಯಕ ಸಭೆಯ ಸದಸ್ಯರ ಹೆಸರುಗಳು. ಅಂಬೇಡ್ಕರರು ಕರಡು ಪ್ರತಿ ಸಿದ್ಧಪಡಿಸಿದ ಸಮಿತಿಯ ಅಧ್ಯಕ್ಷರಾಗಿದ್ದರು. ಕಾನೂನು ಸಚಿವರಾಗಿದ್ದುದರಿಂದ ಇವರೆಲ್ಲ ಸಿದ್ಧಪಡಿಸಿದ ಸಂವಿಧಾನದ ಕರಡನ್ನು ಚರ್ಚೆ ಮತ್ತು ಅನುಮೋದನೆಗೆ ಮಂಡಿಸಿದರು. ಆದರೆ ಸಂವಿಧಾನ ವನ್ನು ನಿರ್ಮಿಸಿದವರು ಬಹುತೇಕ ಮೇಲುಜಾತಿ ಎಂದು ಪರಿಗಣಿತರಾಗಿದ್ದವರು. ಅಸ್ಪೃಶ್ಯತೆಯನ್ನು ಅಪರಾಧವೆಂದು ಪರಿಗಣಿಸಿ, ದಲಿತರಿಗೆ ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಮೀಸಲಾತಿ ಇರಬೇಕೆಂದು ನಿರ್ಧರಿಸಿದವರೂ ಅವರೇ. ಎಂದರೆ ಮನು ಮಾಡಿದ್ದ ಅನ್ಯಾಯವನ್ನು ಅರಿತು ಅದನ್ನು ತೊಡೆದು ಹಾಕಿದವರೂ ಅವರೇ. ಆಧುನಿಕ ಭಾರತದ ಪ್ರಜ್ಞೆಯ ಪ್ರತಿನಿಧಿಗಳು ಅವರಾಗಿದ್ದರು. ಅಲ್ಲಿಗೆ ಮನು ಧರ್ಮಶಾಸ್ತ್ರದ ಈ ಅಂಶವನ್ನು ನಮ್ಮ ಇಂದಿನ ಧರ್ಮಶಾಸ್ತ್ರವಾದ ಸಂವಿಧಾನದಿಂದ ಸುಟ್ಟು ಬೂದಿ ಮಾಡಿದರು. ಹಾಗೆಂದು ಸಾವಿರಾರು ವರ್ಷಗಳಿಂದ ಆಚರಣೆಯಲ್ಲಿದ್ದ ಪದ್ಧತಿಗಳು ಒಂದೇ ದಿನದಲ್ಲಿ ಬದಲಾಯಿಸಿವೆ, ಹೊಸ ಸಂವಿಧಾನದ ಆಶಯಗಳು ಆರು ದಶಕಗಳ ಅವಧಿಯಲ್ಲಿ

ಪೂರ್ತಿಯಾಗಿ ಈಡೇರಿವೆ ಎಂದು ನಾನು ಹೇಳುತ್ತಿಲ್ಲ. ನಲವತ್ತು ವರ್ಷದ ಹಿಂದೆ ಬರೆದ 'ದಾಟು' ಕಾದಂಬರಿಯಲ್ಲಿ ಹರಿಜನರನ್ನು ಇತರ ಮೇಲುಜಾತಿಗಳು, ಅದರಲ್ಲೂ ಪ್ರಬಲ ಜಾತಿಗಳು ಗ್ರಾಮಾಂತರ ಪ್ರದೇಶದಲ್ಲಿ ಹೇಗೆ ತುಳಿಯುತ್ತಿವೆ (ತುಳಿಯುತ್ತಿದ್ದವು) ಎಂಬುದನ್ನು ನಾನು ಚಿತ್ರಿಸಿದ್ದೇನೆ.

ಮೀಸೆಬಿಟ್ಟ ಮೋಹನದಾಸನಿಗೆ ಮಂತ್ರಿ ಮೇಲುಗಿರಿ ಗೌಡರ ಅಪ್ಪ ಗಾಜಿನ ಲೋಟ ದಿಂದ ಹೊಡೆಸಿ ಅವನ ತುಟಿಯು ಸೀಳಿ, ಗಾಯದ ಗುರುತು ಇನ್ನೂ ಇರುವುದು ಕಾದಂಬರಿ ಯಲ್ಲಿ ಬಂದಿದೆ. ಕೆಲವಂಶಗಳಲ್ಲಿ ಬದಲಾವಣೆ ಕಂಡಿದ್ದರೂ ಇನ್ನೂ ಕೆಲವಂಶಗಳಲ್ಲಿ ಹಳ್ಳಿಗರು ಬದಲಾಗಿಲ್ಲ. ಬೆಂಡಿಗೇರಿ, ಕಂಬಾಲಪಲ್ಲಿ ಮೊದಲಾದ ಇತ್ತೀಚಿನ ಘಟನೆಗಳು ಇಡೀ ಹಿಂದೂ ಸಮಾಜವು ನಾಚಿಕೆಯಿಂದ ತಲೆ ತಗ್ಗಿಸುವಂಥವು. ರಾಜಕಾರಣಿಗಳಲ್ಲಿ ಪ್ರಾಮಾಣಿಕತೆ ಇದ್ದರೆ ಇಂಥ ಘಟನೆಯನ್ನು Fast tracಿನಲ್ಲಿ prosecute ಮಾಡಿಸಿ, ಅಸ್ಪೃಶ್ಯತೆಯ ವಿರುದ್ಧ ಮಾತ್ರವಲ್ಲ, ಮಾನವತೆಯ ವಿರುದ್ಧ ಮಾಡಿದ ಹೇಯ ಕೃತ್ಯಗಳನ್ನೂ ಸೇರಿಸಿ ಇಪ್ಪತ್ತು ಮೂವತ್ತು ವರ್ಷಗಳ ಸಂಯುಕ್ತ ಶಿಕ್ಷೆ ಹಾಕಿಸಬಹುದಿತ್ತು. ಮರಣ ದಂಡನೆಗೆ ಇದು ತಕ್ಕ ಘಟನೆಯಾದರೂ ಕಾನೂನಿನಲ್ಲಿ ಅವಕಾಶವಿದೆಯೇ ಎಂಬುದನ್ನು ವಿಚಾರಿಸಬೇಕು.

**ಅಸ್ಪೃಶ್ಯತೆಯ ವಿರುದ್ಧ ಜನರಿಗೆ ತಿಳಿ ಹೇಳಬೇಕು:**

ಮಠಾಧಿಪತಿಗಳು ನಗರ ಪ್ರದೇಶದಲ್ಲಿ ಭಕ್ತಿ ಪ್ರಪತ್ತಿಗಳ ವಿಷಯವಾಗಿ ಪ್ರವಚನ ಮಾಡುವ ಬದಲು (ಜತೆಗೆ) ಗ್ರಾಮಾಂತರ ಪ್ರದೇಶದಲ್ಲಿ ಅಸ್ಪೃಶ್ಯತೆಯ ವಿರುದ್ಧ ಜನರಿಗೆ ತಿಳಿಯ ಹೇಳಬೇಕು. ಆದರೆ ನಗರ ಪ್ರದೇಶಗಳಲ್ಲಿ, ಶಾಲೆ, ಕಾಲೇಜು, ವಿಶ್ವವಿದ್ಯಾನಿಲಯ ಪ್ರವೇಶಾತಿಗಳಲ್ಲಿ, ಸರಕಾರಿ ನೌಕರಿಗಳಲ್ಲಿ ಸಾಕಷ್ಟು ಪ್ರಗತಿ, ಬದಲಾವಣೆಗಳಾಗಿರುವುದನ್ನು ಪ್ರಾಮಾಣಿಕ ಮನಸ್ಸಿನ ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ. ಕೆಳದರ್ಜೆಯ, ಮಧ್ಯಮ ದರ್ಜೆಯ, ಮೇಲು ದರ್ಜೆಯ ಎಷ್ಟೋ ದಲಿತ ಅಧಿಕಾರಿಗಳಿದ್ದಾರೆ. ಇಲಾಖಾ ಮುಖ್ಯರಿ ದ್ದಾರೆ. ವಿಶ್ವವಿದ್ಯಾನಿಲಯಗಳಲ್ಲಿ ಪ್ರೊಫೆಸರುಗಳು, ವಿಭಾಗ ಮುಖ್ಯಸ್ಥರುಗಳಾಗಿದ್ದಾರೆ. ಉಪ ಕುಲಪತಿಗಳಿದ್ದಾರೆ. ಹೈಕೋರ್ಟ್, ಸುಪ್ರೀಂಕೋರ್ಟ್‌ಗಳ ನ್ಯಾಯಾಧೀಶರು, ಮುಖ್ಯ ನ್ಯಾಯಮೂರ್ತಿಗಳಿದ್ದಾರೆ. ರಾಷ್ಟ್ರಾಧ್ಯಕ್ಷರೂ ಆಗಿದ್ದಾರೆ. ಇವೆಲ್ಲವೂ ನಮ್ಮ ಸಂವಿಧಾನ ದಿಂದ, ಆಧುನಿಕ ಧರ್ಮಶಾಸ್ತ್ರದಿಂದ ಆಗಿರುವವು. ಇವರಲ್ಲಿ ಸ್ವಂತ ಶ್ರೇಷ್ಠತೆಯನ್ನು ಸಾಧಿಸಿರುವವರೂ ಇದ್ದಾರೆ. ಎಷ್ಟೋ ಅಂತರ್ಜಾತೀಯ, ದಲಿತ ಗಂಡಸರು ಮೇಲು ಜಾತಿಯ ಹೆಣ್ಣುಗಳನ್ನು ನಗರ ಪ್ರದೇಶಗಳಲ್ಲಿ, ಉದ್ಯೋಗಿ ವರ್ಗದಲ್ಲಿ ಮದುವೆಯಾಗಿರು ವುದು, ಆಗುತ್ತಿರುವುದೂ ಉಂಟು. ಇಷ್ಟೆಲ್ಲಾ ಪ್ರಗತಿ ಕೇವಲ ಆರು ದಶಕದಲ್ಲಿ ಆಗಿರುವು ದಕ್ಕೆ ಕಣ್ಣು ಮುಚ್ಚಿ ಕೆಲವು ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನೂ ಆಚರಣೆಯಲ್ಲಿರುವ ಅಸ್ಪೃಶ್ಯತೆಯನ್ನೇ ಉತ್ಪ್ರೇಕ್ಷಿಸುವ ಕೆಲಸವನ್ನು ವಿದ್ಯಾವಂತ ದಲಿತರೇ ಮಾಡುತ್ತಿದ್ದಾರೆ.

ಮೀಸಲಾತಿ ಪಡೆದು ಮುಂದೆ ಬಂದವರಲ್ಲಿ ಕೆನೆಪದರವನ್ನು ವಿಂಗಡಿಸಿ ಅವರನ್ನು ಮೀಸಲಾತಿಯಿಂದ ಹೊರಗಿಟ್ಟು, ಆ ಸೌಲಭ್ಯವನ್ನು ವಂಚಿತ ದಲಿತರಿಗೆ ಕೊಡುವಂತೆ ಸುಪ್ರೀಂಕೋರ್ಟ್ ಹಲವು ಬಾರಿ ಸೂಚಿಸಿದಾಗ, ಆಕಾಶ ಮುಟ್ಟುವಂತೆ ಬೊಬ್ಬೆ ಹಾಕುವವರು ಮೀಸಲಾತಿಯಿಂದ ಮುಂದೆ ಬಂದು ಶ್ರೀಮಂತರಾಗಿರುವವರೇ. ನನಗೆ ಗೊತ್ತಿರುವ ಒಬ್ಬರು ಮೀಸಲಾತಿಯಿಂದ ಎಂಬಿಬಿಎಸ್ ಓದಿ, ಎಂಡಿ ಮಾಡಿ ಸರಕಾರಿ ಆಸ್ಪತ್ರೆಗಳಲ್ಲಿ ಪ್ರಮುಖ ಸ್ಥಾನ ಪಡೆದು, ನಿವೃತ್ತರಾಗಿ ಈಗ ಹಣ ಹರಿಯುತ್ತಿರುವ ದೊಡ್ಡ ನರ್ಸಿಂಗ್ ಹೋಂನ ಮಾಲಿಕರಾಗಿರುವ ಮಹನೀಯರು ತಮ್ಮ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಮೀಸಲಾತಿ ಬಲದಿಂದ ಮೆಡಿಕಲ್ ಸೀಟು ಗಿಟ್ಟಿಸಿ, ಎಂಡಿ, ಎಂಎಸ್‌ಗಳಿಗೂ ನುಗ್ಗಿಸಿದ್ದಾರೆ. ಸಾಮಾನ್ಯ ಪ್ರವೇಶದಲ್ಲಿ ಆರು ಸಾವಿರದ ಸ್ಥಾನ ಪಡೆದ ಅವರ ಮಕ್ಕಳು ಮೀಸಲಾತಿಯಲ್ಲಿ 15ನೇ ಸ್ಥಾನ ಪಡೆದು ಎಂಡಿಗೆ ಪ್ರವೇಶ ಗಿಟ್ಟಿಸಿದ್ದಾರೆ. ಆ ಪ್ರವೇಶವು ತಮ್ಮ ಆಜನ್ಮಸಿದ್ಧ ಹಕ್ಕು ಎಂದೇ ಅವರು ನಂಬಿದ್ದಾರೆ, ವಾದ ಮಾಡುತ್ತಾರೆ. ಆಧುನಿಕ ಮನುವಾದಿಗಳು ಯಾರು? ಒಮ್ಮೆ ಒಬ್ಬ ದಲಿತ ಕಾರ್ಮಿಕ ನನ್ನಲ್ಲಿ ಬಂದು ತನ್ನ ಕಷ್ಟ ಹೇಳಿಕೊಂಡ, 'ನನ್ನ ಮಗ 72 ಪರ್ಸೆಂಟ್ ಅಂಕ ಗಳಿಸಿದರೂ ಪಾಲಿಟೆಕ್ನಿಕ್‌ನಲ್ಲಿ ಪ್ರವೇಶ ಸಿಗಲಿಲ್ಲ. ಈ ಅನ್ಯಾಯದ ಹಿಂದೂ ಸಮಾಜದಲ್ಲಿ ನಮ್ಮಂಥೋರು ಏನು ಮಾಡಬೇಕು?' ನಾನು ಆತನಿಗೆ ಬಿಡಿಸಿ ಹೇಳಿದೆ, 'ಉತ್ತಮ ಶಾಲೆಗೆ ಕಳಿಸಿ ಮನೆಯಲ್ಲಿ ತಮ್ಮ ಮಕ್ಕಳಿಗೆ ಸರಿಯಾಗಿ ಪಾಠ ಹೇಳಿಸಿಕೊಳ್ಳುವ ದಲಿತ ಮಕ್ಕಳು ನಿಮ್ಮ ಮಗನಿಗಿಂತ ಹೆಚ್ಚು ಶೇಕಡ ಅಂಕ ತೆಗೆದು ಶೇ. 22ರ ಮೀಸಲಾತಿಯಲ್ಲಿ ಪ್ರವೇಶ ದೊರಕಿಸಿಕೊಂಡಿದ್ದಾರೆ. ವಾಸ್ತವವಾಗಿ ಮೀಸಲಾತಿ ಇರಬೇಕಾದದ್ದು ನಿಮ್ಮಂಥೋರ ಮಕ್ಕಳಿಗೆ. ಮುಂದುವರಿದ ನಿಮ್ಮವರೇ ನಿಮ್ಮ ಅವಕಾಶವನ್ನ ನುಂಗುತ್ತಿದ್ದಾರೆ': ಆತನಿಗೆ ಅದು ಅರ್ಥವಾಯಿತು. ಆದರೆ ಆತ ಅಸಹಾಯಕ.

### ಮನುವನ್ನು ಎಳೆದು ತರುವುದು ಏಕೆ?

ನಮ್ಮ ಸಮಾಜದ, ದೇಶದ, ಯಾವುದೇ ಸಮಸ್ಯೆಯನ್ನು ತೆಗೆದರೂ ಮನುವನ್ನು ತರುವುದು, ಬ್ರಾಹ್ಮಣರನ್ನು ಎಳೆದು ತರುವುದು ಸಮಸ್ಯಾ ಪರಿಹಾರದ ಏಕೈಕ ಮಾರ್ಗವೆಂಬಂತೆ ಸೆಮಿನಾರು ಮಾಡುವುದನ್ನು ಬಿಟ್ಟರೆ ದಲಿತರಿಗೆ, ಬಂಡಾಯದವರಿಗೆ ಬೇರೆ ವಿಚಾರ ಹೊಳೆಯುವುದಿಲ್ಲ. ಕಮ್ಯುನಿಸ್ಟರದಂತೂ ಸ್ಥಗಿತ ಮೆದುಳು.

ಡಿ.ಡಿ. ಕೋಸಾಂಬಿ, ಭಗವತ್ ಶರಣ ಉಪಾಧ್ಯಾಯರಂಥ ಮಾರ್ಕ್ಸ್‌ವಾದಿಗಳು ಬ್ರಿಟಿಷ್ ಮತ್ತು ಮಿಷನರಿ ಇತಿಹಾಸಕಾರರು ಸೃಷ್ಟಿಸಿದ ಆರ್ಯರ ಆಕ್ರಮಣ, ಆರ್ಯ ದ್ರಾವಿಡ ಜಗಳ, ಹೊರಗಿನಿಂದ ಬಂದ ವಿವಿಧ ಜನಾಂಗಗಳು ಮುಂತಾದ ಸಿದ್ಧಾಂತಗಳನ್ನೇ ಪುನರುಚ್ಚರಿಸಿದರು. ಅವರ ಪುನರುಚ್ಚಾರಣೆಯನ್ನೇ ಗಿಳಿಪಾಠದಂತೆ ಒಪ್ಪಿಸುವ ನಮ್ಮ ರಾಜಕಾರಣಿ ವಿಚಾರವಾದಿಗಳಿಗೆ ಆನಂತರ ವಿಜ್ಞಾನಿಗಳು ನಡೆಸಿದ ಸಿಂಧೂ ಅನ್ವೇಷಣದ

ಪರಿಚಯವಿಲ್ಲ. Geological Survey of Indiaದ ನಿರ್ದೇಶಕರಾಗಿದ್ದ ಡಾ. ಬಿ.ಪಿ. ರಾಧಾಕೃಷ್ಣ ಅವರ Vedic Saraswati ಮತ್ತು ಎನ್.ಎಸ್. ರಾಜಾರಾಮ್ ಅವರ Politics of History: Aryan Invasion Theory and the Subversion of Scholarship ಇಂಥ ಗ್ರಂಥಗಳನ್ನು ಅವರು ಓದಬೇಕು.

ಹಿಂದೂ ದೇವರುಗಳನ್ನು ಬಳಸಿ ಹಿಂದೂ ಧರ್ಮವನ್ನು ಹೀಗಳೆಯುವ ತಂತ್ರವನ್ನು ಕ್ರೈಸ್ತ ಮಿಷನರಿಗಳು, ಕಸುಬುದಾರಿಕೆಯ ನೈಪುಣ್ಯದಿಂದ ಮಾಡುತ್ತಾರೆ. ಬುದ್ಧಿಜೀವಿಗಳೂ ಅದನ್ನೇ ಹಿಡಿದು ಜಗ್ಗುತ್ತಾರೆ. ಮೂರ್ತಿರಾಯರ 'ದೇವರು' ಪುಸ್ತಕದಲ್ಲಿರುವ ಬಹುತೇಕ ಗೇಲಿಯು ಈ ಮನಸ್ಸಿನಿಂದ ಮೂಡಿದುದು. ಯಾವ ಸಂಸ್ಕೃತಿಯಲ್ಲೂ ಗಹನವಾದ ವಿಚಾರಗಳು ಮಿಥ್ ರೂಪದಲ್ಲೇ ಅಭಿವ್ಯಕ್ತಗೊಳ್ಳುತ್ತವೆ. ಗ್ರೀಕ್ ಮಿಥ್‌ಗಳು ಹುಟ್ಟಿದ್ದೇ ಹೀಗೆ. ಪ್ಲೇಟೋನ ಬರಹಗಳಲ್ಲಿ ಮೂಡಿಬರುವ ಹಲವಾರು ಮಿಥ್‌ಗಳು ಇಂಥ ಕಾರ್ಯವನ್ನೇ ಮಾಡುತ್ತವೆ. ವೇದ ಉಪನಿಷತ್ತುಗಳು ಹಲವಾರು ಗಹನ ಕಲ್ಪನೆಯನ್ನು, ಮಿಥ್ ರೂಪದಲ್ಲೇ ವ್ಯಕ್ತಗೊಳಿಸಿವೆ. ಸವಿತೃ ಎಂದರೆ ಸೂರ್ಯ; ಬೆಳಕು; ಜೀವನದ, ಜೀವದ ಅಧಿಪತಿ. ಅವನಿದ್ದಲ್ಲಿ ಮೃತ್ಯುವಿಗೆ ಅವಕಾಶವಿಲ್ಲ. ಆ ಸವಿತೃವೇ ಮಿಥ್‌ನ ರೂಪದಲ್ಲಿ ಸಾವಿತ್ರಿಯಾಗಿ ಆನಂತರ ಸಾವಿತ್ರಿ, ಸತ್ಯವಾನರ ಕಥೆಯಾಯಿತು. ಈ ಕಥೆಯು ಆನಂತರದ ಶತಮಾನ, ಸಹಸ್ರಮಾನಗಳಲ್ಲಿ ಹಲವಾರು ಕವಿ, ಕಥೆಗಾರ, ನಾಟಕಕಾರರ ಕೈಗೆ ಸಿಕ್ಕಿ ನಾನಾ ಒತ್ತು, ನಾನಾ ರೂಪ ತಾಳಿತು.

ಆಯಾ ಸಾಹಿತಿಯ ದಾರ್ಶನಿಕ ಯೋಗ್ಯತೆಗೆ ತಕ್ಕಂತೆ ಈ ಕಥೆಯು ಗುರುತ್ವವನ್ನೋ, ಲಘುತ್ವವನ್ನೋ ಪಡೆದುಕೊಂಡಿತು. ಯಾರು ಏನು ವರ ಕೇಳಿದರೂ ವಿವೇಚನೆ ಇಲ್ಲದೆ ಕೊಟ್ಟರೆ ಅನಾಹುತವಾಗುತ್ತದೆಂಬ ನೀತಿಯನ್ನು ವ್ಯಕ್ತಪಡಿಸಲು ಮೋಹಿನಿ ಭಸ್ಮಾಸುರನ ಕಥೆ ಸೃಷ್ಟಿಯಾಯಿತು. ವರ ಪಡೆದ ಭಸ್ಮಾಸುರನು ವರಕೊಟ್ಟ ಶಿವನ ತಲೆಯ ಮೇಲೆಯೇ ಕೈ ಇಡಲು ಉದ್ಯುಗಿಸಿದಾಗ, ಹೆದರಿ ಓಡಿದ ಶಿವನು ತನ್ನ ಸ್ನೇಹಿತ ವಿಷ್ಣುವನ್ನು ಆರ್ತನಾಗಿ ಕೂಗಿಕೊಂಡಾಗ ವಿಷ್ಣುವು ಸುಂದರಕನ್ಯೆ ಮೋಹಿನಿಯ ರೂಪ ತಾಳಿ ಭಸ್ಮಾಸುರನನ್ನು ಸಂಮೋಹನಗೊಳಿಸಿ, ಅವನು ತನ್ನ ಕೈಯನ್ನು ತನ್ನ ತಲೆಯ ಮೇಲೆ ಇಟ್ಟುಕೊಳ್ಳುವಂತೆ ಮಾಡಿದ. ಇಲ್ಲಿಯವರೆಗಿನದು ಮೂಲ ಕಥೆ ಅಥವಾ ಮಿಥ್‌ದ ಪ್ರಥಮ ಹಂತ ಆದರೆ ಮೂಲ ಮಿಥ್‌ದ ದಾರ್ಶನಿಕ ಗಹನತೆ ಇಲ್ಲದ ದ್ವಿತೀಯ, ತೃತೀಯ ಹಂತದ ಕತೆಗಾರರ ಕೈಗೆ ಸಿಕ್ಕಿ ಪಾತ್ರಗಳನ್ನು ನಗೆಪಾಟಲಿನ ಮಟ್ಟದಲ್ಲಿ ತಿರುಗಿಸಿದರು. ಭಸ್ಮಾಸುರನು ಸತ್ತ ಮೇಲೆ ಶಿವನು ಮೋಹಿನಿಯಲ್ಲಿ ಮೋಹಗೊಳ್ಳುತ್ತಾನೆ. ಶಿವ ಮತ್ತು ಮೋಹಿನಿಯರು ಮದುವೆಯಾಗಿ ಒಂದು ಗಂಡು ಮಗುವನ್ನು ಪಡೆಯುತ್ತಾರೆ. ಇವನು ತನ್ನ ಸ್ನೇಹಿತ, ಹೆಣ್ಣು ವೇಷಧಾರಿ ವಿಷ್ಣು ಎನ್ನುವುದು ಶಿವನಿಗೆ ಗೊತ್ತಿರಲಿಲ್ಲವೆ? ತಾನೊಬ್ಬ ಹೆಣ್ಣಿನ ಮೇಕಪ್ ಮಾಡಿಕೊಂಡ ಗಂಡು ಎಂಬುದನ್ನು ವಿಷ್ಣುವು ಮರೆತನೆ? ಮರೆತಿದ್ದರೂ ಅವನು ಗರ್ಭಿಣಿಯಾಗುವುದು ಹೇಗೆ? ಪುರಾಣಕಥೆಗಳನ್ನು ಜನಸಾಮಾನ್ಯರ ರಂಜನೆಗೆ ಇಳಿಸುತ್ತಾ

ಹೋಗುವ ಮೆಟ್ಟಿಲು ಮೆಟ್ಟಿಲುಗಳಲ್ಲಿ ಇಂಥ ಅಸಹ್ಯಕರ ಅಧ್ವಾನಗಳು ಸೃಷ್ಟಿಯಾಗುವುದು ಸಹಜ. ಜನಸಾಮಾನ್ಯರು ಹಿಂದೂ ಧರ್ಮವೆಂದು ಭ್ರಮಿಸುವುದು ಇಂಥ ಕಥೆಗಳನ್ನು. ಮಿಷನರಿಗಳು ಮತ್ತು ಬುದ್ಧಿಜೀವಿಗಳು ಹೀಯಾಳಿಸುವುದು ಇಂಥ ದೇವ-ದೇವತೆಗಳನ್ನು. ಮೂಲ ಮಿಥ್‌ಗಳು ನಿರ್ದೇಶಿಸುವ ತಮಗೆ ಅತೀತವಾದ ತತ್ತ್ವಗಳನ್ನು ಗ್ರಹಿಸಿ ವಿಶ್ಲೇಷಿಸುವ ಯೋಗ್ಯತೆಯಾಗಲಿ, ಉದ್ದೇಶಿತ ಪ್ರಾಮಾಣಿಕತೆಯಾಗಲಿ ಮಿಷನರಿಗಳಿಗಿಲ್ಲ, ಬುದ್ಧಿಜೀವಿಗಳಿಗಂತೂ ಇಲ್ಲವೇ ಇಲ್ಲ.

ರಾಮಾಯಣ, ಮಹಾಭಾರತಗಳನ್ನು ಬರೆದ ವಾಲ್ಮೀಕಿ ವ್ಯಾಸರುಗಳನ್ನು ಮಹರ್ಷಿಗಳೆಂದೇ ಕರೆದಿದ್ದಾರೆ. ಅವರು ವೇದೋಪನಿಷತ್ತುಗಳ ದರ್ಶನವನ್ನು ಪಡೆದ, ಕಾಣಿಸಿದ ದಾರ್ಶನಿಕರು. ಕವಿ ಎಂಬ ಶಬ್ದಕ್ಕೆ ದಾರ್ಶನಿಕ ಎಂಬ ಮೂಲ ಅರ್ಥವಿದೆ. ವೇದ ಋಷಿಗಳನ್ನು ಕವಿ ಎಂದೇ ಕರೆಯುತ್ತಿದ್ದರು. ವ್ಯಾಸ, ವಾಲ್ಮೀಕಿಗಳು ಈ ಅರ್ಥದ ಕವಿಗಳು; ಜತೆಗೆ ಸಾಹಿತ್ಯದ ಅರ್ಥದ ಕವಿಗಳೂ ಹೌದು. ಆದರೆ ಕಾಳಿದಾಸ, ದಂಡಿ ಮೊದಲಾದವರನ್ನು ಕವಿ ಎಂದು ವರ್ಣಿಸುವ ಅರ್ಥದಲ್ಲಿ ನಾವು ವ್ಯಾಸ, ವಾಲ್ಮೀಕಿಗಳನ್ನು ಕವಿ ಎನ್ನುವುದಿಲ್ಲ. ವ್ಯಾಸ, ವಾಲ್ಮೀಕಿಗಳು ಗಹನವಾದ ದರ್ಶನವನ್ನು ವ್ಯಕ್ತಪಡಿಸುವ ಸಾಧನವಾಗಿ ಮೂಲ ಮಿಥ್‌ಗಳನ್ನು ಸೃಷ್ಟಿಸಿದರು. ಅವರು ಸೃಷ್ಟಿಸಿದ ರಾಮ, ಸೀತೆ, ಕೃಷ್ಣರು ಈ ಗುಣದವರು. ಈ ಪಾತ್ರಗಳ ಮೂಲವು ಅಧ್ಯಾತ್ಮದಲ್ಲೂ ಮಾನವ ಸ್ವರೂಪವು ಸಾಹಿತ್ಯದ realismನಲ್ಲೂ ಏಕಕಾಲದಲ್ಲಿ ಇವೆ. ಆದ್ದರಿಂದಲೇ ವಾಸ್ತವವಾದಿ ಸಾಹಿತ್ಯ ವಿಮರ್ಶೆಯಿಂದ ಈ ಪಾತ್ರಗಳನ್ನು ಅಳೆಯುವುದು ಸಾಧ್ಯವಿಲ್ಲ. ಆದರೆ ಅನಂತರದ ಕವಿಗಳು, ಇನ್ನೂ ಅನಂತರದ ಹರಿಕಥೆ ದಾಸರು ಮತ್ತೂ ಅನಂತರದ ಕಂಪನಿ ನಾಟಕಗಳು, ಇತ್ತೀಚಿನ ಸಿನಿಮಾಗಳು ಈ ಪಾತ್ರಗಳನ್ನು ಕಳ್ಳ ಸುಳ್ಳ ಹಾದರದ ಮಾದರಿಗಳಾಗಿ ಚಿತ್ರಿಸಿವೆ. ಸ್ತ್ರೀವಾದಿ, ಸಮಾಜವಾದಿ ಲೇಖಕರಂತೂ ತಾವು ಬಗ್ಗುಬಡಿಯ ಬೇಕಾದ ಸಾಮಾಜಿಕ ಮಾದರಿಗಳಂತೆ ಅವುಗಳನ್ನು ವಿನ್ಯಾಸಗೊಳಿಸಿ ಅನಂತರ ಅವುಗಳ ಮೇಲೆ ಸೆಮಿನಾರ್ ಮಾಡುತ್ತಾರೆ. ಮಿಷನರಿಗಳು ತಮ್ಮ ಪ್ರಚಾರಕ್ಕೆ ಬಳಸಿಕೊಳ್ಳುವುದು ಹೀಗೆ ವಿನ್ಯಾಸಗೊಂಡ ಪಾತ್ರಗಳನ್ನು. ಮಿಷನರಿಗಳು ನಿಂದೆಗಾಗಿ ಬಣ್ಣಗೆಡಿಸಿದ ಪಾತ್ರಗಳನ್ನೇ 'ಪ್ರಗತಿಪರ' ಲೇಖಕರು ಮಾದರಿಯಾಗಿ ಅಳವಡಿಸಿಕೊಳ್ಳುವುದೂ ಉಂಟು. ಕ್ರೋಧವು ಪ್ರಗತಿ, ಬಂಡಾಯ ಮೊದಲಾದವುಗಳ ಸ್ಥಾಯೀ ಅಂತರ್ಜಲ. ಕ್ರೋಧಾದ್ಭವತಿ ಸಂಮೋಹಃ *(2.63)*

ವ್ಯಾಸಭಾರತದ ಪಾತ್ರಗಳನ್ನು ಮಾನವ ಅನುಭವದ ಹಿಡಿತಕ್ಕೆ ಒಳಪಡಿಸಿ ವಿಶ್ಲೇಷಿಸುವುದು ನನ್ನ 'ಪರ್ವ'ದ ಉದ್ದೇಶವಾಗಿತ್ತು. ಇದರ ಪಾತ್ರಗಳನ್ನು ಹಾಗೆ ಒಳಪಡಿಸುವುದು ನನಗೆ ಹೆಚ್ಚು ಕಷ್ಟವಾಗಲಿಲ್ಲ. ಆದರೆ ಎಷ್ಟು ಕಷ್ಟಪಟ್ಟರೂ ಕೃಷ್ಣನನ್ನು ಹಿಡಿದು ವಿವರಿಸುವುದು ಸಾಧ್ಯವಾಗಲೇ ಇಲ್ಲ. ಉಳಿದ ಪಾತ್ರಗಳನ್ನು ನೇರವಾದ ಸ್ವ ವಿಶ್ಲೇಷಣೆಗೆ ಅಳವಡಿಸಿದಂತೆ ಕೃಷ್ಣನನ್ನು ಒಳಪಡಿಸುವುದು ಅಸಾಧ್ಯವಾಯಿತು. ಬೇರೆ ಬೇರೆ

ತಂತ್ರಗಳನ್ನನುಸರಿಸಿದರೂ ಕೃಷ್ಣನು ಪೂರ್ತಿ ಹಿಡಿತಕ್ಕೆ ಸಿಕ್ಕದ ಅದಮ್ಯ ಪಾತ್ರ. ಈ ಬಗೆಗೆ ನನ್ನ 'ಪರ್ವ ಬರೆದದ್ದು' ಎಂಬ ಪ್ರಬಂಧದಲ್ಲಿ ವಿವರಿಸಿದ್ದೇನೆ. ಸಾಹಿತಿಗಳಾದ ನಾವೆಲ್ಲ ವ್ಯಾಸ, ವಾಲ್ಮೀಕಿಗಳ ಸೃಷ್ಟಿಗಳನ್ನು ಒಂದಲ್ಲೊಂದು ರೀತಿಯಲ್ಲಿ ಉಂಡು ಬೆಳೆದವರೇ. ನಮ್ಮ ಶಕ್ತ್ಯನುಸಾರ ನಾವು ಆ ಊಟವನ್ನು ಅರಗಿಸಿಕೊಳ್ಳುತ್ತೇವೆ. ಸೀಮಾತೀತವಾದ ವಾಲ್ಮೀಕಿ, ವ್ಯಾಸರುಗಳ ದರ್ಶನವನ್ನು ನಮ್ಮ ಸೀಮಿತ ಮಾನವಿಕ ದೃಷ್ಟಿಯಿಂದ ಗ್ರಹಿಸಿ ವಿಮರ್ಶಿಸುವ ಅಧಿಕಾರ ನಮಗಿದೆ. ಆದರೆ ಅದರಲ್ಲಿ ಗಂಭೀರವಾದ ಹುಡುಕಾಟವಿರಬೇಕು. ಕುಚೋದ್ಯ, ಕುಹಕ ಮತ್ತು ಮತಾಂತರಗಳಂತಹ ಹೀನ ಉದ್ದೇಶಗಳಿರಬಾರದು.

ಸಾಮಾನ್ಯ ಮನುಷ್ಯನ ಗ್ರಹಿಕೆಗೆ ಎಷ್ಟೋ ಸಂದರ್ಭಗಳಲ್ಲಿ ಅಮೂರ್ತವಾಗಿರುವ ವೇದೋಪನಿಷತ್ತುಗಳ ದರ್ಶನವನ್ನು ಸಾಮಾನ್ಯನಿಗೂ ಮೂರ್ತ ಮಾಡಿಕೊಟ್ಟ ಮಹಾ ಸಾಧನ ರಾಮಾಯಣ-ಮಹಾಭಾರತಗಳದು. ಮನುಷ್ಯ ಜೀವನದ ಅತ್ಯುಚ್ಚ ಮೌಲ್ಯಗಳ ವಿವೇಚನೆ ಮಾಡುವ ಆ ಪಾತ್ರಗಳನ್ನು ಕಳ್ಳ ಸುಳ್ಳ ಹಾದರಬಡಕ ಎಂದು ಮಸಿ ಬಳಿಯುವವರ ಸಂಸ್ಕೃತಿಗೆ ಏನೆನ್ನಬೇಕು? ಆ ಮೌಲ್ಯಗಳ ವಿವೇಚನೆಯಲ್ಲಿ ನಾವೂ ಭಾಗಿಗಳಾಗಬೇಕು. ಸಾಧ್ಯವಾದರೆ ಪರ್ಯಾಯ ಮೌಲ್ಯದರ್ಶನವನ್ನು ಕಂಡು ಹಿಡಿಯಬೇಕು.

ಭಾರತೀಯರ ವಿಗ್ರಹಾರಾಧನೆ ಮತ್ತು 'ಬಹುದೇವತೋಪಾಸನೆ'ಯನ್ನು ಸೆಮೆಟಿಕ್ ಮತಗಳು ರೌರವವೆಂಬಂತೆ ಚಿತ್ರಿಸುತ್ತವೆ. ಕ್ರೈಸ್ತಮತವೂ ವಿಗ್ರಹಾರಾಧಕವೇ. ಚರ್ಚಿನಲ್ಲಿರುವ ಏಸುವಿನ ಚಿತ್ರ, ಶಿಲ್ಪ, ಶಿಲುಬೆಯ ಚಿಹ್ನೆಗಳು ವಿಗ್ರಹವಲ್ಲದೆ ಮತ್ತೇನು? ಇಸ್ಲಾಮಿನ ಚಂದ್ರ ಮತ್ತು ನಕ್ಷತ್ರದ ಗುರುತು ವಿಗ್ರಹವಲ್ಲವೆ? ದೇವರನ್ನು ಭಾಷೆಯಲ್ಲಿ ವರ್ಣಿಸಿದ ತಕ್ಷಣ ಅದು ಸಗುಣವಾಗುತ್ತದೆ. ವಿಗ್ರಹವೆಂದರೆ ಅದೇ. ವೇದಾಂತದಂತೆ ನಿರ್ಗುಣಕಲ್ಪನೆಯನ್ನು ಶೋಧಿಸಿದ ಧರ್ಮವು ಪ್ರಪಂಚದಲ್ಲೇ ಇನ್ನೊಂದಿಲ್ಲ. ಆದರೂ ಅದು ಸಗುಣವನ್ನು, ಉಪಾಸಕನ ಮನೋಧರ್ಮಕ್ಕೆ ಅನುಗುಣವಾದ ರೂಪದಲ್ಲಿ ಕಲ್ಪಿಸಿಕೊಳ್ಳಲು ಸ್ವಾತಂತ್ರ್ಯ ಕೊಡುತ್ತದೆ. ಸೆಮಿಟಿಕ್ ಮತೀಯರು ಬಹು ದೇವತೋಪಾಸನೆ ಎಂದು ಧಿಕ್ಕರಿಸುವುದು ಈ ವ್ಯಕ್ತಿ ಸ್ವಾತಂತ್ರ್ಯವನ್ನು. ಏಕೆಂದರೆ ಈ ಮತಗಳು ಮೂಲತಃ ವ್ಯಕ್ತಿ ಸ್ವಾತಂತ್ರ್ಯವನ್ನು ತುಳಿದು ನಾಶ ಮಾಡುವ ಸರ್ವಾಧಿಕಾರಿ ಮನೋಭಾವದವು. ರಾಮಕೃಷ್ಣ ಪರಮಹಂಸರು ಹಲವು ಸಂದರ್ಭಗಳಲ್ಲಿ ಶಿಷ್ಯರೊಡನೆ ಆಡಿದ ಮಾತುಗಳ ಸಂಗ್ರಹ 'ರಾಮಕೃಷ್ಣ ವಚನಾಮೃತ'ದ ಕನ್ನಡ ಅನುವಾದ 'ರಾಮಕೃಷ್ಣ ವಚನವೇದ'ವನ್ನು ಓದಿದರೆ ಸಗುಣ ಮತ್ತು ನಿರ್ಗುಣ, ಏಕ ದೇವತೆ ಮತ್ತು ಬಹುದೇವತೆಗಳಿಗಿರುವ ಪರಸ್ಪರ ಸಂಬಂಧವು ಸ್ಪಷ್ಟವಾಗುತ್ತದೆ. ಯೋಗಿಗೆ ಮಾತ್ರ ಅನುಭವಕ್ಕೆ ಬರುವ ಈ ದಾರ್ಶನಿಕ ವೈಶಾಲ್ಯವು ಸೆಮೆಟಿಕ್ ಸರ್ವಾಧಿಕಾರಕ್ಕೆ ದಕ್ಕುವುದಿಲ್ಲ.

ನಾನು ನನ್ನ ಲೇಖನದಲ್ಲಿ ಹಿಂಸೆಯನ್ನು ಸಮರ್ಥಿಸಿದ್ದೇನೆಂದು ಒಬ್ಬ ಮಹನೀಯರು ಆರೋಪಿಸಿದ್ದಾರೆ. ಇನ್ನೊಬ್ಬರು 'ಕ್ರೈಸ್ತರನ್ನು ಹೊಡೆಯುವುದು, ಬಡಿಯುವುದು, ಅವರ

ಚರ್ಚ್‌ಗಳನ್ನು ಒಡೆಯುವುದು, ಚರ್ಚ್‌ಗಳ ಒಳಗೆ ನುಗ್ಗಿ ದಾಂಧಲೆ ಮಾಡುವುದು ಧೂರ್ತತನ. ಹಿಂದೂ ಮತಾಂಧರ ಈ ಧೂರ್ತತನವನ್ನು ಎತ್ತಿ ಹಿಡಿಯುವುದು ಭೈರಪ್ಪನ ವರಿಗೆ ತರವಲ್ಲ.... ಭೈರಪ್ಪನವರು ಇಷ್ಟು ದೊಡ್ಡ ಲೇಖನ ಬರೆದುದರ ಉದ್ದೇಶ ಕ್ರೈಸ್ತರನ್ನು ದ್ವೇಷಿಸಬೇಕು ಎಂದು ಸಾರುವುದಾಗಿರಬಹುದೇ?' ಎಂದಿದ್ದಾರೆ. ಅವರಿಗೆ ಉತ್ತರವಾಗಿ ನನ್ನ ವಾಕ್ಯಗಳನ್ನು ಇಲ್ಲಿ ಉದ್ಧರಿಸುತ್ತೇನೆ: 'ಪ್ರಜಾಪ್ರಭುತ್ವಾತ್ಮಕವಾಗಿ ಕಾನೂನುಸಮ್ಮತವಾದ ವಿಧಾನಗಳಿಂದ ಮತಾಂತರದ ಪಿಡುಗನ್ನು ತಡೆಯುವುದು ಸಾಧ್ಯ ವಿಲ್ಲವೆಂಬ ಸ್ಥಿತಿಯಲ್ಲಿ ಕೆಲವರಾದರೂ ಹತಾಶರು ಹಿಂಸಾಮಾರ್ಗಕ್ಕೆ ಇಳಿದು ಹಿಂಸಾ ಮಾರ್ಗದ ಪರಿಣಾಮದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ಭೂಗತ ಮಾರ್ಗವನ್ನು ಆರಂಭಿಸಿದರೆ, ಅದಕ್ಕೆ ನೈತಿಕ ಹೊಣೆ ಯಾರದು? ಮುಸ್ಲಿಂ ಭಯೋತ್ಪಾದಕರನ್ನು ನಿವಾರಿಸುವ ಇಚ್ಛೆಯಾಗಲಿ, ಶಕ್ತಿಯಾಗಲಿ ಸರಕಾರ ಮತ್ತು ರಾಜಕೀಯ ಪಕ್ಷಗಳಿಗೆ ಇಲ್ಲದಿರುವಾಗ, ತಾವೇ ಯಾಕೆ ದೇಶದ ಸಂಸ್ಕೃತಿಯ ರಕ್ಷಣೆಯ ಮಾರ್ಗಗಳನ್ನು ಹುಡುಕಬಾರದು ಎಂಬ ವಿಚಾರದ ಜನರು ಇಲ್ಲವೆ? ಸೆಪ್ಟೆಂಬರ್ 11ರ ನಂತರ ಅಮೆರಿಕದಲ್ಲಿ ಒಂದೇ ಒಂದು ಭಯೋತ್ಪಾದನೆ ನಡೆದಿಲ್ಲ. ನಮ್ಮಲ್ಲಿ ಪ್ರತಿದಿನ ಒಂದಲ್ಲ ಒಂದು ಊರಿನಲ್ಲಿ ಹತ್ತಿಪ್ಪತ್ತು ಮೂವತ್ತು ಐವತ್ತು ಜನರನ್ನು ಸಾಯಿಸುತ್ತಲೇ ಇದ್ದಾರೆ....' ಈ ವಾಕ್ಯಗಳಲ್ಲಿ ಹಿಂಸೆಯನ್ನು ಸಮರ್ಥಿಸುವ ಅಥವಾ 'ಹಿಂದೂ ಮತಾಂಧರ ಧೂರ್ತತನ' ವನ್ನು ಎತ್ತಿ ಹಿಡಿಯುವ ಕ್ರೈಸ್ತರನ್ನು ದ್ವೇಷಿಸಬೇಕೆಂದು ಸಾರುವ ಅಭಿಪ್ರಾಯವು ಎಲ್ಲಿದೆ? ವಾಸ್ತವಾಂಶವನ್ನು ವಿಶ್ಲೇಷಿಸಿ ಹೇಳಿದರೂ ಅಹಿಂಸೆಗೆ ಊನವಾಗುತ್ತದೆಂದು ಹೌಹಾರುವ ವರಿಗೆ ಏನೆನ್ನಬೇಕು?

ಇದೇ ಹಿರಿಯರು 'ಕೊನೆಯದಾಗಿ ಒಂದು ಮಾತು. ಭಾರತದಲ್ಲಿ ದಿನಕ್ಕೆ 5000 ಜನರು ಕ್ರೈಸ್ತರಾಗಿ ಪರಿವರ್ತನೆಯಾಗುತ್ತಿದ್ದಾರೆ ಎಂದು ಭೈರಪ್ಪನವರು ಅಂದಾಜು ಮಾಡಿದ್ದಾರೆ. ಈ ಲೆಕ್ಕಾಚಾರದ ಪ್ರಕಾರ ಈ 60 ವರ್ಷಗಳಲ್ಲಿ ಕ್ರೈಸ್ತರಾದವರ ಸಂಖ್ಯೆ 11 ಕೋಟಿ (60X365X5000) ಎಂದಾಯಿತು. ಇದು ನಮ್ಮ ಜನಸಂಖ್ಯೆಯ ಶೇ. 9ರಷ್ಟು. ಭೈರಪ್ಪನವರೇ ಹೇಳುವ ಹಾಗೆ ಕ್ರೈಸ್ತರ ಜನಸಂಖ್ಯೆ ಒಟ್ಟು ಜನಸಂಖ್ಯೆಯ ಶೇ. 2.5ರಷ್ಟು ಮಾತ್ರ ಭಾರತದಲ್ಲಿದೆ. ಜನರಲ್ಲಿ ಗಾಬರಿ ಹುಟ್ಟಿಸುವ ತಂತ್ರ ಇದಿರ ಬಹುದೇ?'

ಈ ಹಿರಿಯರಿಗೆ ನನ್ನ ನಿವೇದನೆ: ನನ್ನ ಲೇಖನವನ್ನು ಮತ್ತೆ ಓದಿ. ನಾನು ಉದ್ಧರಿಸಿರುವ ಫ್ರಾಂಕ್ವಾ ಗೋತಿಯೆ ಅವರ ವಾಕ್ಯ '2001ನೇ ಸೆನ್ಸಸ್ ಪ್ರಕಾರ ಭಾರತದಲ್ಲಿ 23.4 ಲಕ್ಷ ಕ್ರೈಸ್ತರಿದ್ದಾರೆ. ಎಂದರೆ ಶೆ. 2.5ರಷ್ಟೂ ಇಲ್ಲ.' ಗೋತಿಯೇ ಅವರ ಲೇಖನವು 'ಸೋನಿಯಾ ಗಾಂಧಿಯ ಆಡಳಿತದಲ್ಲಿ ನಡೆಯುತ್ತಿರುವ ಕ್ರೈಸ್ತೀಕರಣ ವನ್ನು' ವಿವರಿಸುತ್ತದೆ. ಸೋನಿಯಾ ಗಾಂಧಿ ಪಟ್ಟಕ್ಕೆ ಬಂದು, ಎಂದರೆ ಯುಪಿಎ ಸರಕಾರ ಅಧಿಕಾರಕ್ಕೆ ಬಂದು ನಾಲ್ಕು ವರ್ಷವಾಯಿತು. ಹಿರಿಯರು 60 ವರ್ಷವೆಂದು ತಪ್ಪು

ಲೆಕ್ಕ ಹಾಕಿರುವುದನ್ನು ತಿದ್ದಿಕೊಂಡರೆ 4X365X5000= ಎಪ್ಪತ್ತಮೂರು ಲಕ್ಷವಾಗುತ್ತದೆ. ಇದು ಜನರಲ್ಲಿ ಗಾಬರಿ ಹುಟ್ಟಿಸುವ ತಂತ್ರದ ಗಣಿತವಲ್ಲ. ಇಲ್ಲಿ ಇನ್ನೂ ಒಂದು ಅಂಶವಿದೆ. ಮೀಸಲಾತಿ ಪಡೆಯುವ ಎಷ್ಟೋ ಜನರು ಮತಾಂತರಗೊಂಡಿದ್ದರೂ ಸರಕಾರಿ ಲೆಕ್ಕದಲ್ಲಿ ಅದನ್ನು ನಮೂದಿಸುವುದಿಲ್ಲ. ಅದಕ್ಕೆ ಚರ್ಚಿನ ಅನುಮತಿಯೂ ಇರುತ್ತದೆ. ಹಿಂಸಾಮಾರ್ಗದಲ್ಲಿ ನನಗೂ ನಂಬಿಕೆ ಇಲ್ಲ. ಅದು ಸಮಸ್ಯೆಯನ್ನು ಬಗೆಹರಿಸುವ ಬದಲು ಜಟಿಲಗೊಳಿಸುತ್ತದೆ. ಆದರೆ ಜನರನ್ನು ವಾಸ್ತವಾಂಶಗಳಿಗೆ ಕಣ್ಣು ತೆರೆಸುವುದು ಹಿಂಸಾ ಮಾರ್ಗವಾಗುವುದಿಲ್ಲ ಎಂಬುದನ್ನು ನಾವು ಮರೆಯಬಾರದು.

ಇವು ಇಂದಿನ ಸತ್ಯಗಳಲ್ಲ: ಚರಿತ್ರೆಯ ವಾಸ್ತವಗಳು ಇಂದಿನ ಸತ್ಯಗಳಲ್ಲ. ಮಾಹಿತಿ ಎಂದರೆ facts ಎಂಬುದು ವಾಸ್ತವ ಸಂಗತಿಗಳು ಅಷ್ಟೆ. ಚರಿತ್ರೆಯಲ್ಲಿ ನಡೆದ ಘಟನೆಗಳು. ಆದರೆ ಸತ್ಯವೆಂದರೆ ಅದಲ್ಲ ಎಂಬ ಕಮ್ಯುನಿಸ್ಟರ ಜ್ಞಾನ ಮೀಮಾಂಸೆಯೂ ಈ ಸಂದರ್ಭ ದಲ್ಲಿ ಮುಂದೆ ಬಂದಿದೆ. ಔರಂಗ್‌ಜೇಬ್ ಅದೆಷ್ಟೋ (ವಿವರಗಳಿಗೆ ಭೈರಪ್ಪನವರ 'ಆವರಣ' ಓದಿ) ಮಂದಿರಗಳನ್ನು ಒಡೆದ, ಭಾರತದಲ್ಲಿ ಚತುರ, ಕ್ರೂರ ಮಾರ್ಗಗಳನ್ನು ಅನುಸರಿಸಿ ಕ್ರಿಸ್ತೀಕರಣಗೊಳಿಸಿದರು ಎಂಬುದೆಲ್ಲ ಮಾಹಿತಿಗಳು. ಆಕ್ರಮಣ ಮಾಡಿ ಬಂದವರು ಇಲ್ಲಿ ಕಳ್ಳೇಪುರಿ ತಿನ್ನಲಿಕ್ಕೆ ಬರುತ್ತಾರೇನು? ತಮ್ಮ ಧರ್ಮ ಪ್ರಚಾರ ಮಾಡ್ತಾರೆ. ಮಾರ್ಗ ಗಳು, ಎಂತಾದರೂ ಇರಲಿ, ಪರಧರ್ಮವನ್ನು ತುಳಿಯುತ್ತಾರೆ. ಎಲ್ಲ ಮಾರ್ಗಗಳಲ್ಲಿ 'ಸ್ವಮತ ಪ್ರತಿಪಾದನೆ, ಪರಮತ ಖಂಡನೆ ಎಂಬುದು ನಾವೇ ಆಚರಣೆಯಲ್ಲಿಟ್ಟ ಸಿದ್ಧಾಂತ ವಲ್ಲವೆ, ಎಂದೂ ಈ ಸಿದ್ಧಾಂತಿಗಳು ವಾದಿಸುತ್ತಾರೆ. ಆದರೆ ಇವರೇ ಉಲ್ಲೇಖಿಸಿದ 'ಆವರಣ' ಕಾದಂಬರಿಯ 205-206ನೇ ಪುಟಗಳನ್ನು ನೋಡಬೇಕು. 'ರಾಜನು ಬೇರೊಂದು ದೇಶವನ್ನು ಗೆದ್ದಾಗ ಅಲ್ಲಿ ಆ ಮುನ್ನ ಯಾವ ಆಚಾರ ಹಾಗೂ ವ್ಯವಹಾರಗಳಿ ದ್ದವೋ ಯಾವ ಕುಲ ಸ್ಥಿತಿ ಅಂದರೆ ಕುಟುಂಬ-ಸಮಾಜ ವ್ಯವಸ್ಥೆ ಇತ್ತೋ ಅವನ್ನು ಹಿಂದಿನಂತೆ ಪರಿಪಾಲಿಸಿಕೊಂಡು ಬರಬೇಕು.... ಗೆದ್ದ ಶತ್ರುಗಳನ್ನು ಅವನ ಸ್ಥಾನದಲ್ಲಿಯೇ ನಿಲ್ಲಿಸಿ ಕೇವಲ ತನ್ನ ಅಧಿಕಾರವನ್ನು ಸ್ಥಾಪಿಸುವವನು ಧರ್ಮ ವಿಜಯೀ ರಾಜ... ಶತ್ರುವನ್ನು ಕೊಂದು, ಅವನ ರಾಜ್ಯ ಮತ್ತು ಸಂಪತ್ತುಗಳನ್ನು ಕೊಳ್ಳೆ ಹೊಡೆಯುವವನು ಅಸುರ ವಿಜಯೀ ರಾಜ.... ಯುದ್ಧದಲ್ಲಿ ಸತ್ತ ವೈರಿ ರಾಜ ಅಥವಾ ಅವನ ನಿಕಟವರ್ತಿಗಳ ನೆಲ, ಹಣ, ಮಕ್ಕಳು, ಹೆಂಡಿರನ್ನು ವಶಪಡಿಸಿಕೊಳ್ಳಬಾರದು.... ಯುದ್ಧದಲ್ಲಿ ಸತ್ತವನ ಮಗನಿಗೇ ರಾಜ್ಯವನ್ನು ನೀಡಬೇಕು. ಸೋತ ರಾಜ್ಯದ ಜನರ ಸಂಸ್ಕೃತಿಗೆ ಯುಕ್ತವಾಗುವಂತೆ ಭಾಷೆ, ವೇಷ, ಆಚಾರಾದಿಗಳನ್ನು ಅಳವಡಿಸಿಕೊಳ್ಳಬೇಕು." ಯಾಜ್ಞವಲ್ಕ್ಯ ಸ್ಮೃತಿ, ಕಾಳಿದಾಸನ ರಘುವಂಶಮ್ ಮತ್ತು ಕೌಟಿಲ್ಯನ ಅರ್ಥಶಾಸ್ತ್ರಗಳ ಕೆಲವು ಆದೇಶಗಳನ್ನು ನಾನು ಸಂಸ್ಕೃತ ಮೂಲದೊಡನೆ 'ಆವರಣ'ದಲ್ಲಿ ಕೊಟ್ಟಿದ್ದೇನೆ. ಆಕ್ರಮಣ ಮಾಡಿ ಇಲ್ಲಿ ಕಳ್ಳೇಪುರಿ ತಿನ್ನಲಿಕ್ಕೆ ಬರುತ್ತಾರೇನು ಎಂಬ ಸಂಸ್ಕೃತಿಗಿಂತ ಭಿನ್ನವಾದ ಆದರ್ಶವು ಪ್ರಾಚೀನ ಕಾಲದಿಂದಲೂ ಈ ದೇಶದಲ್ಲಿತ್ತು. ಕೆಲವರು ಅದರ ಪಾಲನೆಯಲ್ಲಿ ಹಿಂದೆ

ಬಿದ್ದಿರಬಹುದು. ರಾಮಾಯಣ, ಮಹಾಭಾರತದಲ್ಲಿ ವರ್ಣಿತವಾಗಿರುವ ಯುದ್ಧ, ಯುದ್ಧ ಗಳ ಉದ್ದೇಶಗಳು ಈ ದೇಶದ ರಾಜನೀತಿಯ ಮಾದರಿಗಳಾಗಿದ್ದವು.

ಕಮ್ಯುನಿಸ್ಟ್ ಮತ್ತು ಸ್ಟಾಲಿನಿಷ್ಟರೊಡನೆ ಚರ್ಚೆಗೆ ಇಳಿಯುವುದಕ್ಕಿಂತ facts ಬೇರೆ, ಸತ್ಯವೇ ಬೇರೆ ಎಂಬ ಸಿದ್ಧಾಂತವನ್ನು ವಿಜ್ಞಾನಿಗಳ ವಿಮರ್ಶೆಗೆ ಒಪ್ಪಿಸುವುದು ಮೇಲು. Facts ಮಾಹಿತಿಯನ್ನು ಕಡೆಗಣಿಸಿ ಸಿದ್ಧಾಂತವನ್ನು ಮಂಡಿಸುವವನನ್ನು ಯಾರೂ ವಿಜ್ಞಾನಿ ಎಂದು ಪರಿಗಣಿಸುವುದಿಲ್ಲ. ವಿಜ್ಞಾನದ ಶೆ. 90 ಭಾಗ, ಅದಕ್ಕಿಂತ ಹೆಚ್ಚು, ಮಾಹಿತಿಯನ್ನು ಸಂಗ್ರಹಿಸುವುದೇ ಆಗಿದೆ. ಮಾಹಿತಿ ಸಂಗ್ರಹಣೆಯೂ ಹೆಚ್ಚು ಹೆಚ್ಚು ಸೂಕ್ಷ್ಮವೂ ಕೌಶಲ ಪೂರ್ಣವೂ, ವಿಶೇಷವಾಗಿ ತರಬೇತಿ ಪಡೆದವನಿಗೆ ಮಾತ್ರ ಸಾಧ್ಯವಾಗುವುದೂ ಆಗಿದೆ. ಯಾರೇ ಕಲ್ಪಿಸುವ ಅಥವಾ ಮಂಡಿಸುವ ಸಿದ್ಧಾಂತವು ಭವಿಷ್ಯ ದಲ್ಲಿ ಸಂಗ್ರಹಿಸುವ ಮಾಹಿತಿಗೆ ಅನುಗುಣವಾಗಿಲ್ಲದಿದ್ದರೆ ಅದು ತಿರಸ್ಕೃತವಾಗುತ್ತದೆ. ಸಿದ್ಧಾಂತವನ್ನು ಮೇಲುಗೈ ಮಾಡಿಕೊಂಡ ವಿಜ್ಞಾನದ ಗತಿಗೆ ಸ್ಟಾಲಿನ್ ಆಡಳಿತದಲ್ಲಿ ಸುಮಾರು ಇಪ್ಪತ್ತು ವರ್ಷ ಸೋವಿಯತ್ ಜೀವವಿಜ್ಞಾನಿಗಳನ್ನೆಲ್ಲ ಹುರಿದಿಟ್ಟಿದ್ದ ಲೈಸೆಂಕೋ ಒಂದು ಕುಪ್ರಸಿದ್ಧ ಉದಾಹರಣೆ. ತಳಿವಿಜ್ಞಾನದಲ್ಲಿ (Genetics) ಬೀಜವು ಪ್ರಧಾನವೋ ಮಣ್ಣು ಗೊಬ್ಬರ ಹವೆ ನೀರು ಮೊದಲಾದ ಪರಿಸರವು ಪ್ರಧಾನವೋ ಎಂಬ ಪ್ರಶ್ನೆಗೆ ಬೀಜವೂ ಪರಿಸರದಷ್ಟೇ ಪ್ರಮುಖವಾದುದು ಎಂದು ಹೇಳಿದ ವಿಜ್ಞಾನಿಗಳನ್ನೆಲ್ಲ ಲೈಸೆಂಕೋ ಸೆರೆಹಿಡಿಸಿ ಸೈಬೀರಿಯಾದ ಜೈಲಿಗೆ ಕಳಿಸಿದ. ಬೀಜವೂ ಮುಖ್ಯವೆನ್ನುವವರು ಬಂಡವಾಳ ಶಾಹಿ ಆಲೋಚನಾಪರವಾಗಿದ್ದು ಸೋವಿಯತ್ ಸಿದ್ಧಾಂತವನ್ನು ಬುಡಮೇಲು ಮಾಡುವ ಸಂಚುಕೋರರು ಎಂಬ ಅವನ ಆಪಾದನೆಯನ್ನು ಸೋವಿಯತ್ ಪೊಲೀಸರು, ನ್ಯಾಯಾಲಯಗಳು ಮತ್ತು ವ್ಯವಸ್ಥೆಯು ಮರುಮಾತಿಲ್ಲದೆ ಒಪ್ಪಿಕೊಂಡವು. ಇದು ಕಮ್ಯುನಿಸ್ಟ್ ಸಿದ್ಧಾಂತಕ್ಕೆ ಅನುಗುಣವಾದ ವ್ಯಾಖ್ಯಾನ. ನಿಕೋಲಾಯ್ ವಾವಿ ಲೋವ್ ಎಂಬ ಅಂತಾರಾಷ್ಟ್ರೀಯ ಖ್ಯಾತಿಯ ತಳಿಶಾಸ್ತ್ರ ವಿಜ್ಞಾನಿಯು ಜೈಲಿನಲ್ಲೇ ಸತ್ತ ವಿಜ್ಞಾನಿಗಳಲ್ಲಿ ಪ್ರಮುಖನು. ಎಂಥ ಬೀಜದಿಂದ ಬೇಕಾದರೂ ಉತ್ತಮ ಬೆಳೆ ತೆಗೆಯಬಹು ದೆಂಬ ಪ್ರಯೋಗದ ಪರಿಣಾಮವಾಗಿ ಇಡೀ ಸೋವಿಯತ್‌ನಲ್ಲಿ ಬರ ಬಂದು ಲಕ್ಷಾಂತರ ಜನರು ಸತ್ತರು. ಆದರೂ ಸ್ಟಾಲಿನ್ ಇರುವವರೆಗೆ ಈ ಸಿದ್ಧಾಂತವನ್ನು ಕೈಬಿಡಲಿಲ್ಲ.

ಭೌತವಿಜ್ಞಾನ, ಜೀವ ವಿಜ್ಞಾನ ಮೊದಲಾದ ಕ್ಷೇತ್ರಗಳಲ್ಲಿ ಮಾಹಿತಿಯನ್ನು ತುಳಿದು ವಿಜೃಂಭಿಸುವ ಸಿದ್ಧಾಂತದ ಅಬದ್ಧತೆಯು ಪ್ರಯೋಗದಿಂದ ಎದುರಾ ಎದುರಿಗೆ ಗೊತ್ತಾಗು ತ್ತದೆ. ಆದರೆ ಇತಿಹಾಸ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಸಾಹಿತ್ಯ ಮೊದಲಾದ ಮಾನವಿಕ ಗಳಲ್ಲಿ ಗೊಂದಲ ಮೂಡಿಸುವುದು ಸುಲಭ. ಔರಂಗ್‌ಜೇಬನು ದೇವಾಲಯಗಳನ್ನು ನಾಶ ಮಾಡಿರಬಹುದು; ಅದನ್ನು ಎತ್ತಿ ಹೇಳುವ ಇವರು ಅಸ್ಪೃಶ್ಯತೆಯನ್ನು ನಿವಾರಿಸಿದ್ದಾ ರೆಯೇ? ಎಂದು ಎಲ್ಲಿಂದ ಎಲ್ಲಿಗೋ ಗಂಟು ಹಾಕಿ ವಿಷಯಾಂತರ ಮಾಡುವುದು ಸುಲಭ ಏಕೆಂದರೆ ಇದು ಭಾವನಾತ್ಮಕ ವಿಚಾರ. ಮಾರ್ಕ್ಸ್‌ವಾದಿಗಳು ಮತ್ತು ಇತರ ರಾಜಕೀಯ

ಉದ್ದೇಶಗಳಿಂದ ಪ್ರೇರಿತರಾದವರು ಸೃಷ್ಟಿಸುವ, ಹಾಕುವ ಕುತಂತ್ರದ ತರ್ಕ, ದುಷ್ಟ ತರ್ಕ, ಪಟ್ಟು ದುಷ್ಟಪಟ್ಟುಗಳ ಒಂದು ಸಣ್ಣ ಉದಾಹರಣೆಯನ್ನು 20-10-08ರ ವಿಜಯ ಕರ್ನಾಟಕದಲ್ಲಿ ಪ್ರತಿಸ್ಪಂದಕರು ಕೊಟ್ಟಿದ್ದಾರೆ. ಅವರು ಕೂಡ Koenraad Elst@u Negationism in India ಎಂಬ ಗ್ರಂಥವನ್ನು ಉದ್ಧರಿಸಿದ್ದಾರೆ. ಈ ಗ್ರಂಥವನ್ನು (Voice of India, 2-18, Ansari Road, New Delhi-110002) ಓದುಗರು ಸಂಪೂರ್ಣವಾಗಿ ಓದಬೇಕು.

ನಾನು 1986ರಲ್ಲಿ ಗ್ರೀಸ್ ದೇಶದ ಪ್ರವಾಸ ಮಾಡಿದೆ. ನನ್ನ ಆತ್ಮಕಥೆ 'ಭಿತ್ತಿ'ಯಲ್ಲಿ ಬರೆದಿರುವ ಅದರ ಸಂಕ್ಷಿಪ್ತ ಕಥನವನ್ನು ಇಲ್ಲಿ ಉದ್ಧರಿಸುವುದು ಉಪಯುಕ್ತ. (ಪುಟ 551-552- ಐದನೆಯ ಮುದ್ರಣ-2007) 'ಪಾಶ್ಚಾತ್ಯ ನಾಗರಿಕತೆಯ ತೊಟ್ಟಿಲೆನಿಸಿದ ಆ ಪುಟ್ಟ ನಾಡು ಕೇವಲ ನಾನೂರು ವರ್ಷಗಳಿಗೂ ಕಡಿಮೆಯ ಕಿರು ಅವಧಿಯಲ್ಲಿ ತತ್ತ್ವಜ್ಞಾನ, ರಾಜಕಾರಣ, ಸಾಹಿತ್ಯ, ನಾಟಕ, ಭಾರೀ ರಂಗಭೂಮಿ, ಶಿಲ್ಪ, ವಾಸ್ತು, ಕ್ರೀಡೆ ಮೊದಲಾದವುಗಳಲ್ಲಿ ಸಾಧಿಸಿದ ಅದ್ಭುತಗಳು ನಾಗರಿಕತೆಯನ್ನು ಅಧ್ಯಯನ ಮಾಡುವ ಪ್ರತಿಯೊಬ್ಬರ ಹುಬ್ಬುಗಳನ್ನು ಮೇಲೇರಿಸುತ್ತವೆ.. ನಾನು ಅಲ್ಲಿಯ (ಅಥೆನ್ಸ್‌ನ) ಮ್ಯೂಸಿಯನಂನಲ್ಲಿ ಎರಡು ದಿವಸಗಳನ್ನು ಕಳೆದೆ. ಪ್ರಾಚೀನ ಗ್ರೀಸಿನ ಶಿಲ್ಪ ಕಲಾಕೃತಿಗಳಲ್ಲಿ ದೊರಕಿರುವಷ್ಟನ್ನು ಇಲ್ಲಿ ಸಂಗ್ರಹಿಸಿ ಸರಿಯಾದ ರೀತಿಯಲ್ಲಿ ದೊಡ್ಡ ಕಟ್ಟಡದಲ್ಲಿ ಇರಿಸಿದ್ದಾರೆ. ಕಲ್ಲಿನಲ್ಲಿ ಕೆತ್ತಿದ ಪ್ರತಿಯೊಂದು ವಿಗ್ರಹದ ಹತ್ತಿರವೂ ಗ್ರೀಕ್, ಇಂಗ್ಲಿಷ್ ಹೆಸರನ್ನು ಮತ್ತು ಇತರ ಪ್ರಮುಖ ಯುರೋಪಿಯನ್ ಭಾಷೆಗಳಲ್ಲಿ ಆ ವಿಗ್ರಹವು ಪ್ರತಿನಿಧಿಸುವ ಪುರಾಣಕಲ್ಪನೆಯನ್ನು (ಮಿಥ್) ಸಂಕ್ಷಿಪ್ತವಾಗಿ ವಿವರಿಸಿ, ಅದನ್ನು ಕೆತ್ತಿದ ಕಲಾವಿದ ಮತ್ತು ಕಾಲವನ್ನು ಬರೆದಿದ್ದಾರೆ. ಶಿಲ್ಪಿಗಳ ಕೌಶಲವಂತೂ ಬೆರಗುಗೊಳಿಸು-ವಂಥದು. ಅದಕ್ಕಿಂತ ಹೆಚ್ಚಾಗಿ ಇಷ್ಟು ಸಣ್ಣ ಅವಧಿಯಲ್ಲಿ, ಇಷ್ಟು ಸಣ್ಣ ಪ್ರದೇಶದ, ಇಷ್ಟು ಸಣ್ಣ ಸಂಖ್ಯೆಯ ಜನರು ಅದೆಷ್ಟು ಸಮೃದ್ಧವಾದ ಪುರಾಣ ಕಲ್ಪನೆಗಳನ್ನು ಸೃಷ್ಟಿಸಿದರು? ಎಂದು ನಾನು ನಿಬ್ಬೆರಗಾದೆ. ಪುರಾಣಕಲ್ಪನೆಗಳು ಮೊದಲಿನಿಂದ ಬಂದಿದ್ದರೂ ಅದು ತೀರ ಕಡಿಮೆ ಜನಸಂಖ್ಯೆಯ ಕಡಿಮೆ ವಿಸ್ತೀರ್ಣದ ದೇಶ ಎಂಬುದು ಅಲ್ಲಗಳೆಯುವ ಮಾತಲ್ಲ. ಅವುಗಳನ್ನು ನೋಡ ನೋಡುತ್ತಾ ನನಗೆ ಭಾರತದ ಶಿಲ್ಪಕಲೆಗಳ ನೆನಪಾಯಿತು. ಸಮೃದ್ಧ ಪುರಾಣ ಕಲ್ಪನೆಗಳಿಲ್ಲದಿದ್ದರೆ ನಮ್ಮ ದೇಶದ ಶಿಲ್ಪಕಲೆಯೂ ಹೀಗೆ ವಿಜೃಂಭಿಸು-ತ್ತಿರಲಿಲ್ಲ ಎಂಬುದು ಸ್ಪಷ್ಟವಾಯಿತು. ಎರಡನೆಯ ದಿನದ ಮಧ್ಯಾಹ್ನಾನಂತರ ಮ್ಯೂಸಿಯಂನ ಕ್ಯೂರೇಟ್‌ರ್‌ನನ್ನು ಭೇಟಿಯಾಗಿ ಕೆಲವು ಪ್ರಶ್ನೆಗಳ ನಂತರ ಒಂದು ಮಾತನ್ನು ಕೇಳಿದೆ: 'ಇಷ್ಟು ಅದ್ಭುತವಾಗಿ ಎಲ್ಲ ಮುಖಗಳಲ್ಲೂ ಅರಳಿದ ಗ್ರೀಕ್ ಸಂಸ್ಕೃತಿಯು ಇದ್ದಕ್ಕಿದ್ದಂತೆಯೇ ಬತ್ತಿಹೋಯಿತು. ಆನಂತರದ ದೀರ್ಘ ಇತಿಹಾಸದಲ್ಲಿ ಮತ್ತೆ ಒಮ್ಮೆಯೂ ಗ್ರೀಕ್ ಪ್ರತಿಭೆ ಹೊಮ್ಮಲೇ ಇಲ್ಲ. ಇದರ ಕಾರಣವೇನು?'

'ಮನುಷ್ಯನ ಪ್ರತಿಭೆಗೆ ಸಂಬಂಧಿಸಿ ಕಾರ್ಯ-ಕಾರಣಗಳನ್ನು ಹೇಳುವುದು ಕಷ್ಟ.

ಆದರೆ ಒಂದು ಮಾತು ಸ್ಪಷ್ಟ. ರೋಮನ್ನರು ಸೈನ್ಯಶಕ್ತಿಯಿಂದ ನಮ್ಮನ್ನು ಗೆದ್ದರೂ ಸಾಂಸ್ಕೃತಿಕವಾಗಿ ನಮ್ಮನ್ನು ತುಳಿಯಲಾಗಲಿಲ್ಲ. ನಮ್ಮ ಸೃಜನಶೀಲತೆ ಸತ್ತು ಹೋದದ್ದು ಕ್ರೈಸ್ತಧರ್ಮದಿಂದ. ಆ ಧರ್ಮದ ಪುರಾಣಕಲ್ಪನೆಗಳನ್ನು ಮಾತ್ರ ನಂಬಬೇಕು, ಉಳಿದವು ಗಳನ್ನು ನಂಬಕೂಡದು, ಹೊಸ ಪುರಾಣ ಕಲ್ಪನೆಗಳನ್ನು ಸೃಷ್ಟಿಸುವುದು ಅಪರಾಧ ಎಂಬ ಕಟ್ಟುಪಾಡು ಹಾಕಿ ನಮ್ಮ ಜನರ ಸೃಜನಶಕ್ತಿಯನ್ನೇ ತುಳಿದುಬಿಟ್ಟರು. ನೀವು ಯೂರೋಪಿನ ಪ್ರಮುಖ ಮ್ಯೂಸಿಯಂಗಳನ್ನು ನೋಡಿದ್ದೀರಿ. ಆಧುನಿಕ ಯುಗ ಆರಂಭ ವಾಗುವವರೆಗಿನ ಎಲ್ಲ ಸೃಷ್ಟಿಗಳು ಕ್ರೈಸ್ತ ನಂಬಿಕೆಗಳ ಏಕತಾನಗಳೇ. ಬೇಸರ ಹುಟ್ಟಿಸುವಂಥ ಏಕತಾನತೆ, ಅಲ್ಪಾವಧಿಯ ಗ್ರೀಸ್‌ನ ಪ್ರತಿಭೆ ಎಷ್ಟು ವೈವಿಧ್ಯವನ್ನು ಸೃಷ್ಟಿಸಿತು! ನಾನು ನಿಮ್ಮ ದೇಶವನ್ನು ನೋಡಿದ್ದೀನಿ. ಪ್ರಮುಖ ಹಳೆಯ, ಹೊಸ ದೇವಾಲಯಗಳನ್ನೆಲ್ಲ ನೋಡಿದ್ದೀನಿ. ಸನಾತನ, ಬೌದ್ಧ, ಜೈನ ಪರಂಪರೆಗಳ ಪುರಾಣ ಕಲ್ಪನೆಗಳ ವೈವಿಧ್ಯವನ್ನು ಗಮನಿಸಿದೀನಿ. ಕ್ರೈಸ್ತ ಧರ್ಮ ಅವುಚಿಕೊಳ್ಳದಿದ್ದರೆ ಗ್ರೀಸ್ ದೇಶವು ಭಾರತವನ್ನು ಮೀರಿಸುವಷ್ಟನ್ನು ಸೃಷ್ಟಿಸಿಬಿಡುತ್ತಿತ್ತೇನೋ! ಭಾರತದಲ್ಲಿಯಂತೆ ನಮ್ಮ ಮತ ಧರ್ಮವೂ ಪ್ರಾಚೀನ ಪುರಾಣಗಳ ಆವಿಷ್ಕರಣ, ಪುನರಾವಿಷ್ಕರಣಗಳಿಂದ ರೂಪ ತಾಳುತ್ತಿತ್ತೇನೋ! ಹಳೆಯದನ್ನು ತಿರಸ್ಕರಿಸಿ ಹೊಸದನ್ನು ಸೃಷ್ಟಿಸುವ ಮೂಲಕ ಪರಂಪರೆಯನ್ನು ಇನ್ನಷ್ಟು ಶ್ರೀಮಂತಗೊಳಿಸುತ್ತಿತ್ತೇನೋ! ಒಟ್ಟಿನಲ್ಲಿ ಗ್ರೀಸಿನ ಸೃಜನಶೀಲತೆಯು ನಾಶವಾದದ್ದು ಕ್ರೈಸ್ತ ಚರ್ಚಿನಿಂದ, ಬುದ್ಧಿ-ಮನಸ್ಸುಗಳ ಸ್ವಾತಂತ್ರ್ಯ ಹರಣದಿಂದ.'

**ಸ್ಥಳೀಯ ಸಂಸ್ಕೃತಿಗಳು ನಾಶ:**

ಕ್ರೈಸ್ತ ಮತವು ವಿಸ್ತರಿಸಿದ ಪ್ರದೇಶಗಳಲ್ಲೆಲ್ಲ ಹೇಗೆ ಸ್ಥಳೀಯ ಸಂಸ್ಕೃತಿಯು ನಾಶವಾಗಿರುವುದು ಮಾತ್ರವಲ್ಲದೆ ಹೊಸ ಸಂಸ್ಕೃತಿಯು ಬೆಳೆಯಲು ಅವಕಾಶವಾಗಿಲ್ಲ ವೆಂಬುದಕ್ಕೆ ಡಾ. ನವರತ್ನ ರಾಜಾರಾಮರು ಸಂಪೂರ್ಣವಾದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಭಾರತವು ಇಡಿಯಾಗಿ ಅಥವಾ ಪ್ರಧಾನವಾಗಿ ಕ್ರೈಸ್ತ ಅಥವಾ ಮುಸ್ಲಿಂ ರಾಷ್ಟ್ರವಾದರೆ ನಮ್ಮ ಸಂಸ್ಕೃತಿಗೆ ಏನಾಗಬಹುದೆಂದು ಕಲ್ಪಿಸಿಕೊಳ್ಳೋಣ. ಈ ಎರಡು ಸೆಮೆಟಿಕ್ ಮತಗಳೂ ಒಂದೊಂದು ಸಾಂಸ್ಕೃತಿಕ ಸಾಮ್ರಾಜ್ಯಶಾಹಿ ವಿಸ್ತರಣೆಗಳು. ಅನ್ವರ್‌ಶೇಕ್ ಎಂಬ ಸ್ವತಃ ಮುಸ್ಲಿಮರೇ ಆದ ಒಬ್ಬ ವಿದ್ವಾಂಸರು Islam: The Arab Imperialism ಎಂಬ ಗ್ರಂಥದಲ್ಲಿ (The Principality Publishers, p.o. box 918, Cardiff, Great Britain, CF5 2NL, 1998) ಪ್ರವಾದಿ ಮುಹಮ್ಮದರ ಮೂಲ ಉದ್ದೇಶವಿದ್ದದ್ದೇ ಅರಬ್ ಆಳ್ವಿಕೆ, ದೇವರು ಮತ್ತು ಜೀವನ ವಿಧಾನಗಳನ್ನು ಇತರ ಜನಾಂಗಗಳ ಮೇಲೆ ಹೇರುವುದಾಗಿತ್ತು ಎಂದು ಹೇರಳವಾದ ಉದಾಹರಣೆಗಳಿಂದ ಸ್ಥಾಪಿಸುತ್ತಾರೆ. ಪ್ರಪಂಚದ ಯಾವುದೇ ಭಾಗದ ಯಾವುದೇ ಮೂಲ ಸಂಸ್ಕೃತಿಯ, ಯಾವುದೇ ಭಾಷೆಯ ಜನರಾದರೂ ಇಸ್ಲಾಮಿಗೆ ಪರಿವರ್ತಿತರಾದರೆ ಅವರ ಹೆಸರು

ಅರೇಬಿಕ್ ಆಗಲೇಬೇಕು: ಅವರ ಪ್ರಾರ್ಥನೆ ಕುರಾನಿನ ಅರೇಬಿಕ್ ಮಾತ್ರವೇ ಆಗಬೇಕು; ಮದುವೆ, ಸಂಸಾರ, ಆಸ್ತಿ ವಿಂಗಡಣೆ, ದಾಂಪತ್ಯದ ನಿಯಮಗಳು, ಇತರ ಮತಗಳೊಡನೆಯ ಸಂಬಂಧ ಮೊದಲಾದವುಗಳೆಲ್ಲ ಅರೇಬಿಕ್ ಸಂಪ್ರದಾಯಕ್ಕೆ ತಕ್ಕಂತೆಯೇ ಆಗಬೇಕು. ಆ ದೇಶದ ಕಡೆಗೆ ಮುಖ ಮಾಡಿಯೇ (ಕಿಬ್ಲಾ) ಪ್ರಾರ್ಥನೆ ಮಾಡಬೇಕು. ಸಂಗೀತ, ಸಾಹಿತ್ಯ, ಶಿಲ್ಪ, ವಾಸ್ತುಗಳೆಲ್ಲ ಕುರಾನ್ ನಿಯಮಗಳಂತೆಯೇ ಇರಬೇಕು. ಇದು ಕೇವಲ ಮತವ್ವೋ? ಅರೇಬಿಕ್ ಸಂಸ್ಕೃತಿಯ ಆಧಿಪತ್ಯವ್ವೋ? ಎಂದು ಅನ್ವರ್‌ಶೇಕ್ ಪ್ರಶ್ನಿಸುತ್ತಾರೆ.

ಇಡೀ ಭಾರತವು ಮುಸ್ಲಿಂ ಆದರೆ ನಮ್ಮ ಸಂಗೀತ ಉಳಿಯುತ್ತದೆಯೇ? ಹಿಂದೂಸ್ಥಾನೀ ಸಂಗೀತ ಪದ್ಧತಿಯಲ್ಲಿ ಎಷ್ಟೋ ಜನ ಮುಸ್ಲಿಂ ಉಸ್ತಾದರುಗಳು ಇರಲಿಲ್ಲವೆ? ಈಗಲೂ ಇಲ್ಲವೆ? ಎಂದು ಪ್ರತಿಯಾಗಿ ಕೇಳಬಹುದು.... ಆದರೆ ಅವರಲ್ಲಿ ಬಹುಭಾಗ ಜನರು ಮುಸ್ಲಿಂ ಆಳ್ವಿಕೆಯಲ್ಲಿ ಭಯದ ಒತ್ತಡಕ್ಕೆ ಸಿಲುಕಿ ಮತಾಂತರಗೊಂಡವರು ಅಥವಾ ಅವರ ವಂಶಜರು. ಹಿಂದೂ ಶ್ರೋತೃಗಳು ಬಹು ಸಂಖ್ಯೆಯಲ್ಲಿ ಇರುವುದರಿಂದ ಅವರು ಇನ್ನೂ ಭಾರತದಲ್ಲಿ ಉಸ್ತಾದರಾಗಿದ್ದಾರೆ. ಅದೇ ಪಾಕಿಸ್ತಾನದಲ್ಲಿ ಈಗ ಶಾಸ್ತ್ರೀಯ ಸಂಗೀತಕ್ಕೆ ಉಳಿಗಾಲವಿಲ್ಲ. ಈ ದೇಶ ವಿಭಜಿತವಾದಾಗ ಪಾಕಿಸ್ತಾನಕ್ಕೆ ಹೋದ ಸಲಾಮತ್ ಅಲಿ ಮತ್ತು ನಜಾಕತ್ ಅಲಿಯವರು ಅಲ್ಲಿ ಪಟ್ಟ ಪಾಡು ಸರ್ವವಿದಿತ. ಏಕೆಂದರೆ ಇಸ್ಲಾಮಿನಲ್ಲಿ ಸಂಗೀತವು ನಿಷಿದ್ಧ. ಉತ್ತರ ಭಾರತದಲ್ಲಿ ಸಂಗೀತದ ಆಸಕ್ತಿಯಾಗಲಿ, ಗಂಧವಾಗಲಿ ಇಲ್ಲದವನನ್ನು ಔರಂಗ್‌ಜೇಬನ ಕಿವಿಯವನು ಎನ್ನುತ್ತಾರೆ. ಏಕೆಂದರೆ ಔರಂಗ್‌ಜೇಬ್ ಶುದ್ಧ ಮುಸ್ಲಿಮನಾಗಿ ಬಾಳಿ. ಇಸ್ಲಾಂ ತತ್ತ್ವಗಳನ್ನು ಕಾಯೇನ ವಾಚಾ ಮನಸಾ ಪ್ರವರ್ತಿಸಿದವನು. ಇನ್ನು ಶಿಲ್ಪಕಲೆಯಂತೂ ಇಸ್ಲಾಮಿನಲ್ಲಿ ಅಷ್ಟೇ ನಿಷಿದ್ಧ. ಇಸ್ಲಾಂ ತತ್ತ್ವದಿಂದ ತುಸುವಾದರೂ ಅತ್ತಿತ್ತ ಸರಿಯುವ ಸಾಹಿತಿಗಂತೂ ಶಿರಚ್ಛೇದನದ ಫತ್ವಾ ಕಟ್ಟಿಟ್ಟಿದ್ದು. ಇನ್ನು ನಮ್ಮ ಮೂಲ ಸಂಸ್ಕೃತಿ ಬೆಳೆಯುವುದು ಹೇಗೆ?

ಭಾರತವು ಇಡಿಯಾಗಿ ಅಥವಾ ಪ್ರಧಾನವಾಗಿ ಕ್ರೈಸ್ತವಾದರೆ ಇದಕ್ಕಿಂತ ಭಿನ್ನವಾಗುವುದಿಲ್ಲ. ರೋಮಿನ ಅಥವಾ ಬೈಬಲ್‌ಜನ್ಯ ಹೆಸರುಗಳು, ಅವರ ಕೌಟುಂಬಿಕ ನಿಯಮಗಳು, ಅವರ ಮಿಥ್‌ಗಳು, ಸಂಪೂರ್ಣವಾಗಿ ಮಧ್ಯಯುಗ ಯೂರೋಪಿನ ಎಂದರೆ ಚರ್ಚಿನ ಸಾಂಸ್ಕೃತಿಕ ಆಧಿಪತ್ಯ. ಜೇಸುದಾಸನಿಲ್ಲವೆ, ಕ್ರೈಸ್ತನಾದರೂ ತ್ಯಾಗರಾಜ ಕೀರ್ತನೆ ಹಾಡುವವನು ಎಂದು ಕೆಲವರು ಆಕ್ಷೇಪ ಎತ್ತಬಹುದು. ಕರ್ನಾಟಕ ಸಂಗೀತವು ಪ್ರಚಲಿತವಾಗಿರುವ ಪ್ರದೇಶದಲ್ಲಿ ಹುಟ್ಟಿ ಬೆಳೆದ ಸಂಗೀತದ ಪ್ರತಿಭೆಯ ಅನನು ತ್ಯಾಗರಾಜ ಕೃತಿಯನ್ನು ಬಿಟ್ಟು ಸಂಗೀತಗಾರನಾಗುವುದು ಹೇಗೆ? ಇಂಥ ಒಂದು ಅಪರೂಪದ ಉದಾಹರಣೆಯು ವ್ಯಾಪಕ ಸತ್ಯವನ್ನು ಅಲ್ಲಗಳೆಯುವುದಿಲ್ಲ. ಇಸ್ಲಾಮಿನಲ್ಲಿ ತಬ್ಲೀಘ್ ಎಂಬ ಚಳವಳಿಯು ಎಲ್ಲೆಲ್ಲಿಯೂ ಬಿರುಸಿನಿಂದ ನಡೆಯುತ್ತಿದೆ.

ಪ್ರತಿಯೊಂದು ಮನೆಯಲ್ಲಿಯೂ ಇಸ್ಲಾಂ ನಡೆ, ನುಡಿ-ಕಟ್ಟಳೆಗಳನ್ನು ಎಂದರೆ

ಅರಬ್ ರೀತಿ-ನೀತಿಗಳನ್ನು ಅನುಸರಿಸುವಂತೆ ಒತ್ತಡ ಹೇರುವುದು ಈ ಚಳವಳಿಯ ಗುರಿ. ಭಾರತದಲ್ಲಿ ಮುಸ್ಲಿಂ ಗಂಡಸರೆಲ್ಲ, ಕಿರು ವಯಸ್ಸಿನ ಯುವಕರೂ ಸೇರಿ, ಆಧುನಿಕ ಫ್ಯಾಶನ್‌ನಂತೆ ಕಾಣಲೊಲ್ಲರೇಕೆ? ಗಡ್ಡ ಬಿಡುತ್ತಿರುವುದು, ಅವರ ಪೈಜಾಮ, ಶರಟುಗಳ ಶೈಲಿ, ಹೆಣ್ಣು ಮಕ್ಕಳು ಕೂಡ ತಲೆಗೆ ಚೌಕ ಕಟ್ಟುವುದು, ಇರಾನ್ ಅಥವಾ ಅರೇಬಿಕ್ ಶೈಲಿಯಲ್ಲೇ ಮನೆಯ ವಾಸ್ತು, ಗೋಡೆಗಳಿಗೆ ಹಸಿರು ಬಣ್ಣ, ಇಂಗ್ಲಿಷ್ ಅಕ್ಷರವಾದರೂ ಅರೇಬಿಕ್‌ನಂತೆ ಕಾಣುವ ರೀತಿಯಲ್ಲಿ ಬೋರ್ಡ್ ಬರೆಯುವುದು ಇವುಗಳೆಲ್ಲ ಅರಬ್ಬೀಕರಣ ವಲ್ಲವೆ? ಕ್ರೈಸ್ತ ಕಾನ್ವೆಂಟುಗಳಲ್ಲಿ ಹೆಣ್ಣು ಮಕ್ಕಳಿಗೆ ಕುಂಕುಮವನ್ನು ನಿಷೇಧಿಸುವುದು ಕೇವಲ ಹಿಂದೂ ಧರ್ಮದ ವಿರುದ್ಧ ಅಸಹಿಷ್ಣುತೆಯಲ್ಲ; ಸಾಂಸ್ಕೃತಿಕ ಕ್ರಿಸ್ತೀಕರಣ. ಒಮ್ಮೆ ನನ್ನ ಮನೆಗೆ ಕಾಲೇಜಿನ ಉಪನ್ಯಾಸಕರಾಗಿದ್ದ ಒಬ್ಬ ಮುಸ್ಲಿಂ ತನ್ನ ಹೆಂಡತಿಯೊಡನೆ ಬಂದಿದ್ದರು. ನನ್ನ ಹೆಂಡತಿ ಆಕೆಗೆ ವೀಳ್ಯದೆಲೆ, ತೆಂಗಿನಕಾಯಿ ಹೂವು, ರವಿಕೆ ಖಣಗಳನ್ನು ಕೊಟ್ಟಳು. ಆಕೆ ಸಂತೋಷದಿಂದ ಅವುಗಳನ್ನು ಎತ್ತಿಕೊಳ್ಳುತ್ತಿದ್ದಾಗ ಈಕೆ ಹಿಂದೂ ಪದ್ಧತಿಯಂತೆ ಬೆಳ್ಳಿ ಬಟ್ಟಲಿನಿಂದ ಕುಂಕುಮ ತೆಗೆದು ಆಕೆಯ ಹಣೆಗೆ ಇಟ್ಟುಬಿಟ್ಟಳು. ಆಕೆಯ ಮುಖ ತಕ್ಷಣ ಬೆವರಿ ಒದ್ದೆಯಾಯಿತು. ಆಕೆ ಒಂದು ಕ್ಷಣ ದಿಙ್ಮೂಢೆಯಾದಳು. ತಕ್ಷಣ ಕೈಲಿದ್ದ ತೆಂಗಿನಕಾಯಿ ವೀಳ್ಯದೆಲೆ ರವಿಕೆ ಖಣಗಳನ್ನು ತನ್ನ ತೊಡೆಯ ಮೇಲಕ್ಕೆ ಬಿಸುಟು ಬಲಗೈಯಿಂದ ಹಣೆಯ ಕುಂಕುಮವನ್ನು ಒರೆಸಿಕೊಂಡಳು. ಅನಂತರ ಸೀರೆಯ ಸೆರಗಿನಿಂದ ಉಜ್ಜಿಕೊಂಡಳು. ಯಾಕಿದು? ಕುಂಕುಮವಿಡಬಾರದೆಂದು ಕುರಾನಿನಲ್ಲಿ ಹೇಳಿದೆಯೆ? ಪದ್ಧತಿಯೇ ಇಲ್ಲದ ಆ ದೇಶದ ಆ ಕಾಲದಲ್ಲಿ ನಿಷೇಧಿಸುವ ಪ್ರಶ್ನೆ ಇರಲಿಲ್ಲ. ಆದರೆ ಈ ದೇಶದ ಈ ಕಾಲದಲ್ಲಿ ನಾನು ನಿಮಗಿಂತ ಬೇರೆ ಎಂದು ಪ್ರತಿಯೊಂದು ವಿವರದಲ್ಲೂ ತೋರಿಸಿಕೊಳ್ಳುವ ಪ್ರವೃತ್ತಿ ಎದ್ದು ಬೆಳೆಯುತ್ತಿರುವಾಗ ಸಾಂಸ್ಕೃತಿಕ ಸಾಮರಸ್ಯ ಬೆಳೆಯುವುದು ಹೇಗೆ?

'ನೀವು ಹೇಳುವ ಸಂಸ್ಕೃತಿ ಎನ್ನುವುದೆಲ್ಲ ಮೇಲು ಜಾತಿಯದು. ವೈದಿಕರದು ಹೆಚ್ಚೆಂದರೆ ಶೇ. ಹತ್ತು ಜನರದ್ದು. ಬಹುಸಂಖ್ಯಾತರಾದ ನಮ್ಮ ಶೂದ್ರ ಸಂಸ್ಕೃತಿಯು ಸಂಪೂರ್ಣವಾಗಿ ಬೇರೆಯೇ' ಎಂದು ಹೊಸ ವಾದ ಹೂಡುವ ಒಂದು ಗುಂಪನ್ನು ಬ್ರಿಟಿಷರೂ, ಮಿಷನರಿಗಳ ಸೃಷ್ಟಿಸಿದರು. ಅದಕ್ಕೆ ಪೂರಕವಾದ ಇತಿಹಾಸ ಮತ್ತು ಸಮಾಜಶಾಸ್ತ್ರಗಳನ್ನೂ ಅವರು ಸೃಷ್ಟಿಸಿದರು. ಹಳ್ಳಿಯಲ್ಲೇ ಹುಟ್ಟಿ ಬೆಳೆದ, ನೂರಾರು ಹಳ್ಳಿಗಳಲ್ಲಿ ಸುತ್ತಾಡಿ ಎಲ್ಲ ಜಾತಿಗಳಲ್ಲಿಯೂ ಊಟ ಮಾಡಿ ಅವರ ಕಟ್ಟು ಕಟ್ಟಳೆಗಳನ್ನು ಚಿಕ್ಕ ವಯಸ್ಸಿನಲ್ಲೇ ಕಂಡು ತಿಳಿದ ನನಗೆ ಬ್ರಾಹ್ಮಣ ಮತ್ತು ಶೂದ್ರರೆಂಬ ಮೂಲಭೂತ ವಾದ ಭಿನ್ನ ಸಂಸ್ಕೃತಿಗಳು ಕಾಣಿಸುವುದಿಲ್ಲ. ಶೂದ್ರರೆಂದು ಕರೆಯುವ ಸಂಸ್ಕೃತಿಯ ಬಹುತೇಕ ಅಂಶಗಳು ಬ್ರಾಹ್ಮಣರೆಂದು ಕರೆಯುವ ಸಂಸ್ಕೃತಿಯಲ್ಲೂ, ಬ್ರಾಹ್ಮಣರೆಂದು ಕರೆಯುವ ಸಂಸ್ಕೃತಿಯ ಮುಖ್ಯ ತತ್ತ್ವಗಳು ಶೂದ್ರವೆಂದು ಕರೆಯುವ ಸಂಸ್ಕೃತಿಯಲ್ಲೂ ಇವೆ. ಬ್ರಿಟಿಷರು ಹುಟ್ಟು ಹಾಕಿದ ಆರ್ಯ-ದ್ರಾವಿಡ ಜಗಳದಿಂದ ಹುಟ್ಟಿದುದು.

ಬ್ರಾಹ್ಮಣ, ಶೂದ್ರ ಜಗಳ, ಇದು ಬರೀ ಶಾಸ್ತ್ರಗಳಿಗೆ ಸಂಬಂಧಿಸಿದುದಲ್ಲ. ಜಾನಪದಕ್ಕೂ ಶಿಷ್ಟಕ್ಕೂ ಇರುವ ಸಂಬಂಧವೇ ಇಲ್ಲಿ ಇರುವುದು. ಗಾಯನ, ನೃತ್ಯ, ನಾಟಕ, ಕ್ರೀಡೆ, ಅಡಿಗೆ, ಊಟ, ರಥೋತ್ಸವ, ಮದುವೆ, ಶೋಭನ ಹೀಗೆ ಜೀವನದ ಎಲ್ಲ ಬಗೆಯ ಕಾರ್ಯಗಳಲ್ಲಿಯೂ ಜಾನಪದವೆಂಬ ದೇಸೀ ರೂಪವೂ ಮಾರ್ಗವೆಂಬ 'ಶಿಷ್ಟ' ರೂಪವೂ ಇದ್ದೇ ಇವೆ.

ಜಾನಪದದಿಂದ ಮಾರ್ಗವು ಹುಟ್ಟಿ ಪರಿಣತಿ ಪಡೆಯಿತು. ಈ ಪರಿಣತಿಯಿಂದ ಜಾನಪದವು ಪ್ರಭಾವಗೊಂಡಿತು. ಕೆಲವು ಮಾರ್ಗಿಗಳು ಜಾನಪದವೆಂದರೆ ಕುಹಕ ಮಾಡಬಹುದು. ಅದು ಅವರ ಅಲ್ಪಮತಿಯನ್ನು ತೋರಿಸುತ್ತದೆ ಅಷ್ಟೆ. ಇಡೀ ಸಮಾಜಕ್ಕೆ ಕುತ್ತು ಬಂದಿರುವಾಗ ಶೂದ್ರವೈದಿಕತೆಯ ಒಳ ಜಗಳ ತೆಗೆದು ಮುಳುಗಿಸುವ ಅವಿವೇಕಕ್ಕೆ ವಿದ್ವಾಂತರೆನಿಸಿಕೊಳ್ಳುವವರು ಸಮಾಜವನ್ನು ಒಡ್ಡಬಾರದು. ಹಾಗೆಯೇ ಜೈನ, ಬೌದ್ಧ, ಸಿಖ್, ವೀರಶೈವ ಮೊದಲಾದ ಪಂಥಗಳನ್ನು ಹಿಂದೂಗಳೇ ಅಲ್ಲವೆಂಬ ವಾದವನ್ನು ಸೃಷ್ಟಿಸಿ ಇವರೆಲ್ಲ ಮಾಡಿದುದು ಮತಾಂತರವಲ್ಲವೇ? ಎಂಬ ಅಡ್ಡ ವಾದವನ್ನು ಮುಂದೊಡ್ಡುವುದು ಅವ್ಯೆಚಾರಿಕವಾಗುತ್ತದೆ. ಕೆಲವು ವರ್ಷಗಳ ಹಿಂದೆ ವೀರಶೈವರು ಹಿಂದೂಗಳೇ ಅಲ್ಲವೆಂಬ ವಾದವನ್ನು ಕೆಲವರು ಹುಟ್ಟು ಹಾಕಿ ವೀರಶೈವ ವಿದ್ವಾಂಸರು ಮತ್ತು ಮಠಗಳು ಅದನ್ನು ಖಂಡಿಸಿದ ಮೇಲೆ ತೆಪ್ಪಗಾದದ್ದನ್ನು ನಾವು ನೆನೆಯಬೇಕು. ಉಪನಿಷತ್ ಎಂಬುದು ಒಬ್ಬ ಋಷಿಯು ಪ್ರತಿಪಾದಿಸಿದ ತತ್ತ್ವವಲ್ಲ. ಅದೊಂದು ಯುಗ. ಕಾಲಾವಧಿ. ಆಗ ನೂರಾರು ಅನ್ವೇಷಕರು, ಸಾಧಕರು, ಚಿಂತಕರು, ಆಧ್ಯಾತ್ಮಿಕ ಸತ್ಯವನ್ನು ಹುಡುಕುತ್ತಿದ್ದರು. ಅವರಲ್ಲಿ ಬುದ್ಧ, ಮಹಾವೀರರೂ ಪ್ರಮುಖರು. ವೇದಗಳ ಪ್ರಧಾನ ಆಚರಣೆಗಳಿಗೆ ಭಿನ್ನವಾದ, ತಮ್ಮಿಬ್ಬರಲ್ಲೇ ಪರಸ್ಪರ ಭಿನ್ನವಾದ ತತ್ತ್ವಗಳನ್ನು ಇವರು ಕಂಡುಕೊಂಡರು, ಪ್ರತಿಪಾದಿಸಿದರು. ಆನಂತರದ ಕಾಲದಲ್ಲಿ ಈ ತತ್ತ್ವಗಳು ಪ್ರಭಾವಶಾಲಿಯಾಗಿ ಬೆಳೆದು ವಿಸ್ತರಿಸಿದವು. ಹಾಗೆಂದು ಅವುಗಳಲ್ಲಿ ಉಪನಿಷತ್ ಯುಗದ ಇತರ ತತ್ತ್ವಗಳ ಯಾವ ಅಂಶಗಳೂ ಇಲ್ಲ. ಇವು ಸಂಪೂರ್ಣವಾಗಿ ಭಿನ್ನವಾದವುಗಳು. ಶೂನ್ಯದಿಂದ ಹುಟ್ಟಿದವು ಎಂದು ಹೇಳಲಾದೀತೆ? ಉಪನಿಷತ್ತಿನದೇ ಒಂದಂಶವಾದ ಜೀವನದ ಅನಿತ್ಯತೆಗೆ ಬುದ್ಧನು ಹೆಚ್ಚು ಒತ್ತು ಕೊಟ್ಟ. ಇತರ ಅನಾವಶ್ಯಕ ಚರ್ಚೆಗಳು ಬೇಡವೆಂದ. ಇತರ ಉಪನಿಷತ್ತುಗಳಲ್ಲಿದ್ದ ಅಹಿಂಸಾತತ್ತ್ವವನ್ನು ಜೈನರು ಒತ್ತಿ ಹೇಳಿದರು. ಆನಂತರ ಈ ತತ್ತ್ವಗಳೇ ತರ್ಕಬದ್ಧವಾದ ವಾದಗಳಾಗಿ ಬೆಳೆದವು.

**ಬೆಳವಣಿಗೆ ಆಗುವುದೇ ಹೀಗೆ:**

ದರ್ಶನಶಾಸ್ತ್ರಗಳ ಬೆಳವಣಿಗೆ ಆಗುವುದೇ ಹೀಗೆ. ನಮ್ಮ ಇತಿಹಾಸದಲ್ಲಿ ಜೈನರಾದ ವೈದಿಕರಿಗೇನೂ ಕಡಿಮೆ ಇಲ್ಲ. ಬೌದ್ಧರಾದ ವೈದಿಕರಿಗೂ ಕಡಿಮೆ ಇಲ್ಲ. ಬೌದ್ಧರ ಪ್ರಬುದ್ಧ ಯುಗದಲ್ಲಿ ಅಶ್ವಘೋಷ, ನಾಗಾರ್ಜುನ, ವಸುಬಂಧು, ಅಸಂಗ, ದಿಙ್ನಾಗ ಮೊದಲಾದ ವೈದಿಕರು ಬೌದ್ಧರಾದದ್ದು ಭಾರತೀಯ ತತ್ತ್ವಶಾಸ್ತ್ರದ ಅಭ್ಯಾಸಿಗಳಿಗೆಲ್ಲ

ಗೊತ್ತಿರುವ ಸಂಗತಿ. 'ವಾಕ್ಯಪದೀಯ'ವನ್ನು ಬರೆದ ಭರ್ತೃಹರಿಯು ಏಳು ಸಲ ಬೌದ್ಧನಾಗಿ ಏಳು ಸಲ ಬ್ರಾಹ್ಮಣಮತಕ್ಕೆ ಹಿಂತಿರುಗಿದುದು ಎಲ್ಲರಿಗೂ ಗೊತ್ತಿರುವ ಘಟನೆ. ಆಗ ಪರಿವರ್ತನೆಗೆ ಈಗಿನಷ್ಟು ರಾಜಕೀಯ ನೂಕಾಟವಿರಲಿಲ್ಲ. ಶಾಸ್ತ್ರಾರ್ಥ, ವಾಕ್ಯಾರ್ಥಗಳಲ್ಲಿ ಸೋತ ಎಷ್ಟೋ ಜನರು ಗೆದ್ದವನ ಮತಕ್ಕೆ ಸೇರಬೇಕೆಂಬ ಪಂಥವಿಟ್ಟು ಭಾಗವಹಿಸುತ್ತಿದ್ದರು. ಇಂಥ ಚರ್ಚೆಗಳು ಹಲವು ದಿವಸಗಳು, ವಾರಗಳೇ ನಡೆಯುತ್ತಿದ್ದವು. ಅವೆಲ್ಲ ವಿದ್ವತ್ ಗೋಷ್ಠಿಗಳಾಗಿರುತ್ತಿದ್ದವು. ಅವು ಬೌದ್ಧಿಕವಾಗಿ ಮುಕ್ತವಾದ ಧರ್ಮಸಭೆಗಳು. ಕದ್ದು ಅವಿದ್ಯಾವಂತ ಬಡವರಿಗೆ ತಮ್ಮ ಏಸುವಿನ ಮಹಿಮೆಯ ಆಸೆ ತೋರಿಸುವ ಮಿಷನರಿಗಳು ಇಂಥ ವಿದ್ವತ್‌ಗೋಷ್ಠಿಯನ್ನೇರ್ಪಡಿಸಿ ಕ್ರೈಸ್ತಧರ್ಮ, ಚರ್ಚುಗಳ ಇತಿಹಾಸವನ್ನು ತಿಳಿದಿರುವ ಹಿಂದೂ ವಿದ್ವಾಂಸರನ್ನು ಆಹ್ವಾನಿಸುತ್ತಾರೆಯೇ?

ಭಾರತ ದೇಶದಲ್ಲಿ ಜನಿಸಿದ ಎಲ್ಲ ಮತಗಳೂ ಒಂದೇ ಸಂಸ್ಕೃತಿಯ ಬೇರೆ ಬೇರೆ ಮುಖಗಳು. ಬುದ್ಧನನ್ನು ವೈದಿಕರು ಒಂದು ಅವತಾರವೆಂದೇ ಒಪ್ಪಿಕೊಂಡರು. ಶ್ರವಣ ಬೆಳಗೊಳಕ್ಕೆ ಹೋಗುವ ಪ್ರತಿಯೊಂದು ಜಾತಿ, ಮತಗಳವರೂ ಪೂಜೆ ಮಾಡಿಸುತ್ತಾರೆ. ಧರ್ಮಸ್ಥಳದ ಮಂಜುನಾಥ ಮಂದಿರದ ಧರ್ಮಾಧಿಕಾರಿ ಜೈನರು. ಮೊದಲಿನಿಂದಲೂ ಇವರಲ್ಲಿ ಕೊಟ್ಟು ತರುವ ಸಂಪ್ರದಾಯವಿತ್ತು. ವಾದವೂ ಆಗುತ್ತಿತ್ತು. ವಾಗ್ವಾದವೂ ಆಗುತ್ತಿತ್ತು. ಇವರಿಂದ ಭಾರತೀಯ ಶಿಲ್ಪ, ವಾಸ್ತು, ಸಾಹಿತ್ಯ, ನಾಟಕ, ಸಂಗೀತ, ಅಧ್ಯಾತ್ಮ, ತರ್ಕ, ಮೊದಲಾದ ಸಂಸ್ಕೃತಿಯ ವಿವಿಧ ಅಭಿವ್ಯಕ್ತಿಗಳು ಪರಸ್ಪರ ಕೊಡುಕೊಳ್ಳುವಿಕೆಯಿಂದ, ಕ್ರಿಯೆ ಪ್ರತಿಕ್ರಿಯೆಗಳಿಂದ ಬೆಳೆಯಿತು. ಬೇರೆ ಸಂಸ್ಕೃತಿಗಳನ್ನು ನಾಶ ಮಾಡುವುದನ್ನೇ ಮೂಲ ಮಂತ್ರವಾಗುಳ್ಳ ಸೆಮಿಟಿಕ್ ಮತಗಳ ಮತಾಂತರವನ್ನು ಭಾರತೀಯ ಕುಟುಂಬದ ಬೇರೆ ಬೇರೆ ಶಾಖೆಗಳಲ್ಲಿ ಪರಸ್ಪರ ನಡೆಯುತ್ತಿದ್ದ, ಈಗಲೂ ನಡೆಯಬೇಕಾದ ಪರಿವರ್ತನೆ ಗಳೊಡನೆ ಸಮೀಕರಿಸುವುದು ದುರುದ್ದೇಶಪೂರಿತ ವಾದ.

ಗಾಂಧಿ, ವಿವೇಕಾನಂದ ಮತ್ತು ಮಾಸ್ತಿ ಮೊದಲಾದವರು ತಮ್ಮ ಗ್ರಂಥಗಳಲ್ಲಿ ಹಿಂದೂ ಮತದಲ್ಲಿರುವ ಹಲವು ತಪ್ಪು ಆಚರಣೆಗಳನ್ನು ತೀಕ್ಷ್ಣವಾಗಿ ವಿಮರ್ಶಿಸಿದ್ದಾರೆ. ಅದರ ಜತೆಗೆ ಮತಾಂತರವನ್ನು ಅದಕ್ಕಿಂತ ಹೆಚ್ಚು ತೀಕ್ಷ್ಣವಾಗಿ ಖಂಡಿಸಿದ್ದಾರೆ. ತಮಗೆ ಅನುಕೂಲಕರ ಭಾಗಗಳನ್ನು ಎತ್ತಿಕೊಂಡು ಹಿಂದೂ ಧರ್ಮವನ್ನು ನಿಂದಿಸುವುದೊಂದೇ ಅವರ ವಿಚಾರವಾಗಿತ್ತು ಎಂದು ವಾದಿಸುವ ವಕೀಲರನ್ನು ಏನೆನ್ನಬೇಕು? ನಮ್ಮ ದೇಶದ ಪ್ರತಿಯೊಬ್ಬ ಸುಧಾರಕರೂ ಮೊದಲು ಸ್ವಮತವನ್ನು ವಿಮರ್ಶಿಸಿದ್ದಾರೆ. ಜತೆ ಜತೆಗೇ ತಮ್ಮ ಮತವನ್ನು ಆಕ್ರಮಿಸುವ ಪರಮತವನ್ನು ವಿಮರ್ಶಿಸಿ ಅದರ ಹುಳುಕನ್ನು ಎತ್ತಿ ತೋರಿಸಿದ್ದಾರೆ. ಮತಾಂತರವನ್ನು ಖಂಡಿಸಿದ್ದಾರೆ.



## ಈ ಲೇಖಕರ ಕುರಿತು

**ಎಸ್.ಎಲ್. ಭೈರಪ್ಪ:** ತತ್ವಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದಿರುವ ಭೈರಪ್ಪನವರು ಹಲವು ಕಾಲೇಜುಗಳಲ್ಲಿ ಪ್ರೊಫೆಸರ್‌ರಾಗಿ ನಿವೃತ್ತರಾದವರು. ಕನ್ನಡದ ಅತ್ಯಂತ ಜನಪ್ರಿಯ ಕಾದಂಬರಿಕಾರರಾದ ಅವರು ಕೆಲವು ಸಾಹಿತ್ಯ ಚಿಂತನ ಕೃತಿಗಳನ್ನೂ ಹೊರತಂದಿದ್ದಾರೆ. ಅವರ ಕೃತಿಗಳು ಭಾರತದಲ್ಲಿಯಂತೆ ಹೊರ ದೇಶಗಳಲ್ಲಿ ಕೂಡ ವ್ಯಾಪಕ ಓದುಗರನ್ನು ಪಡೆದಿವೆ. ವ್ಯಾಪಕ ಓದುಗರನ್ನು ಪಡೆದಿರುವ ಅವರ ಕೃತಿಗಳು ಹಲವಾರು ಭಾರತೀಯ ಭಾಷೆಗಳಿಗೆ ಅನುವಾದವಾಗಿ ಭಾರತದ ಆಧುನಿಕ ಕಾಲದ ಪ್ರಸಿದ್ಧ ಬರಹಗಾರರಾಗಿ ಅವರು ಗುರುತಿಸಲ್ಪಟ್ಟಿದ್ದಾರೆ. ಸುಮಾರು ಇಪ್ಪತ್ತು ಕಾದಂಬರಿಗಳನ್ನು ಬರೆದಿದ್ದಾರೆ. ವಸ್ತು, ರಚನೆ ಮತ್ತು ಪಾತ್ರಗಳಿಂದಾಗಿ ಅವುಗಳು ವಿಶಿಷ್ಟವೆನಿಸಿವೆ. *ಧರ್ಮಶ್ರೀ, ದಾಟು, ಪರ್ವ, ವಂಶವೃಕ್ಷ, ತಬ್ಬಲಿಯು ನೀನಾದೆ ಮಗನೆ, ಮತದಾನ* ಮತ್ತು *ನಾಯಿ ನೆರಳು* ಇವು ಅವರ ಪ್ರಸಿದ್ಧ ಕಾದಂಬರಿಗಳಲ್ಲಿ ಹಲವು.

**ನವರತ್ನ ಎಸ್. ರಾಜಾರಾಂ :** ಗಣಿತ ವಿಜ್ಞಾನಿಯಾಗಿರುವ ಡಾ. ನವರತ್ನ ಎಸ್. ರಾಜಾರಾಂ ಅವರು ಸುಮಾರು ಇಪ್ಪತ್ತು ವರ್ಷಗಳ ಕಾಲ ಅಮೆರಿಕದಲ್ಲಿ ಶಿಕ್ಷಣ ಮತ್ತು ಕೈಗಾರಿಕೆ ಕ್ಷೇತ್ರಗಳಲ್ಲಿ ಸಂಶೋಧಕರಾಗಿದ್ದವರು. ನಂತರ, ತಮ್ಮ ಗಮನವನ್ನು ಇತಿಹಾಸ ಮತ್ತು ವಿಜ್ಞಾನದ ಚರಿತ್ರೆಗಳತ್ತ ಹೊರಳಿಸಿಕೊಂಡವರು. *ಸರಸ್ವತಿ ನದಿ ಮತ್ತು ಸಿಂಧೂ ನಾಗರೀಕತೆ* ಹಾಗೂ *ಸಿಂಧೂ ಲಿಪಿಯ ಗೂಢಾರ್ಥ* (ಎನ್. ಝಾ. ಅವರೊಂದಿಗೆ) ಎಂಬ ಕೃತಿಗಳು ಸನಾತನ ಭಾರತದ ಕುರಿತಾದ ಅವರ ಹಲವಾರು ಗ್ರಂಥಗಳಲ್ಲಿ ಕೆಲವು. ಇಸ್ಲಾಂ ಮತ್ತು ಕ್ರೈಸ್ತ ಮತಗಳ ಕುರಿತು ತುಂಬ ಆಳವಾದ ಅಧ್ಯಯನ ಅವರದ್ದು. (ಉದಾ.: *The Dead Sea Scrolls and the Crisis of Christianity* ಗ್ರಂಥ) ಈ ವಿಷಯಗಳ ಕುರಿತು ಗಂಭೀರ ಅಭ್ಯಾಸ ಮಾಡಿದ ಜಗತ್ತಿನ ಕೆಲವೇ ಲೇಖಕರುಗಳಲ್ಲಿ ಇವರೊಬ್ಬರು.

**ಎಂ. ಚಿದಾನಂದಮೂರ್ತಿ** : ಸಾಹಿತ್ಯದಲ್ಲಿ ಡಾಕ್ಟರೇಟ್ ಪದವಿಯೊಂದಿಗೆ ಕನ್ನಡದ ಪಾಂಡಿತ್ಯ ವಲಯದಲ್ಲಿ ದೊಡ್ಡ ಹೆಸರನ್ನು ಹೊಂದಿರುವ ಎಂ. ಚಿದಾನಂದಮೂರ್ತಿ ಅವರು ಕರ್ನಾಟಕದ ಇತಿಹಾಸ ಮತ್ತು ಪರಂಪರೆಗಳ ಸಮಗ್ರ ಅರಿವಿನೊಂದಿಗೆ ಕನ್ನಡ ಚಳುವಳಿಯ ನೇತಾರರಾಗಿರುವವರು. ಕನ್ನಡ ಸಂಸ್ಕೃತಿ, ಸಮಾಜ ಮತ್ತು ಇತಿಹಾಸಗಳ ಕುರಿತಾಗಿ ಸಾಕಷ್ಟು ಸಂಶೋಧನ ಲೇಖನಗಳನ್ನೂ ಗ್ರಂಥಗಳನ್ನೂ ಡಾ. ಚಿದಾನಂದಮೂರ್ತಿಯವರು ಪ್ರಕಟಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ. ಪಂಪ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿಗಳೂ ಅಲ್ಲದೆ ಹಲವಾರು ಗೌರವಗಳಿಗೆ ಅವರು ಭಾಜನರಾಗಿದ್ದಾರೆ.

**ಅಜಕ್ಕಳ ಗಿರೀಶ ಭಟ್** : ಕನ್ನಡ ಮತ್ತು ಇಂಗ್ಲೀಷ್‌ಗಳಲ್ಲಿ ಸ್ನಾತಕೋತ್ತರ ಹಾಗೂ ಡಾಕ್ಟರೇಟ್ ಪದವಿ ಪಡೆದ ಅಜಕ್ಕಳ ಗಿರೀಶ ಭಟ್ ಅವರು ದಕ್ಷಿಣ ಕನ್ನಡ ವಿಟ್ಲದ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿ ನಿರತರು. *ಇಂಗ್ಲೀಷನ್ನು ಪಳಗಿಸೋಣ* ಹಾಗೂ *ಬುದ್ಧಿಜೀವಿ ವರ್ಸಸ್ ಬೌದ್ಧಿಕ ಸ್ವಾತಂತ್ರ್ಯ* ಕೃತಿಗಳ ಮೂಲಕ ತಾವೊಬ್ಬ ಗಂಭೀರ ಬರಹಗಾರರೂ ಚಿಂತಕರೂ ಎಂದು ಈಗಾಗಲೇ ಹೆಸರಾಗಿದ್ದಾರೆ.

**ಪಿ.ಪಿ. ಹೆಗಡೆ** : ಮಂಗಳೂರು ವಿಶ್ವವಿದ್ಯಾಲಯದಿಂದ ೧೯೬೩ರಲ್ಲಿ ಕಾನೂನು ಪದವಿ ಪರೀಕ್ಷೆಯಲ್ಲಿ ಚಿನ್ನದ ಪದಕ ಗಳಿಸಿ ಇದೀಗ, ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ವೃತ್ತಿ ನಿರತರು. ಕರ್ನಾಟಕ ಬಾರ್ ಕೌನ್ಸಿಲ್ ಸದಸ್ಯರಾಗಿರುವ ಅವರು KCCR Law Journal ನ ಸಂಪಾದಕರೂ ಕೂಡ.

**ಶತಾವಧಾನಿ ಆರ್. ಗಣೇಶ** : ಮೆಕ್ಯಾನಿಕಲ್ ಇಂಜಿನಿಯರಿಂಗ್ ಮತ್ತು ಸಾಹಿತ್ಯದಲ್ಲಿ ಡಾಕ್ಟರೇಟ್ ಮಾಡಿದ ಆರ್. ಗಣೇಶ ಅವರು ಇಂದಿರಾಗಾಂಧಿ ರಾಷ್ಟ್ರೀಯ ಕಲಾ ಕೇಂದ್ರದಲ್ಲಿ ಸಂಶೋಧನಾ ಅಧಿಕಾರಿಗಳಾಗಿ ವೃತ್ತಿ ನಿರತರು. ವಿಜ್ಞಾನ, ತಂತ್ರಜ್ಞಾನ, ಭಾರತೀಯ ವಿಜ್ಞಾನ, ಪುರಾತನ ಭಾರತೀಯ ತಂತ್ರಜ್ಞಾನ, ಸಂಸ್ಕೃತ ಸಾಹಿತ್ಯ, ಛಂದಃಶಾಸ್ತ್ರ, ಕಾವ್ಯ ಮೀಮಾಂಸೆ, ಇತಿಹಾಸ, ತತ್ತ್ವಶಾಸ್ತ್ರ, ವೇದ, ಧರ್ಮಶಾಸ್ತ್ರ, ಸಂಗೀತ, ನಾಟ್ಯ, ಶಿಲ್ಪಕಲೆ ಮುಂತಾದ ವಿಷಯಗಳ ಕುರಿತು ನೂರೈವತ್ತಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ. ಶತಾವಧಾನ ಕಲೆಯನ್ನು ಮತ್ತೆ ಪ್ರಚುರಗೊಳಿಸಿದ್ದರಿಂದಲೇ ಅವರು ಶತಾವಧಾನಿಗಳೆಂದು ಹೆಸರಾಗಿದ್ದಾರೆ. ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತಗಳಲ್ಲಿ ಹಲವಾರು ಕೃತಿಗಳನ್ನು ಇವರು ಬರೆದಿದ್ದಾರೆ.

**ಸ್ವಾಮಿ ದಯಾನಂದ ಸರಸ್ವತಿ** : ಹಿಂದೂ ಸಾಧು ಪರಂಪರೆಯ ಸಂನ್ಯಾಸಿಗಳಿವರು. *ಅದ್ವೈತ ವೇದಾಂತ*ದಲ್ಲಿ ಹೆಸರು ಮಾಡಿರುವ ಗುರುಗಳು. ತಮಿಳುನಾಡಿನ ತಂಜಾವೂರು ಜಿಲ್ಲೆಯಲ್ಲಿ ಜನಿಸಿದ ಇವರು ಸ್ವಾಮಿ ಚಿನ್ಮಯಾನಂದರ ಭಾಷಣಗಳಿಂದ ಪ್ರಭಾವಿತರಾಗಿ ವೇದಾಂತೆಡೆ ಆಕರ್ಷಿತರಾದವರು. ೧೯೬೨ರಲ್ಲಿ ಸಂನ್ಯಾಸ ದೀಕ್ಷೆ ಪಡೆದು, ದೇಶ

ವಿದೇಶಗಳಲ್ಲಿ ವೇದಾಂತ ಶಿಕ್ಷಣ ನೀಡುತ್ತಿದ್ದಾರೆ. ೧೯೮೬ರಲ್ಲಿ ಅವರು ಸ್ಥಾಪಿಸಿದ ಆರ್ಷ ವಿದ್ಯಾ ಗುರುಕುಲವು ಅದ್ವೈತ ವೇದಾಂತ, ಯೋಗ, ಆಯುರ್ವೇದ, ಜ್ಯೋತಿಷ, ಸಂಸ್ಕೃತ ಮತ್ತಿತರ ಹಿಂದೂ ಶಾಸ್ತ್ರಗಳ ಪಾರಂಪರಿಕ ಶಿಕ್ಷಣ ಕೇಂದ್ರವಾಗಿದೆ. ಈ ಗುರುಕುಲವು ಭಾರತ ಮತ್ತು ಅಮೇರಿಕಗಳಲ್ಲಿ ಶಾಖೆಗಳನ್ನು ಹೊಂದಿದೆ.

ಸುಮತೀಂದ್ರ ನಾಡಿಗ : ಭಾರತದ ಹನ್ನೆರಡು ಭಾಷೆಗಳಲ್ಲಿ ಅನುವಾದವಾಗಿರುವ ನಾಡಿಗರ *ದಾಂಪತ್ಯಗೀತೆ* ಮತ್ತು ಭಾರತದ ಪ್ರಸಿದ್ಧ ಲೇಖಕರೂ ಸಂಸ್ಕೃತ ವಿದ್ವಾಂಸರೂ ಮೆಚ್ಚಿಕೊಂಡಿರುವ *ಪಂಚಭೂತಗಳು* ಆಧುನಿಕ ಭಾಷೆಯ ಸಾಹಿತ್ಯಕ್ಕೆ ಕೊಟ್ಟಿರುವ ಬಹಳ ಮುಖ್ಯವಾದ ಅನನ್ಯ ಕೃತಿಗಳೆಂದು ಮಾನ್ಯತೆ ಪಡೆದಿವೆ. ಬೇಂದ್ರೆ, ಅಡಿಗ ಮತ್ತು ಕೆ.ಎಸ್. ನರಸಿಂಹಸ್ವಾಮಿಯವರ ಕಾವ್ಯದ ಬಗ್ಗೆ ನಾಡಿಗರ ವಿಮರ್ಶಾ ಗ್ರಂಥಗಳು ಬಹಳ ಮುಖ್ಯವಾದ ಅವರ ಕೊಡುಗೆಗಳಾಗಿವೆ.

ಡಾ. ಎಸ್.ಆರ್. ಲೀಲಾ : ಬಿಎಸ್ಸಿ, ಎಂಎ, ಎಂಫಿಲ್, ಪಿಎಚ್‌ಡಿ ಹೀಗೆಲ್ಲ ಪದವಿಗಳನ್ನು ಪಡೆದಿರುವ ಲೀಲಾ ಅವರು ಕರ್ನಾಟಕ ವಿಧಾನಸಭೆಯ ಸದಸ್ಯರು. ಎನ್‌ಎಂಕೆ ಆರ್ ವಿ ಕಾಲೇಜಿನಲ್ಲಿ ಸಂಸ್ಕೃತದ ಪ್ರೊಫೆಸರ್ ಹಾಗೂ ವಿಭಾಗದ ಮುಖ್ಯಸ್ಥರಾಗಿ ನಿವೃತ್ತರು. ಅಭಿನಯ ಭಾರತಿಯ ವ್ಯವಸ್ಥಾಪಕ ಟ್ರಸ್ಟಿಗಳು ಕೂಡ.

ಎಂ. ಶ್ರೀನಿವಾಸಮೂರ್ತಿ : ಬಿಎಸ್ಸಿ ಹಾಗೂ ಪತ್ರಿಕೋದ್ಯಮ ಡಿಪ್ಲೊಮಾ ಪಡೆದಿರುವ ಶ್ರೀನಿವಾಸಮೂರ್ತಿಯವರು ಅಂಕಣಕಾರರು. ರಕ್ಷಣಾ ಇಲಾಖೆಯ ನಿವೃತ್ತ ಅಧಿಕಾರಿಗಳು.

ಸಚ್ಚಿದಾನಂದ ಹೆಗಡೆ: ಬಿ.ಕಾಂ. ಪದವಿ ಹಾಗೂ ಪತ್ರಿಕೋದ್ಯಮದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ಪಡೆದಿದ್ದಾರೆ. *ಧ್ಯೇಯನಿಷ್ಠ ಪತ್ರಕರ್ತ*ದ ಸಂಪಾದಕರಾಗಿರುವ ಸಚ್ಚಿದಾನಂದ ಹೆಗಡೆ ಅವರು ಪತ್ರಿಕೋದ್ಯಮದಲ್ಲಿ ಇಪ್ಪತ್ತೆಂಟು ವರ್ಷಗಳ ಅನುಭವ. ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ಮುಖ್ಯ ಬಾತ್ಮಿದಾರರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಡೇವಿಡ್ ಫ್ರಾಲಿ: ಡೇವಿಡ್ ಫ್ರಾಲಿ (ವಾಮದೇವ ಶಾಸ್ತ್ರಿ) ಅವರು ಅಮೇರಿಕದ ವಿಸ್ಕಾನ್‌ಸಿನ್‌ನ ಲಾ ಕ್ರಾಸಿ ಎಂಬಲ್ಲಿ ಕ್ಯಾಥೋಲಿಕ್ ಕುಟುಂಬದಲ್ಲಿ 1950ರಲ್ಲಿ ಜನಿಸಿದರು. ಹಿಂದುತ್ವ, ಯೋಗ ಮತ್ತು ಆಯುರ್ವೇದ ಮತ್ತು ನಾನು ಹೇಗೆ ಹಿಂದುವಾದೆ ಎಂಬ ಎರಡು ಪುಸ್ತಕಗಳನ್ನು ಬರೆದಿದ್ದಾರೆ.

ಹಿಂದುತ್ವ, ಯೋಗ ಮತ್ತು ಆಯುರ್ವೇದ ಕುರಿತು ತರಬೇತಿ ಶಿಬಿರಗಳನ್ನು ಏರ್ಪಡಿಸುವ, ನ್ಯೂ ಮೆಕ್ಸಿಕೋದ ಸಾಂಟಾ ಫೇಯಲ್ಲಿರುವ ಅಮೇರಿಕದ ವೇದಾಧ್ಯಯನ ಸಂಸ್ಥೆಯ ಸ್ಥಾಪಕ ನಿರ್ದೇಶಕ ಮತ್ತು ಅಂತಾರಾಷ್ಟ್ರೀಯ ವೇದಿಕ್ ಹಿಂದೂ ವಿಶ್ವವಿದ್ಯಾಲಯದಲ್ಲಿ ವೇದಿಕ್, ಜ್ಯೋತಿಷ್ಯಶಾಸ್ತ್ರ ಮತ್ತು ಆಯುರ್ವೇದ ವಿಷಯಗಳ ಪ್ರೊಫೆಸರ್.

ಪ್ರಧಾನ್ ಗುರುದತ್ತ : ಇವರು ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರು. ಇದೀಗ ಕುವೆಂಪು ಭಾಷಾ ಭಾರತಿಯ ಅಧ್ಯಕ್ಷರಾಗಿದ್ದಾರೆ. ಇಂಗ್ಲಿಷ್, ಹಿಂದಿ ಮತ್ತು ಕನ್ನಡಗಳಲ್ಲಿ ನೂರೈವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಸೇರಿದಂತೆ ಹಲವಾರು ಗೌರವಗಳಿಗೆ ಇವರು ಭಾಜನರಾಗಿದ್ದಾರೆ. ಸೃಜನಶೀಲ ಲೇಖಕರೂ ಆಗಿ ಕಾವ್ಯಮೀಮಾಂಸೆ, ವಿಮರ್ಶೆ, ಅನುವಾದ ಈ ಕ್ಷೇತ್ರಗಳಲ್ಲಿ ವಿಶೇಷ ಕೆಲಸ ಮಾಡಿದ್ದಾರೆ.



## ಮುಖಪುಟದ ಛಾಯಾಚಿತ್ರವು

ಕಾಂಬೋಡಿಯ ದೇಶದ ಅಂಗ್‌ಕಾರ್‌ವಾಟ್‌ನಲ್ಲಿರುವ ವಿಷ್ಣು ದೇವಾಲಯದ್ದು. ಖೈಮರ್ ಅಥವಾ ಕಾಂಬೋಜ ಸಮ್ರಾಜ್ಯದ ರಾಜಧಾನಿ ಆಗಿದ್ದುದ್ದೇ ಈ ಅಂಗ್‌ಕಾರ್‌ವಾಟ್. ಖ್ಯಾತ ಇತಿಹಾಸ ತಜ್ಞ ವಿಲ್ ಡ್ಯುರಾಂಟ್ ಅವರು ಈ ದೇವಾಲಯವನ್ನು ವರ್ಣಿಸಿರುವುದನ್ನೇ ನೋಡಿ: ಈ ಸಮುಚ್ಚಯ ಕೃತಿಯು ಅತ್ಯಂತ ಸುಂದರವಾಗಿ ಈಜಿಪ್ಟಿಯನ್ನರ ಹಾಗೂ ಗ್ರೀಕರ ವಾಸ್ತುಶಿಲ್ಪಗಳ ಮಹತ್ಸಾಧನೆಗಳಿಗೆ ಸಮವೆನಿಸಿದೆ. (ನಾಗರಿಕತೆಯ ಕಥೆ ಸಂ.1)

ಈ ದೇವಾಲಯದ ನಿರ್ಮಾತೃ ಯಾರು, ನಿರ್ಮಾಣ ಆದುದೆಂದು ಎಂಬ ಪ್ರಶ್ನೆಗಳಿಗೆ ಉತ್ತರ ದೊರಕಿಲ್ಲ. ಫಿಲಿಪ್‌ರಾಸನ್ ಅವರು ತಮ್ಮ 'ಆಗ್ನೇಯ ಏಷ್ಯದ ಕಲಾವೈಭವ' ಎಂಬ ಕೃತಿಯಲ್ಲಿ ಹೇಳುವ ಮಾತುಗಳನ್ನೇ ನೋಡಿ: ಭಾರತೀಯ ಸಂಸ್ಕೃತಿಯು ಜಗತ್ತಿನ ನಾಗರಿಕತೆಯ ಅತ್ಯಂತ ಪ್ರಬಲ ಶಕ್ತಿ, ಚೀನಾ, ಕೊರಿಯಾ, ಜಪಾನ್, ಟಿಬೆಟ್ ಮತ್ತು ಮಂಗೋಲಿಯಾ ದೇಶಗಳನ್ನೊಳಗೊಂಡಂತೆ ಪೌರ್ವಾತ್ಯ ದೇಶಗಳ ಸಂಸ್ಕೃತಿಗಳಲ್ಲಿರುವ ಶ್ರೇಷ್ಠವಾದುವುಗಳೆಲ್ಲ ಭಾರತದಿಂದ ಆಮದು ಮಾಡಿಕೊಂಡ ಸ್ಫೂರ್ತಿ ಮೂಲಗಳ ಋಣದಲ್ಲಿರುವಂಥವೆ. ಪಶ್ಚಿಮ ದೇಶಗಳೂ ಕೂಡ ಭಾರತದ ಋಣದಲ್ಲಿರುವಂಥವೆ... ಆದರೆ ಬರ್ಮಾದ ಆಚೆಗಿನ ಸಿಯಾಂ ಖಾರಿ ಮತ್ತು ಜಾವಾ ಸಮುದ್ರದ ಸುತ್ತ ಹರಡಿದ ನಾಗರಿಕತೆಗಳ ಅಸ್ತಿತ್ವವೇ ಭಾರತೀಯ ವಿಚಾರಧಾರೆಯ ಸೃಜನಶೀಲ ಪ್ರಭಾವಕ್ಕೊಳಗಾದುದು... ಆಕ್ರಮಣವಿಲ್ಲ, ಗೆಲುವೆಂಬುದಿಲ್ಲ; ಬಲಾತ್ಕಾರದ ಮತಾಂತರವಿಲ್ಲ, ತಮಗೆದುರಾದ ಜನ ಒಳ್ಳೆಯವರಿದ್ದರು, ಉಪಕಾರಿಗಳಾಗಿದ್ದರೆಂಬ ಕಾರಣಕ್ಕಾಗಿ ಅವರನ್ನು ಸ್ವೀಕರಿಸಿದರು... ಅವರ ಜೀವನ ರೀತಿ, ಕಾನೂನು ಮತ್ತು ರಾಜ್ಯಭಾರದೆಡೆಗಿನ ಅವರ ದೃಷ್ಟಿ, ಅವರ ಶ್ರೀಮಂತ ಸಾಹಿತ್ಯ ಮತ್ತು ಬದುಕಿನೆಡೆಗಿನ ಉನ್ನತ ತಾತ್ವಿಕ ನಿಲುವು.....

**ಬೆಲೆ: ರೂ. 100/-**